# ಶ್ರೀ ಏಕನಾಥ ಭಾಗವತದ
# ಜೀವಾಳ

ಅನುವಾದಕರು

ಸೌ. ಕಾಂತಾ ಅನಂತರಾವ ಯರಗುದ್ದಿ

ಪ್ರಕಾಶಕರು

ಗುರು ಬಂಧುಗಳು, ಸದ್ಗುರು ಮಂದಿರ

ವಾಠಾರ ರೇಲ್ವೆಸ್ಟೇಶನ್

ಜಿ. ಸಾತಾರಾ (ಮಹಾರಾಷ್ಟ್ರ)

# ಶ್ರೀ ಏಕನಾಥ ಭಾಗವತದ ಜೀವಾಳ

(ಮರಾಠೀ ಏಕನಾಥಿ ಭಾಗವತದ ಮುಖ್ಯಾಂಶಗಳ ಅನುವಾದ)

ಅನುವಾದಕರು

**ಸೌ. ಕಾಂತಾ ಅನಂತರಾವ ಯರಗುದ್ದಿ**

ಪ್ರಕಾಶಕರು

ಗುರು ಬಂಧುಗಳು, ಸದ್ಗುರು ಮಂದಿರ

ವಾಠಾರ ರೇಲ್ವೆ ಸ್ಟೇಶನ್

ಜಿ ಸಾತಾರಾ (ಮಹಾರಾಷ್ಟ್ರ)

# ಶ್ರೀ ಏಕನಾಥ ಭಾಗವತದ ಜೀವಾಳ

(ಮರಾಠೀ ಏಕನಾಥಿ ಭಾಗವತದ ಮುಖ್ಯಾಂಶಗಳ ಅನುವಾದ)

ಅನುವಾದಕರು
ಸೌ ಕಾಂತಾ ಅನಂತರಾವ ಯರಗುದ್ದಿ

ಪ್ರಕಾಶಕರು
ಗುರು ಬಂಧುಗಳು ಸದ್ಗುರು ಮಂದಿರ
ವಾರಾರ ರೇಲ್ವೆ ಸ್ಟೇಶನ್
ಜಿ ಸಾತಾರಾ
(ಮಹಾರಾಷ್ಟ್ರ)



ಬೆಲೆ ೨೦-೦೦

ಪ್ರತಿಗಳು ೧೦೦೦

ಪುಟಗಳು 32+೧೬೬

ಪ್ರಕಾಶನದ ತಾ ೧೭-೧೨-೯೪

ಮುದ್ರಣ
ಪ ಶಿ ಅವರ ತ್ವರಿತ ಮುದ್ರಣಾಲಯ
ಕುಂಬಾರಗರಡಿ ಹತ್ತಿರ, ಗಂಗಾಪೂರ ಓಣಿ,
ಗದಗ-೫೮೨ ೧೦೧ **Phone 8617**

ಮುದ್ರಣ ಅವಧಿ
ಒಂದು ತಿಂಗಳು



ಶ್ರೀಕೃಷ್ಣ

# ಸಮರ್ಪಣೆ



ಶಬ್ದಜ್ಞಾನೇ ಪಾರಂಗತ । ಜೋ ಬ್ರಹ್ಮಜ್ಞಾನೆ ಸದಾ ಡುಲ್ಲತ ।
ಶಿಷ್ಯ ಬೋಧನೀ ಸಮರ್ಥ । ತೋ ಮೂರ್ತಿಮಂತ ಸ್ವರೂಪ ಮಾಝೇ ॥

'ಯಾವನು ಶಬ್ದಜ್ಞಾನದಲ್ಲಿ ಪಾರಂಗತನಿದ್ದು ಬ್ರಹ್ಮಜ್ಞಾನದಿಂದ ಯಾವಾಗಲೂ ನಲಿಯುತ್ತ ತಲೆದೂಗುತ್ತಿದ್ದು, ಶಿಷ್ಯನಿಗೆ ಬೋಧಿಸುವದರಲ್ಲಿ ಸಮರ್ಥನಿರುವನೋ, ಅವನು ಸಾಕ್ಷಾತ್ ಮೂರ್ತಿಮಂತ ನನ್ನ ಸ್ವರೂಪವೇ ಇರುತ್ತಾನೆ' ಎಂದು ಭಗವಂತನಾದ ಶ್ರೀಕೃಷ್ಣನು ಹೇಳಿದ್ದಾನೆ ಸಾಕ್ಷಾತ್ ಪರಬ್ರಹ್ಮ, ಪರಮಾತ್ಮನಾದ ಶ್ರೀಕೃಷ್ಣನೇ ಅವತರಿಸಿ, ಕೋಟ್ಯಾನುಕೋಟಿ ಜನ್ಮದ ಪುಣ್ಯದ ಫಲದಿಂದ, ನಮಗೆ ಶ್ರೀ ದಿಗಂಬರ ರಾಮಚಂದ್ರ ಅಂತೂರಕರವರ ಹೆಸರಿನಿಂದ, ಶ್ರೀ ಸಮರ್ಥ ಸದ್ಗುರುವಿನ ರೂಪದಲ್ಲಿ ಭೆಟ್ಟಿಯಾದನು ಇದಕ್ಕೆ ಸದ್ಗುರುವಿನ ಸತ್ಯ ಸಂಕಲ್ಪವೇ ಕಾರಣವಿರುವದು

ನಾವು ಮೇ ೧೯೫೯ರಲ್ಲಿ ವರೂರಕ್ಕೆ ಬದಲಿಯಾಗಿ ಬಂದಾಗ ಕೈ ಡಾ ಕಡಕೋಳ ಅವರು, ಇವರೊಬ್ಬ ಉತ್ತಮ ಜ್ಯೋತಿಷಿಗಳೆಂದು ಹೇಳಿ ಅವರನ್ನು ನಮಗೆ ಪರಿಚಯಿಸಿ ಕೊಟ್ಟರು ಇವರನ್ನು ನೋಡಿದ ತಕ್ಷಣ ಇವರು ಜ್ಯೋತಿಷಿಗಳು ಮಾತ್ರವಾಗಿರದೆ, ಒಬ್ಬ ಸಿದ್ಧ ಸತ್ಪುರುಷರಿರಬಹುದೆಂದು ನಮ್ಮ ಅಂತರವಾಣಿಯು ನುಡಿಯುತ್ತಿತ್ತು ಅದಕ್ಕಾಗಿ ನಾವು ಈ ಮಹಾತ್ಮರ ನಿಜರೂಪದ ಶೋಧದಲ್ಲಿ ತೊಡಗಿದೆವು. ಅವರ ವ್ಯವಹಾರವನ್ನು ಚಿಕಿತ್ಸಕ ಬುದ್ಧಿಯಿಂದ ಸೂಕ್ಷ್ಮ ದೃಷ್ಟಿಯಿಂದ ನೋಡುತ್ತಿರಲು

ಪ್ರಾಸಂಗಿಕವಾಗಿ ಅವರೇ "ನೀವು ಶ್ರೀಪಾದ ಶ್ರೀ ನರಸಿಂಹ ಸರಸ್ವತಿಯುವರ ಸಾನ್ನಿಧ್ಯದಲ್ಲಿ ಇರುತ್ತೀರಿ" ಎಂದು ತಿಳಿಸಿಕೊಟ್ಟರು. ಈ ವಿಷಯವು ನಮಗೆ ಮನಗತವಾದನಂತರ ಅಲ್ಲಿಗೆ ಬರುತ್ತಿದ್ದ ಕೆಲವರಿಗೆ ಈ ವಿಷಯವನ್ನು ತಿಳಿಸಿದೆವು ಹೀಗೆ ತಿಳಿದ ಅನೇಕ ಶ್ರದ್ಧಾಳುಗಳು ಸದ್ಗುರುಗಳ ಸನ್ನಿಧಿಗೆ ಬರಲಾರಂಭಿಸಿದರು ನಮಗೆ ಹಾಗೂ ಕೈ ಶ್ರೀ ಸುಬ್ಬರಾವ ಹಾರನಹಳ್ಳಿಯವರಿಗೆ ಬರೆದ ಪತ್ರಗಳಲ್ಲಿಯೂ ಸದ್ಗುರುಗಳು ತಮ್ಮ ನಿಜರೂಪದ ಬಗ್ಗೆ ತಾವೇ ತಿಳಿಸಿದ್ದಾರೆ ಈ ಎಲ್ಲ ಪತ್ರಗಳೊಂದಿಗೆ ಅವರ ಸಮಗ್ರ ಜೀವನ-ಕಾರ್ಯಗಳನ್ನು ಪ್ರಕಟಿಸಿದಾಗ ಈ ಎಲ್ಲ ವಿಷಯವೂ ತಮಗೆ ತಿಳಿದುಬರುವದು. 'ಶಾಂತಿಯು ಅವರ ಪಾದದಲ್ಲಿ ನೆಲೆಸಿತ್ತು' (ಭಾ) ಇದೇ ಸದ್ಗುರುವಿನ ನಿಜಲಕ್ಷಣ ಭಕ್ತರು ಹಾಗೂ ಮುಮುಕ್ಷುಗಳು ದಿನ-ದಿನಕ್ಕೂ ಅವರ ಬಳಿ ಬರತೊಡಗಿದರು ಅವರ ಪ್ರಸಿದ್ಧಿಯು ಪಸರಿಸತೊಡಗಿತು ಪ್ರಸಿದ್ಧಿಯನ್ನು ಬಯಸದ ಅವರು ಇನ್ನು ಜನ್ಮಸ್ಥಾನದ ದರ್ಶನವನ್ನು ತೆಗೆದುಕೊಂಡು ತಮ್ಮ ಇಹ ಯಾತ್ರೆಯನ್ನು ಮುಗಿಸಬೇಕೆಂದು ಆಗಾಗ ಹೇಳುತ್ತಿದ್ದರಲ್ಲದೆ ಪತ್ರಗಳಿಂದಲೂ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸುತ್ತಿದ್ದರು. ಅವರಂತೆ ಸದ್ಗುರುಗಳು ತಮ್ಮ ಶಿಷ್ಯ ಸಮೂಹದೊಂದಿಗೆ ಏಪ್ರಿಲ್ ೧೯೭೭ರಲ್ಲಿ ಜನ್ಮಸ್ಥಾನವಾದ ಮಂಗಳವೇಡೆಗೆ ಭೆಟ್ಟಿಕೊಟ್ಟು ಮುಂದೆ ಪಂಢರಪುರ, ತುಳಜಾಪುರ ಮತ್ತು ಗಾಣಗಾಪುರ ಕ್ಷೇತ್ರಗಳ ಯಾತ್ರೆಯನ್ನು ಮುಗಿಸಿ ವರಾರಕ್ಕೆ ಮರಳಿ ಮುಂದೆ ಸ್ವಲ್ಪೇ ದಿನಗಳಲ್ಲಿ ಅಂದರೆ ೨೨-೬-೧೯೭೭ರಂದು ತಮ್ಮ ಜೀವನ ಯಾತ್ರೆಯನ್ನು ಮುಗಿಸಿದರು

"ಎಲ್ಲರಿಗೂ ದಿವ್ಯದೃಷ್ಟಿಯ ಜ್ಯೋತಿಷಿಯು ಸಿಗುವದಿಲ್ಲ ಮತ್ತು ಜನರೆಲ್ಲರೂ ತಮ್ಮ ಪ್ರಾಪಂಚಿಕ ಸಮಸ್ಯೆಗಳನ್ನು ಪರಿಹರಿಸಿಕೊಂಡು, ಅವರಿಂದ ಲಾಭವನ್ನು ಪಡೆಯುತ್ತಿರುವರಲ್ಲದೆ ತಮ್ಮ ಬಳಿಯಲ್ಲಿದ್ದ ಕಸ್ತೂರಿ (ಆತ್ಮಜ್ಞಾನ)ಯ ಲಾಭವನ್ನು ಯಾರೂ ತೆಗೆದುಕೊಳ್ಳುತ್ತಿಲ್ಲವೆಂದು ನನಗೆ ಕೆಡಕೆನಿಸುತ್ತದೆ" ಎಂದು ಅವರು ಹೇಳುತ್ತಿದ್ದರು. 'ಅಮೃತ'ವೆಂದು ಉಚ್ಚರಿಸಿದ ಮಾತ್ರಕ್ಕೆ ಮಾನವನೇನೂ ಅಮರನಾಗುವದಿಲ್ಲ ಆದರೆ ಅದನ್ನು ಅವನು ಸೇವಿಸಿದಲ್ಲಿ ಅಜರಾಮರನಾಗುತ್ತಾನೆ ಅದರಂತೆ ಇಂದಿಗೂ ಕೂಡ ಯಾರು ಶುದ್ಧ ಭಾವನೆಯಿಂದ ಅನನ್ಯಶರಣಾಗತರಾಗಿ ಸದ್ಗುರು ಸ್ವಾಮಿಯನ್ನು ಸೇವಿಸುವರೋ, ಅವರು ಜನ್ಮಮರಣದ ಚಕ್ರದಿಂದ ಪಾರಾಗಿ ಸ್ವಸ್ವರೂಪದಲ್ಲಿ ಏಕರೂಪವಾಗಿ, ಬ್ರಹ್ಮಾನಂದದಲ್ಲಿ ಲೀನರಾಗುವರೆಂಬುವದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ

ಶ್ರೀ ಸದ್ಗುರು ಸ್ವಾಮಿಯು, ನನ್ನಿಂದ 'ಶ್ರೀ ಏಕನಾಥ ಭಾಗವತದ ಜೇವಾಳ'ವನ್ನು ಅನುವಾದಿಸಲು, ಶ್ರೀ ಅನಂತರಾಯರಿಗೆ ಪ್ರೇರಣೆಯನ್ನಿತ್ತುದರಿಂದ, ಬರೆದ ಈ ಹೊತ್ತಿಗೆಯನ್ನು 'ನಾನು' ಎಂಬುದನ್ನು ಬಿಟ್ಟು ಪ ಪೂಜ್ಯ ಸದ್ಗುರುವಿನಡಿಗಳಲ್ಲಿ ಮೌನದಿಂದಲೇ ಸಮರ್ಪಿಸುವೆನು

**—ಸೌ. ಕಾಂತಾ ಅನಂತರಾವ ಯರಗುದ್ದಿ**

# ಮುನ್ನುಡಿ

ಸತ್ಯ ಸಂಕಲ್ಪದ ಸ್ವಾಮಿ ಸದ್ಗುರುನಾಥ
ಪೂರ್ತಿಗೊಳಿಸುವನು ಮನೋರಥ

ಶ್ರೀ ಸದ್ಗುರುನಾಥನು ಸಂಕಲ್ಪವನ್ನು ಮಾಡಿದುದರಿಂದಲೇ, ಅವರು ಪ್ರತಿಪಾದಿಸಿದ (ನಿರೂಪಿಸಿದ) 'ಶ್ರೀ ಏಕನಾಥ ಭಾಗವತದ ಜೀವಾಳ'ವನ್ನು ಅವರೇ ನನ್ನಿಂದ ಅನುವಾದಿಸಿದರು ಮರಾಠಿ ಕಲಿಯದ ನನ್ನಲ್ಲಿ ಅವರು ಸ್ಫೂರ್ತಿರೂಪದಿಂದ ನೆಲಸಿ ಈ ಕಾರ್ಯವನ್ನು ನೆರವೇರಿಸಿದರು ಇದಕ್ಕೆ ಕಾರಣ ನಮ್ಮ ಗುರುಗಳ ಕನ್ನಡ ಅನುಯಾಯಿಗಳು ಅವರು ಶ್ರೀ ಏಕನಾಥ ಭಾಗವತವನ್ನು ಅರಿಯಬೇಕೆಂದು, ನೀರಿನಿಂದ ಹೊರಚೆಲ್ಲಿದ ಮೀನವು ಹೇಗೆ ಒದ್ದಾಡುವದೋ ಹಾಗೆ ಒದ್ದಾಡುತ್ತಿದ್ದರು ತೃಷಾಕಾಂತವಾದ ಚಾತಕ ಪಕ್ಷಿಯು ತನ್ನ ತೃಷ್ಣೆಯನ್ನು ತೃಪ್ತಿಗೊಳಿಸುವದಕ್ಕಾಗಿ ಹೇಗೆ ಮೇಘರಾಜನ ದಾರಿಯನ್ನು ಕಾಯುವದೋ, ಹಾಗೆಯೇ ಏಕನಾಥ ಭಾಗವತವು ಕನ್ನಡದಲ್ಲಿ ಓದಲು ಯಾವಾಗ ಸಿಗುವದೋ ಎಂದು ದಾರಿ ಕಾಯುತ್ತಿದ್ದರು ಅವರ ತೃಷ್ಣೆಯನ್ನು ಹಿಂಗಿಸುವದಕ್ಕಾಗಿ ಸದ್ಗುರುನಾಥನು 'ಶ್ರೀಏಕನಾಥ ಭಾಗವತದ ಜೀವಾಳ'ದ ಮಳೆಗರೆದು, ಅವರ ಮನೋರಥವನ್ನು ಪೂರೈಸಿದನು ಇದರಿಂದ ಎಲ್ಲ ಸಾಧಕ ಜನರಿಗೆ ಶಾಂತಿ ಸಮಾಧಾನವು ದೊರೆತು, ಅವರ ಆತ್ಮೋನ್ನತಿಯ ಸಾಧನೆಯ ಮಾರ್ಗವು ಸುಲಭವಾಗುವದು ಎಂಬಲ್ಲಿ ಅತಿಶಯೋಕ್ತಿಯಾಗಲಾರದು ಈ ಅಮೂಲ್ಯ ರತ್ನರಾಶಿಯನ್ನು ಸಜ್ಜನರು ಅವಶ್ಯವಾಗಿ ಪಡೆದು ಧನ್ಯರಾಗುವರೆಂದು ಬೇರೆ ಹೇಳಬೇಕಾಗಿಲ್ಲ ಭಾಷಾಂತರಿಸಿದ ಎಲ್ಲ ಪ್ರತಿಗಳನ್ನು ಪರಿಶೀಲಿಸಿ, 'ಶ್ರೀ ಏಕನಾಥ ಭಾಗವತದ ಜೀವಾಳ'ವನ್ನು ಪ್ರಕಟಿಸಬೇಕೆಂಬ ಎಲ್ಲ ಗುರುಬಂಧುಗಳ ಅಪೇಕ್ಷೆಯ ಫಲವಾಗಿ ಈ ಕೃತಿಯು ಬೆಳಕಿಗೆ ಬರಲು ಅವಕಾಶವಾಯಿತು

ನಾಥರು ಶ್ರೀ ಮದ್ಭಾಗವತದ ಹನ್ನೊಂದನೆಯ ಅಧ್ಯಾಯವನ್ನು ಮೂವತ್ತೊಂದು ಅಧ್ಯಾಯಗಳಲ್ಲಿ ಬರೆದಿದ್ದಾರೆ ನಾಥರ ಈ ಗ್ರಂಥದ ವೈಶಿಷ್ಟ್ಯವೇನೆಂದರೆ, ಶ್ರೀ ಕಾಶೀಪೀಠಾಧಿಪತಿಗಳು ನಾಥರು ಬರೆದ ಪಂಚಾಧ್ಯಾಯ ಭಾಗವತವನ್ನು, ಪ್ರಾಕೃತ ಭಾಷೆಯಲ್ಲಿ ಬರೆದರೆಂದು ಆಕ್ಷೇಪಿಸಿ ಅದನ್ನು ಗಂಗಾನದಿಯಲ್ಲಿ ಮುಳುಗಿಸಿದರು. ಅದನ್ನು ಗಂಗಾಮಾತೆಯು ನೀರು ತಗಲದಂತೆ ಮೇಲಿಂದ ಮೇಲೆಯೇ ಎತ್ತಿ ಹಿಡಿದಳು ಆತ್ಮಜ್ಞಾನದಿಂದ ತುಂಬಿ ತುಳುಕುವ ಈ ಗ್ರಂಥವನ್ನು ಅವರು ಶ್ರೀ ಸದ್ಗುರು ಕೃಪೆಯಿಂದಲೇ ಬರೆದಿದ್ದಾರೆ ಶ್ರೀ ಏಕನಾಥರು ಅನ್ನುತ್ತಾರೆ, 'ನನ್ನ ಹೆಸರಿನಿಂದ ಶ್ರೀ ಜನಾರ್ಧನನೇ ಈ ಗ್ರಂಥವನ್ನು ರಚಿಸಿದ್ದಾನೆ ನಾಥರ ಸದ್ಗುರು ನಿಷ್ಠೆಯು ಅತ್ಯಂತ ಅಗಾಧವಾಗಿದೆ ಅವರು ಅಪ್ರತಿಮ ಸದ್ಗುರು ಭಕ್ತಿ ಹಾಗೂ ಸದ್ಗುರು ಸೇವೆಯನ್ನು ಮಾಡಿ ದೇವರನ್ನು

(ಶ್ರೀ ಕೃಷ್ಣನು) ಋಣಿಯನ್ನಾಗಿ ಮಾಡಿದರು. ಶ್ರೀ ಕೃಷ್ಣಪರಮಾತ್ಮನು ಅವರ ಮನೆಯಲ್ಲಿ ಶ್ರೀ ಖಂಡ್ಯಾನ ರೂಪದಿಂದ ಹನ್ನೆರಡು ವರ್ಷಗಳ (೧ ತಪ) ವರೆಗೆ ಸೇವೆಯನ್ನು ಮಾಡಿದನು ನಾಥರು ಅನ್ನುತ್ತಾರೆ, 'ಕೋಟಿಗಟ್ಟಲೆ ಸಾಧನೆಗಳನ್ನು ಮಾಡಿದರೂ, ಸದ್ಗುರುವಿನ ಭಜನೆಯನ್ನು ಮಾಡದ ಹೊರತು ಭವ (ಸಂಸಾರ) ವೃಕ್ಷವನ್ನು ಕಡಿಯಲಾಗುವದಿಲ್ಲ. ಹನುಮಂತನನ್ನು ಕಂಡು ಭೂತಗಳು ದಿಕ್ಕಟ್ಟು ಹೇಗೆ ಓಡಿಹೋಗುತ್ತವಯೋ, ಹಾಗೆಯೇ ಸದ್ಗುರು ಭಜನೆಯಿಂದ ಸಂಸಾರ (ಭವ)ಭಯವು ಪಲಾಯನ ಮಾಡುತ್ತದ (ಏ ಭಾ ಅ –೧೨ ಪು ಸ –೪೭೧ ರಿಂದ ೪೭೫) 'ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ' ಎಂದು ಪುರಂದರ ದಾಸರು ಹೇಳಿದ್ದಾರೆ ತಾತ್ಪರ್ಯವೇನೆಂದರೆ ಸದ್ಗುರುವಿನಃ ಮಾನವನು ಸಂಸಾರ ಭಯದಿಂದ ಪಾರಾಗಲು, ಮುಕ್ತನಾಗಲು ಇಲ್ಲವ ಜ್ಞಾನಾರ್ಜನೆ ಮಾಡಲು ಮತ್ತು ಸ್ವಸ್ವರೂಪದಲ್ಲಿ ಒಂದುಗೂಡಲು ಅಸಮರ್ಥನಿರುತ್ತಾನೆಂದು ಸಿದ್ಧವಾಗುತ್ತದ

ಸಾಮಾನ್ಯ ಜನರ ನಿತ್ಯಜೀವನದ ಸಮಸ್ಯೆಗಳು, ಆಧುನಿಕ ಪರಿಸ್ಥಿತಿ, ಇವುಗಳೆಲ್ಲವನ್ನೂ ಗಮನಿಸಿ, ನಾಥ ಭಾಗವತದ ಸಂಪೂರ್ಣಗ್ರಂಥವನ್ನು ಅವಲೋಕಿಸಲು ಜನರಿಗೆ ಸಮಯವಿಲ್ಲವೆಂದು, ಪ ಪೂಜ್ಯ ಸದ್ಗುರುವು ಉಪದೇಶಿಸಿದ ನಾಥರ ಮುಖ್ಯಾಂಶಗಳ ಪರಿಚ್ಛೇದಗಳನ್ನಷ್ಟೇ ಅಂದರೆ 'ಶ್ರೀ ಏಕನಾಥ ಭಾಗವತದ ಜೀವಾಳ'ವನ್ನು ಪ್ರಕಟಿಸಿರುವೆವು. ಇದು ಪುಟ್ಟ ಗ್ರಂಥವೇ ಆಗಿದ್ದರೂ ಪರಿಶೀಲನೆ ಮಾಡಿದಷ್ಟು ಇದರಲ್ಲಿ ಮುಖ್ಯ ಅಧ್ಯಾತ್ಮ ಜ್ಞಾನದ ವಿಶ್ವರೂಪ ದರ್ಶನವಾಗುತ್ತದೆ ನಾಥರು ತಮ್ಮ ಭಾಗವತದಲ್ಲಿ ಬ್ರಹ್ಮಪ್ರಾಪ್ತಿಗಾಗಿ, ಇನ್ನಿತರ ಮಾರ್ಗಗಳಿಗಿಂತ 'ಸರ್ವ ಭೂತಾಕೃತಿಗಳಲ್ಲಿ ಭಗವದ್ಭಾವನೆ'ಯನ್ನಿಡುವ ಸುಲಭ ಸಾಧನೆಯನ್ನು ಹೇಳಿದ್ದಾರೆ ಈ ಭಾವನೆಯು ನಿರ್ಮಾಣವಾಗಬೇಕಾದರೆ, ಸದ್ಗುರುಪ್ರಾಪ್ತಿ, ಅಖಂಡ ಭಜನ, ನಾಮ ಸಂಕೀರ್ತನ, ಸದಾಚರಣೆ, ಸಂತಸಂಗತಿ, ಮನೋಜಯ, ಅಹಂಕಾರನಾಶ ಮತ್ತು ಅನನ್ಯ ಶರಣಾಗತಿ ಮುಂತಾದ ಸಾಧನೆಗಳ ಅವಶ್ಯಕತೆಯು ಅನಿವಾರ್ಯವಾಗಿರುತ್ತವೆಯೆಂದು ಬೇರೆ ಹೇಳಬೇಕಾಗಿಲ್ಲ ಇದರಲ್ಲಿ ಮುಖ್ಯವಾಗಿ ಸದ್ಗುರು ಭಕ್ತಿಯಿಂದ ಆತ್ಮಜ್ಞಾನ ಪ್ರಾಪ್ತಿ ಹೇಗಾಗುವದು? ಮಾಯೆಯಿಂದ ಹೇಗೆ ಮುಕ್ತನಾಗುವನು? ಸದ್ಗುರು ಹಾಗೂ ಸತ್-ಶಿಷ್ಯನ ಲಕ್ಷಣ ಮತ್ತು ಸತ್ಸಂಗತಿಯ ಅವಶ್ಯಕತೆಯನ್ನು ವಿವರಿಸಲಾಗಿದೆ. ಗುರುಗಮ್ಯವು ಹೇಗೆ ಕೈಗೆ ನಿಲುಕುವದು? ಮತ್ತು ಅದರಿಂದಾಗುವ ಲಾಭ ಸದ್ಗುರು ಮತ್ತು ಬ್ರಹ್ಮ ಇಬ್ಬರು ಒಂದೇ ಎಂಬ ಶುದ್ಧಭಾವನೆಯ ದೃಢತೆ, ಕಲಿಯುಗದ ಮಹತ್ವ ಮತ್ತು ದೇವ ದೇವತೆಗಳೂ ಕೂಡ ಕಲಿಯುಗದಲ್ಲಿ ಜನ್ಮತಾಳುವ ಹವ್ಯಾಸ, ನಾಲ್ಕೂ ಮುಕ್ತಿಗಳ ಸ್ವರೂಪ, ವೈಕುಂಠ ಕೈಲಾಸಾದಿಗಳ ವರ್ಣನೆ, ಪರಮಾರ್ಥವನ್ನು ಎಷ್ಟು ತೀವ್ರತೆಯಿಂದ ಸಾಧ್ಯಮಾಡಿಕೊಳ್ಳಲು ಬರುವದೆಂಬುದನ್ನು ಹೇಳಲಾಗಿದೆ. ಸದ್ಗುರುವಿನ ಶೋಧ, ಅವರ ದರ್ಶನದ ತೀವ್ರ ಇಚ್ಛೆ ಹಾಗೂ ಎಲ್ಲ ರೀತಿಯಿಂದಲೂ ಸದ್ಗುರುಸೇವೆಯನ್ನು ಮಾಡುವ ಹವ್ಯಾಸವನ್ನು ನಾಥರು ಬಹಳ

ರಮ್ಯವಾಗಿ ವರ್ಣಿಸಿದ್ದಾರೆ ಕರ್ಮ–ಭಕ್ತಿ–ಜ್ಞಾನದ ವಿವೇಚನೆಯನ್ನೂ ಮಾಡಲಾಗಿದೆ. ಮುಕ್ತ ಲಕ್ಷಣ, ಪರಮಾರ್ಥ ದರ್ಶನ, ಭಾಗವತದ ನಿಜತತ್ವ–ನಿಜವಾದ ಭಕ್ತಿಯ ವರ್ಣನೆ ಮತ್ತು ಅದರಿಂದುಂಟಾಗುವ ಫಲವನ್ನು ವಿಶದಪಡಿಸಿದ್ದಾರೆ ಕೊನೆಯದಾಗಿ ಉದ್ಧವನು ಶ್ರೀ ಕೃಷ್ಣನಿಗೆ ಮುಕ್ತಿಗಿಂತಲೂ ಶ್ರೇಷ್ಠವಾದ ಸದ್ಗುರು ಭಕ್ತಿಯನ್ನೇ ಬೇಡಿಕೊಂಡಿದ್ದಾನೆ ಸದ್ಗುರುವಿನ ಅತರ್ಕ್ಯ ಸ್ಥಿತಿಯು ಎಲ್ಲರಿಗೂ ವಿದಿತವಾಗುವದಿಲ್ಲವೆಂದೇ, ಅವರು (ಜನರು) ಸಾಯುಜ್ಯ ಮುಕ್ತಿ, ವಿದೇಹ ಮುಕ್ತಿಯನ್ನೇ ಬೇಡಿಕೊಂಡು. ವಂಚಿತರಾಗುತ್ತಾರೆಂದು ಉದ್ಧವನು ಅನ್ನುತ್ತಾನೆ ಇನ್ನೂ ಅನೇಕ ತರಹದ ವಿಷಯಗಳನ್ನೂ ಹಾಗೂ ಅವುಗಳ ಫಲಶ್ರುತಿಯನ್ನು ನಿವೇದಿಸಲಾಗಿದೆ ಏಕಾದಶಸ್ಕಂಧದ ಜ್ಞಾನಾಧಿಕಾರಿ ಯಾರು? ಏಕಾದಶಸ್ಕಂಧದ ಶ್ರವಣ ಮತ್ತು ದಾನ ಮಾಡುವದರಿಂದ ಏನು ಫಲ ಸಿಗುವದು? ಮತ್ತು ಏಕಾದಶಸ್ಕಂಧದ ಅದ್ಭುತ ಮಹಿಮೆಯನ್ನು ಅಳವಡಿಸಿದ್ದಾರೆ. ಶ್ರೀ ಸದ್ಗುರು ಸಂಕಲ್ಪದಿಂದ ಹೊರಬಂದಿರುವ 'ಶ್ರೀ ಏಕನಾಥ ಭಾಗವತದ ಜೀವಾಳ'ದ ಹೊತ್ತಿಗೆಯನ್ನು ಎಷ್ಟು ಕೊಂಡಾಡಿದರೂ ಕಡಿಮೆಯಾಗಿದೆ ಸಾಕ್ಷಾತ್ತಾಗಿ ಸದ್ಗುರು ಸ್ವರೂಪದಿಂದ, ಇದು ಮಾನವ ಸಮಾಜಕ್ಕೆ ನೀಡಿದ ಅಮೃತಮಯ ಸಂದೇಶವಿರುವದು ಮನೆಮನೆಯಲ್ಲೂ ಇದರ ಶ್ರವಣ, ಪಠಣ ಮತ್ತು ಮನನವಾಗಿ, ಎಲ್ಲರೂ ಭಕ್ತಿ ಮಾರ್ಗವನ್ನವಲಂಬಿಸಿ ತಮ್ಮ ಆತ್ಮೋದ್ಧಾರವನ್ನು ಮಾಡಿಕೊಂಡರೆ ಸದ್ಗುರುರೂಪಿ ಜನಾರ್ಧನನು ಪರಮ ಸಂತುಷ್ಟನಾಗುವನೆಂಬುದನ್ನು ಬೇರೆ ಹೇಳಬೇಕಾಗಿಲ್ಲ ಈ ಅನುವಾದದ ನೆಪದಿಂದ ಜನತಾ ಜನಾರ್ಧನನ ಸೇವ ಮಾಡುವ ಸುಯೋಗವನ್ನು ಈ ದೇಹಕ್ಕೆ ಸದ್ಗುರುವು ಒದಗಿಸಿ ಕೊಟ್ಟಿದ್ದಾರೆ ಇದು ಅವರ ಅಪಾರ ಕೃಪೆಯಾಗಿರುವದು ಈ ತೆರನಾಗಿ 'ಜನಾರ್ಧನನ ರಥವು ಎಲ್ಲರ ಸಹಾಯದಿಂದ ಮುಂದುವರಿದಿದೆ'

'ಶ್ರೀ ಏಕನಾಥಿ ಭಾಗವತದ ಜೀವಾಳ'ವನ್ನು ಪ್ರಕಟಿಸಲು ಸಹಾಯ ನೀಡಿದವರ ಆಭಾರವನ್ನು ಮನ್ನಿಸದಿದ್ದರೆ ದೊಡ್ಡ ತಪ್ಪು ಮಾಡಿದಂತಾಗುವದು ಆದುದರಿಂದಲೇ ಪ್ರತ್ಯಕ್ಷ ಇಲ್ಲವ ಅಪ್ರತ್ಯಕ್ಷವಾಗಿ ಸಹಾಯವನ್ನು ನೀಡಿದವರಿಗೆ ಕೃತಜ್ಞತೆಯಿಂದ ಆಭಾರವನ್ನು ಮನ್ನಿಸುವೆನು

ಮೆ ಕೇಶವ ಭಿಕಾಜಿ ಧವಳೆ ಇವರ ಪ್ರಕಾಶನದ ಪದಬದ್ಧವಾದ 'ಶ್ರೀ ಏಕನಾಥಿ ಭಾಗವತ' ಗ್ರಂಥವನ್ನು ನಮ್ಮ ಪ ಪೂಜ್ಯ ಗುರುಗಳಾದ ಶ್ರೀ ದಿಗಂಬರ ಅಂತೂರಕರವರು ತಮ್ಮ ಸ್ವತಃದ ವೆಚ್ಚದಿಂದ ಅದನ್ನು ನಮಗೆ ಉಪಲಬ್ಧ ಮಾಡಿಕೊಟ್ಟರು. ಈ ಗ್ರಂಥವು ಅತ್ಯಾಶ್ಚರ್ಯಕಾರಕವಾಗಿ ನಮಗೆ ದೊರಕಿದೆ ಅದು ಹೇಗೆಂದರೆ ಪ. ಪೂಜ್ಯ ಗುರುದೇವನು ನನ್ನ ಸಹೋದರನಾದ ಕೈ ಸುಬ್ರಾವ ಹಾರನಹಳ್ಳಿ ಮುಲುಂಡ (ಮುಂಬಯಿ) ಇವನಿಗೆ, ಮ ಧವಳೆಯವರ ಅಂಗಡಿಯಲ್ಲಿಯ 'ಏಕನಾಥಿ ಭಾಗವತ'ವನ್ನು ಕಳುಹಿಸಿಕೊಡಬೇಕೆಂದು ಮೂರು ನಾಲ್ಕು ಪತ್ರಗಳನ್ನು ಬರೆದಿದ್ದರು. ಆದರೆ ಅಲ್ಲಿ ಪ್ರತ್ಯಕ್ಷ ವಿಚಾರಣೆಯನ್ನು ಮಾಡಲಾಗಿ, 'ಈ ಗ್ರಂಥವು ಸದ್ಯಕ್ಕೆ ಉಪಲಬ್ಧವಿಲ್ಲ ಛಾಪಿಸಿದ ಪ್ರತಿಗಳೆಲ್ಲವೂ ಮುಗಿದಿವೆ' ಎಂದು ಅಂಗಡಿಕಾರನು ಹೇಳು

ತ್ತಿದ್ದನು ಪ ಪೂಜ್ಯ ಗುರೂಜಿಯವರು ಮತ್ತೊಂದು ಪತ್ರವನ್ನು ಬರೆದು 'ಆ ಪುಸ್ತಕವನ್ನು ಪ್ರತ್ಯಕ್ಷ ಮಾಲಕನನ್ನು ಭೆಟ್ಟಿಯಾಗಿ ವಿಚಾರಿಸಬೇಕೆಂದೂ ಹಾಗೂ ಆ ಪುಸ್ತಕವು ಅಂಗಡಿಯ ಅಟ್ಟದ ಮೇಲೆ ಬ್ರಾವುನ ಪೇಪರ ಕವ್ಹರಿನಲ್ಲಿ ಕಟ್ಟಿಟ್ಟಿರುವದಾಗಿಯೂ', ಅವನಿಗೆ ತಿಳುಹಿಸಿದರು ನಂತರ ನನ್ನ ಅಣ್ಣನು, ಢವಳೆ ಮಾಲಕರಿಗೆ ಭೆಟ್ಟಿಯಾಗಿ, ಆ ಪುಸ್ತಕವನ್ನು ಅವರು ಶೋಧ ಮಾಡಿಕೊಟ್ಟ ಮೇಲ, ಅದನ್ನು ಅವನು ನಮಗೆ ಪೋಸ್ಟಿನಿಂದ ಕಳುಹಿಸಿಕೊಟ್ಟನು ಅದು ಸರಿಯಾಗಿ ನಮಗೆ ನಮ್ಮ ಪ ಪೂಜ್ಯ ಗುರೂಜಿಯವರು ಓದಲು ನಿಶ್ಚಯಿಸಿದ ದಿನವೇ ಬಂದು ತಲುಪಿತು ಈ ಗ್ರಂಥದಲ್ಲಿಯೇ ನಮ್ಮ ಪ ಪೂಜ್ಯ ಗುರೂಜಿಯವರು ಕೆಂಪು ಮಸಿಯಿಂದ ಗುರುತಿಸಲು ಹೇಳಿದ ಮಹತ್ವ ಪೂರ್ಣವಾದ ಪರಿಚ್ಛೇದಗಳಿವೆ ಆ ಹೊತ್ತಿಗೆಯೇ 'ಶ್ರೀ ಏಕನಾಥಿ ಭಾಗವತದ ಜೀವಾಳ' ವೆಂದು ಪ್ರಕಟವಾಯಿತು ಇರಲಿ ಶ್ರೀ ಢವಳೆಯವರು ಪ್ರಕಾಶನಕ್ಕಾಗಿ ಪರವಾನಗಿಯನ್ನು ಕೊಟ್ಟಿದ್ದಕ್ಕಾಗಿ ಮನಃಪೂರ್ವಕವಾಗಿ ಅವರ ಆಭಾರವನ್ನು ಮನ್ನಿಸುವವು ಎಲ್ಲ ಗುರುಬಂಧುಗಳು ಹಾಗೂ ಪ ಪೂಜ್ಯ ಗುರೂಜಿಯವರ ಶಿಷ್ಯವರ್ಗ ಮತ್ತು ಭಕ್ತವೃಂದವು, ಈ ಗ್ರಂಥವನ್ನು ಪ್ರಕಟಿಸಬೇಕೆಂದು ಇಚ್ಛಿಸಿ ಅರ್ಥಸಹಾಯವನ್ನು ಮಾಡಿದ್ದರಿಂದ ಇದು ಪ್ರಕಾಶಕ್ಕೆ ಬರಲು ಅವಕಾಶವಾಯಿತು ಎಲ್ಲರ ಹೆಸರು ಮತ್ತು ಪುಸ್ತಕವು ದೊರಕುವ ಸ್ಥಳವನ್ನು ಈ ಮುಂದೆ ಛಾಪಿಸಲಾಗಿದ. ಅವರೆಲ್ಲರಿಗೂ ನಾನು ಆಭಾರಿ. ಶ್ರೀ ಗಜಾನನ ಹೆಗಡೆ 'ಜ್ಞಾನೇಶ್ವರ ಪ್ರಿಂಟಿಂಗ ಪ್ರೆಸ್ಸ್' ಹುಬ್ಬಳ್ಳಿ ಹಾಗೂ 'ಸುಶೀಲ'ದ ಸಂಪಾದಕ ಎಮ್. ಎಮ್ ಕನಕೇರಿ ಉಭಯತರೂ ನಮಗೆ ದಾರಿಯನ್ನು ತೋರಿಸಿದ್ದಕ್ಕಾಗಿ ನಾವು ಅವರ ಆಭಾರಿಯಾಗಿದ್ದೇವೆ ಆ ಮೇಲೆ 'ಶ್ರೀ ಎಫ್ ಎಸ್ ಭಾಂಡಗೆ ತ್ವರಿತ ಮುದ್ರಣಾಲಯ' ಗದಗ ಇವರ ಹಾಗೂ ಅವರ ಸಹ ಕರ್ಮಚಾರಿಗಳ ಆಭಾರವನ್ನು, ಸುಂದರವಾಗಿ ಮುದ್ರಣವನ್ನು ಮಾಡಿ, ವೇಳೆಗೆ ಸರಿಯಾಗಿ ಈ ಪುಟ್ಟ ಗ್ರಂಥವನ್ನು ಉಪಲಬ್ಧಮಾಡಿಕೊಟ್ಟದ್ದಕ್ಕಾಗಿ, ಮನ್ನಿಸುವೆವು ಕೊನೆಯದಾಗಿ ಮನೆಯಲ್ಲಿಯ ನಮ್ಮ ಮಕ್ಕಳು ಹಾಗೂ ಸೊಸೆಯಂದಿರು, ನನ್ನನ್ನು ಪ್ರಾಪಂಚಿಕ ಕಾರ್ಯದಿಂದ ಬಿಡುಗಡೆ ಮಾಡಿ, ಈ ಗ್ರಂಥ ರಚಿಸಲು (ಅನುವಾದಿಸಲು) ಹಾಗೂ ಪೂರ್ತಿಗೊಳಿಸಲು ಅನುಕೂಲತೆಯನ್ನೊದಗಿಸಿ ಸಹಾಯ ಮಾಡಿದ್ದಕ್ಕಾಗಿ, ನಾನು ಅವರ ಅಭೀಷ್ಟವನ್ನು ಚಿಂತಿಸಿ, ಸದ್ಗುರುಗಳಡಿಗಳಲ್ಲಿ ಅವರ ಆತ್ಮಕಲ್ಯಾಣಕ್ಕಾಗಿ ಪ್ರಾರ್ಥಿಸುವೆನು ಅದರಂತೆ ತನು–ಮನ–ಧನದಿಂದ ಸರ್ವತೋಪರಿ ಸಹಾಯ ನೀಡಿದ ಎಲ್ಲ ಗುರುಬಂಧುಗಳ ಆತ್ಮಕಲ್ಯಾಣಕ್ಕಾಗಿ ಗುರುಚರಣಗಳಲ್ಲಿ ಪುನಃ ಪ್ರಾರ್ಥಿಸದ ಇರಲಾರೆನು ಎಲ್ಲರಿಗೂ ಶುಭ ಚಿಂತನೆಯನ್ನು ಕೋರಿ ಕೈಗೊಂಡ ಕಾರ್ಯವನ್ನು ಮುಗಿಸುವೆನು

ಧಾರಾರ ಸ್ಟೇಶನ್ (ರೇಲ್ವೆ) — **ಸೌ. ಕಾಂತಾ ಅನಂತರಾವ ಯರಗುದ್ದಿ**

ಅನಂತ ಚತುರ್ದಶಿ

ತಾ. ೧೮–೯–೧೯೮೬

# ಶುಭ ಹಾರೈಕೆ

೧೯೬೭ರ ರಂಗಪಂಚಮಿ ಅಂದು ಡಾ. ಸುಧೀರ (ಈಗ ಅಮೇರಿಕಾದಲ್ಲಿದ್ದಾರೆ) ಹಾಗೂ ನಾನು ಧಾರವಾಡದಲ್ಲಿ ವಾಸಿಸುತ್ತಿದ್ದ ಮಹಾನ್ ವ್ಯಕ್ತಿಯಾದ ಶ್ರೀ ಅಂತೂರಕರ ಗುರೂಜಿ ಅವರ ದರ್ಶನಕ್ಕೆ ಹೋಗಿದ್ದೆವು ಅವರ ದರ್ಶನವಾದ ಕೂಡಲೇ ನಮಗೆ ವಿಚಿತ್ರ ಸಮಾಧಾನ ಎನಿಸಿತು. ಅವರೇನು ವೈಭವದಿಂದ ಯುಕ್ತವಾಗಿರಲಿಲ್ಲ ಅತ್ಯಂತ ಸೀದಾ ಸಾದಾ ಇದ್ದರು ನಮಗೆ ಎರಡು ವಿಶೇಷ ಅನುಭವಗಳು ಬಂದವು (೧) ಅವರು ಹೆಳವರಾಗಿದ್ದು, ಬೆನ್ನು ಗೂನಾಗಿದ್ದರೂ ಮುಖದಲ್ಲಿ ಒಂದು ವಿಶೇಷ ಅಲೌಕಿಕ ಶಾಂತಕಳೆ (೨) "ನಾಳೆ ಶ್ರೀ ಗೊಂದವಲೇಕರ ಮಹಾರಾಜರ ಭಕ್ತರು ಬರುವವರಿದ್ದಾರೆಂದು" ಶ್ರೀ ಗೊಂದಾವಲೇಕರ ಮಹಾರಾಜರ ಫೋಟೋವನ್ನು ನಮ್ಮ ಎದುರಿಗೆ ಕಾಣುವಂತೆ ಹಾಕಿಸಿದ್ದರು ಇವರು ಶ್ರೀ ನೃಸಿಂಹ ಸರಸ್ವತಿ ಸ್ವಾಮಿಗಳವರ ಅವತಾರಿಗಳೆಂದೂ ಪ್ರಸಿದ್ಧರಾಗಿದ್ದರು

ಇಂಥ ಈ ಧಾರವಾಡದ ಗುರುಗಳು, ಎಸ್ಯೆಶ್ರೇಷ್ಠರಾದ ಶ್ರೀ ಅನಂತರಾವ ಹಾಗೂ ಶ್ರೀಮತಿ ಕಾಂತಾ ಯರಗುದ್ದಿ ಇವರಿಂದ ಅತ್ಯಂತ ಭಕ್ತಿಮಾರ್ಗ ಪ್ರಚೋದಕವಾದ "ಶ್ರೀ ಏಕನಾಥ ಮಹಾರಾಜರ ಭಾಗವತದ ಮುಖ್ಯಾಂಶಗಳನ್ನು" ಕನ್ನಡದಲ್ಲಿ ಭಾಷಾಂತರಿಸಲು ಪ್ರೇರೇಪಿಸಿ ಈ ಗ್ರಂಥವು ನಮಗೆ ಉಪಲಬ್ಧವಾಗುವಂತೆ ಮಾಡಿದ್ದಾರೆ ಅವರಿಗೆ ನನ್ನ ನಮನ

ಶ್ರೀ ವ್ಯಾಸಮುನಿಗಳಿಂದ ಪ್ರಣೀತವಾದ ಶ್ರೀಮದ್ಭಾಗವತವು ಶ್ರೀಕೃಷ್ಣನ ಲೀಲೆಗಳು, ವ್ಯಕ್ತಿತ್ವವನ್ನು ವಿವರಿಸುವ ಭಕ್ತಿಪ್ರಧಾನವಾದ ಗ್ರಂಥವಾಗಿದೆ ಮಾನವನು ಅಂತಃಕರಣ ಶುದ್ಧತೆಯಿಂದ ದೇವತ್ವವನ್ನು ಹೊಂದುವದಕ್ಕೆ ಮಾರ್ಗದರ್ಶಿಯಾಗಿದೆ

ಪಾಂಡವರು ಸ್ವರ್ಗಾರೋಹಣ ಮಾಡಿದ ನಂತರ ಅಭಿಮನ್ಯುವಿನ ಮಗನಾದ ಪರೀಕ್ಷಿತರಾಜನು ರಾಜ್ಯವಾಳುತ್ತಿದ್ದಾಗ್ಗೆ ಕಲಿಯ ಪ್ರವೇಶವಾಯಿತು ಕಲಿಯ ಪ್ರಭಾವದಿಂದ ಜನರಲ್ಲಿ ಅನೀತಿ, ಅಶಾಂತಿ ಹಾಗೂ ಅಧರ್ಮಗಳೇ ಬೆಳೆಯಲಾರಂಭಿಸಿದವು. ಪರೀಕ್ಷಿತರಾಜನಿಗೆ ಋಷಿಯ ಶಾಪದಿಂದ ಏಳುದಿನಗಳಲ್ಲಿ ಮೃತ್ಯು ಬರುವುದಿತ್ತು ಈ ಏಳು ದಿನಗಳಲ್ಲಿ ಭಕ್ತಿಯಿಂದ ಮುಕ್ತಿ ಮಾರ್ಗವನ್ನು ತಿಳಿಸುವ ಶ್ರೀ ಭಾಗವತವನ್ನು ಪರೀಕ್ಷಿತರಾಜನಿಗೆ ವಿವರಿಸಿ ಹೇಳಿದರು. ಶ್ರೀ ಶುಕಮುನಿಗಳು ಪರೀಕ್ಷಿತನ ಪ್ರಶ್ನೆಗಳಿಗೆ ಉತ್ತರಿಸುತ್ತ "ಸತ್ಕಾರ್ಯ, ಸತ್ಕರ್ಮಗಳೇ ಮುಂತಾದ ಪುಣ್ಯ ಕೆಲಸಗಳಿಂದ ಸ್ವರ್ಗವು ಸಿಗಬಹುದು ಆದರೆ ಪುಣ್ಯಫಲವು ತೀರಿದ ನಂತರ ಮತ್ತೆ ಮರ್ತ್ಯಲೋಕಕ್ಕೆ ಬರಬೇಕಾಗಬಹುದು ಮುಕ್ತಿಯು ಸಿಗಲಾರದು." ಇದನ್ನೇ ಗೀತೆಯ ೯ನೇ ಅಧ್ಯಾಯದಲ್ಲಿ ಭಗವಂತನು ಮೂರು ವೇದಗಳಲ್ಲಿ ಹೇಳಿದ ಸಕಾಮ ಕರ್ಮಗಳನ್ನು ಮಾಡುವವರು

ಸೋಮರಸವನ್ನು ಕುಡಿದು ಪಾಪರಹಿತರಾಗಿ, ಯಜ್ಞದ್ವಾರಾ ಪೂಜೆಯನ್ನು ಮಾಡಿ ತಮ್ಮ ಪುಣ್ಯದ ಫಲರೂಪವಾಗಿ ಅನೇಕ ದಿವ್ಯ ಭೋಗಗಳನ್ನು ಭೋಗಿಸುತ್ತಾರೆ ಆದರೆ ಪುಣ್ಯಾಂಶವು ತೀರಿದನಂತರ ಮೃತ್ಯುಲೋಕಕ್ಕೆ ಮತ್ತೆ ಬರುತ್ತಾರೆ. ಈ ರೀತಿಯಾಗಿ ಮೂರು ವೇದಗಳಲ್ಲಿ ಹೇಳಿದ ಸಕಾಮಕರ್ಮಗಳನ್ನು ಮಾಡುವದರಿಂದ ಮುಕ್ತಿ ಮಾತ್ರ ಸಿಗಲಾರದು (ಗೀತಾ ಅ ೯ ಶ್ಲೋ ೨೦–೨೧)

ಭಕ್ತಿಯ ಪ್ರಥಮ ಮೆಟ್ಟಿಲುವಾದ ದಾಸ್ಯಭಕ್ತಿಯು ಅತ್ಯಂತ ಕಠಿಣವಾಗಿದ್ದು ಇದರಿಂದ ಭಗವಂತನ ಪ್ರೀತಿ ಪ್ರೇಮಗಳನ್ನು ಗಳಿಸಿದರೆ ಮುಂದಿನ ಸೋಪಾನಗಳು ಸುಲಭವಾಗಿ ದೊರೆಯುವವು ಇದಕ್ಕೆ ಸದ್ಗುರುಗಳ ಮಾರ್ಗದರ್ಶನ ಅವಶ್ಯ ಆದ್ದರಿಂದಲೇ "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತೀ" ಎಂದು ಹೇಳಿದ್ದಾರೆ ಶ್ರೀ ಸದ್ಗುರುಗಳ ಗುಣಗಳನ್ನು ವಿವರವಾಗಿ ಹೇಳಿ ಅವರ ಸೇವೆಯನ್ನು ಏಕೋಭಾವದಿಂದ ಮಾಡಿ ಮೆಟ್ಟಲುಗಳನ್ನೇರುವುದು ಹೇಗೆ ಎಂದು ಶ್ರೀ ಭಾಗವತದಲ್ಲಿ ಹೇಳಿದೆ

ಶುಭಾಶುಭ ಫಲಗಳ ಅಪೇಕ್ಷೆಯನ್ನು ಮಾಡದೇ ಮಾಡುವ ಎಲ್ಲ ಕರ್ಮಗಳನ್ನು ಭಗವಂತನಿಗೆ ಅರ್ಪಿಸಿದ್ದಾದರೆ ಕರ್ಮಬಂಧಗಳಿಂದ ಮುಕ್ತರಾಗಿ ಭಗವಂತನಲ್ಲಿ ಲೀನರಾಗುತ್ತಾರೆ. (ಗೀತಾ ಅ. ೯ ಶ್ಲೋ. ೨೭–೨೮)

ಈ ಭಕ್ತಿಯು ಉದಯಿಸಬೇಕಾದರೆ ಶ್ರೀ ಭಾಗವತದ ಅಧ್ಯಯನ, ಶ್ರವಣ ಹಾಗೂ ನಿಧಿಧ್ಯಾಸ ಮಾಡುವದು ಅತ್ಯವಶ್ಯ ಇದರಿಂದ ಮನಃಶುದ್ಧವಾಗಿ ಒಂದೊಂದೇ ಮುಕ್ತಿ ಸೋಪಾನ ಏರಬಹುದು ಜ್ಞಾನಯುಕ್ತಭಕ್ತಿಯು ಹಂತಹಂತವಾಗಿ ಸುಪುಷ್ಟವಾಗಿ ಬೆಳೆಯಬೇಕು. ಆಗ ಅಂತಃಕರಣ ಶುದ್ಧಿ, ಮಿಥ್ಯಾಜ್ಞಾನದ ನಿವೃತ್ತಿಯಾಗುವದು. ಧ್ಯಾನ ಮತ್ತು ಸಾಕ್ಷಾತ್ಕಾರಗಳಾಗಲು ಅಂತಃಕರಣ ಪಾವಿತ್ರ್ಯ ಅವಶ್ಯ ಇದರ ಮುಂದಿನ ಹಂತವೇ ಮುಕ್ತಿ ಇದೇ ಭಾಗವತದ ತಿರುಳು

ಶ್ರೀಕೃಷ್ಣನ ಪರಮ ಸಖ ಹಾಗೂ ಶಿಷ್ಯನಾದ ಶ್ರೀ ಉದ್ಧವನು ಶ್ರೀ ವಿದುರರನ್ನು ಭೆಟ್ಟಿಯಾದಾಗ್ಗೆ "ಶ್ರೀಕೃಷ್ಣನು ಪರಂಧಾಮವನ್ನೈದಿದನು" ಎಂದು ಹೇಳಿದ್ದನ್ನು ಕೇಳಿ ವಿದುರರಿಗೆ, ಉದ್ಧವನು ಮುಕ್ತನಾಗಿದ್ದಾನೆಂದು ತಿಳಿದುಕೊಂಡರು ಏಕೆಂದರೆ ತನ್ನ ಸಖ ಹಾಗೂ ಗುರುವಾದ ಶ್ರೀಕೃಷ್ಣನು ಪರಂಧಾಮವನ್ನು ಹೊಂದಿದ್ದರಿಂದ ಉದ್ಧವನ ಮುಖದ ಮೇಲೆ ಸ್ವಲ್ಪವೂ ಖಿನ್ನತೆ ಇರಲಿಲ್ಲ ಅಂದರೆ ಮೃತ್ಯುವು ಅನಿವಾರ್ಯ ಅದೊಂದು ಸಹಜ ಪ್ರಕ್ರಿಯೆ ಎಂದು ತಿಳಿದುಕೊಳ್ಳುವದೇ ಶ್ರೀ ಭಾಗವತದ ತಿರುಳು ಹಾಗೂ ಸಂದೇಶ.

ಈ ಮೇಲೆ ಹೇಳಿದ್ದಂತೆಯೇ ನಾನು ಶ್ರೀ ಯರಗುದ್ದಿ ಅನಂತರಾಯರಲ್ಲಿ ಕಂಡೆ. ಅವರ (ಚಿರಂಜೀವನು) ಸರ್ಪದಂಶದಿಂದ ಅಕಾಲ ಮೃತ್ಯುವನ್ನು ಹೊಂದಿದಾಗ್ಗೆ

ಒಂದು ತೊಟ್ಟು ಕಣ್ಣೀರನ್ನೂ ಸುರಿಸದೇ "ಶ್ರೀಗುರುಗಳ ಇಚ್ಛೆ" ಎಂದು ಶಾಂತವಾಗಿ ಹೇಳಿ ಮುಂದಿನ ಕಾರ್ಯ ಮಾಡಿದರು. ಇಂತಹ ಭಕ್ತಿ, ವಿಶ್ವಾಸ ಹೊಂದಿದ ಈ ದಂಪತಿಗಳೇ ಧನ್ಯರು.

ಇಂತಹ ಅಲೌಕಿಕ ಜ್ಞಾನವನ್ನು ತಿಳಿಸುವ ಶ್ರೀ ಏಕನಾಥರ ಶ್ರೀ ಭಾಗವತದ ಆಯ್ದು ಭಾಗಗಳನ್ನು ಕನ್ನಡಿಸಿ ಪ್ರಸಿದ್ಧಿಗೊಳಿಸುತ್ತಿರುವುದು ನಮ್ಮೆಲ್ಲರ ಸುದೈವ.

ಭಗವಂತನು ಈ ದಂಪತಿಗಳಿಗೆ ಆಯುರಾರೋಗ್ಯಗಳನ್ನು ಕೊಟ್ಟು ಇನ್ನೂ ಇಂಥ ಹೆಚ್ಚಿನ ಕಾರ್ಯಗಳವರಿಂದಾಗಲೆಂದು ಹಾರೈಸುವೆ.

ಹುಬ್ಬಳ್ಳಿ
ಕಾರ್ತೀಕ ಶುದ್ಧ ಪ್ರತಿಪದೆ
೪—೧೧—೯೪

—**ವೈದ್ಯ ಕೃ. ಗಿ. ದೇಸಾಯಿ**
ಹುಬ್ಬಳ್ಳಿ

# ಹಾರೈಕೆ

ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಇತ್ತ ಬೋಧನೆ-'ಭಗವದ್ಗೀತೆ'ಯು ಮಹಾಭಾರತದಲ್ಲಿ ಶೋಭಾಯಮಾನವಾಗಿರುವಂತೆ, ಆ ಶ್ರೀಕೃಷ್ಣನೇ ಉದ್ಧವನಿಗೆ ಇತ್ತ ಬೋಧನೆಗಳ ಹನ್ನೊಂದನೆಯ ಸ್ಕಂಧವು ಭಾಗವತದಲ್ಲಿ ಶೋಭಾಯಮಾನವಾಗಿದೆ. ಭಗವದ್ಗೀತೆಗೆ ಶ್ರೀ ಜ್ಞಾನೇಶ್ವರರು ಬರೆದ ಮರಾಠೀ ಭಾಷ್ಯ 'ಜ್ಞಾನೇಶ್ವರಿ' ಪ್ರಸಿದ್ಧಿ ಪಡೆದಿರುವಂತೆ ಶ್ರೀ ಏಕನಾಥರು ಐದುನೂರು ವರ್ಷಗಳ ಹಿಂದ ಭಾಗವತದ ಹನ್ನೊಂದನೆಯ ಸ್ಕಂಧಕ್ಕೆ ಮರಾಠಿಯಲ್ಲಿ ಬರೆದ 'ಏಕನಾಥೀ ಭಾಗವತ'ವೂ ಅಷ್ಟೇ ಪ್ರಸಿದ್ಧಿ ಹೊಂದಿದೆ ಈ ಏಕನಾಥೀ ಭಾಗವತದಲ್ಲಿ ಸಂಸ್ಕೃತದ ಮೂಲ ೧೩೬೭ ಶ್ಲೋಕಗಳಿಗೆ ಶ್ರೀ ಏಕನಾಥರು ೧೮,೮೦೦ ಮರಾಠಿ ಶ್ಲೋಕಗಳ (ಓವಿಗಳ) ಬೃಹತ್ ಭಾಷ್ಯ ನೀಡಿದ್ದಾರೆ. ಇದುವರೆಗೂ ಈ ಗ್ರಂಥದ ಕನ್ನಡಾನುವಾದ ಆದಂತಿಲ್ಲ, ಆಗಿದ್ದಲ್ಲಿ ಅಂತಹ ಗ್ರಂಥ ಈಗ ಲಭ್ಯವೂ ಇಲ್ಲ

ಶ್ರೀ ಅನಂತರಾವ ಯರಗುದ್ದಿ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ಕಾಂತಾಬಾಯಿ ಯವರು ಗುರೂಪದೇಶದಂತೆ ಈ ಏಕನಾಥೀ ಭಾಗವತವನ್ನು ಅಭ್ಯಸಿಸಿ ಅನುಷ್ಠಾನ ಗೈದವರಾಗಿದ್ದಾರೆ ಶ್ರೀಮತಿ ಕಾಂತಾಬಾಯಿಯವರು ತಾವು ಈ ಗ್ರಂಥದಿಂದ ಅನುಭವಿಸಿದ ಅಮೃತರಸಾನುಭವವನ್ನು ಇತರರಿಗೆ ಉಣಬಡಿಸುವ ಅದಮ್ಯ ಅಭೀಪ್ಸೆಯುಳ್ಳವರಾಗಿ, ಸದ್ಗುರು ಪ್ರೇರಣೆ ಹೊಂದಿ ಇದನ್ನು ಕನ್ನಡಕ್ಕೆ ಅನುವಾದಿಸಲು ಉದ್ಯುಕ್ತರಾದರು ಮಾತೃಭಾಷೆ ಕನ್ನಡವಾಗಿದ್ದು ಮರಾಠಿಯಲ್ಲಿ ಕಲಿಯದಿದ್ದರೂ ಇವರಿಗೆ ಭಾಷಾಂತರಿಸುವ ಬಲವಂತ ಭಾವನೆಯ ಮುಂದೆ ಭಾಷೆಯ ಪ್ರಶ್ನೆ ಅಡ್ಡಬರಲಿಲ್ಲ. ತಮ್ಮ ಸದ್ಗುರುಗಳು ಸೂಚಿಸಿದ ಮಹತ್ವದ ಭಾಗಗಳನ್ನು ಸರಳ ಕನ್ನಡದಲ್ಲಿ ಅನುವಾದಿಸಿ ಅದನ್ನು ಈಗ ಸಮಸ್ತ ಕನ್ನಡಿಗರಿಗೆ ಲಭ್ಯ ಮಾಡಿಕೊಟ್ಟಿದ್ದಾರೆ

ಇನ್ನು ಶ್ರೀ ಯರಗುದ್ದಿ ದಂಪತಿಗಳು ಹಾಗೂ ಅವರ ಸದ್ಗುರುಗಳ ಬಗ್ಗೆ ಸ್ವಲ್ಪದ ರಲ್ಲಿ ಹೇಳಬೇಕೆಂದರೆ, ಕಳೆದ ಮೂವತ್ತೈದು ವರ್ಷಗಳ ಹಿಂದೆಯೇ ಈ ಗುರು-ಶಿಷ್ಯರ ಸತ್ಸಂಗದ ಲಾಭ ನನಗೆ ದೊರೆಯಿತು ಸದ್ಗುರುಗಳಾದ ಶ್ರೀ ದಿಗಂಬರ ಅಂತೂರಕರರು ಅವತಾರೀ ಪುರುಷರಾಗಿದ್ದರು ಸಿದ್ಧಿ-ಪ್ರಸಿದ್ಧಿ, ಸೇವೆ-ಸೊತ್ತುಗಳನ್ನು ಎಂದೂ ಬಯಸ ದವರಾಗಿದ್ದರು ಅವರ ಬೋಧನಾ ಉಪಕ್ರಮವು ವೈಶಿಷ್ಟ್ಯಪೂರ್ಣವಾಗಿತ್ತು ಇಂಥವರ ಅಡಿಯಲ್ಲಿ ಸಾಧನೆಗೈದ ಈ ದಂಪತಿಗಳ ನೈಷ್ಠಿಕತೆಯು, ನಾನು ಕಂಡಂತೆ, ಶ್ರೇಷ್ಠತಮ ವಾದುದು ಈ ಹಿನ್ನೆಲೆಯಲ್ಲಿ ಉದಿಸಿಬಂದ ಈ 'ಏಕನಾಥ ಭಾಗವತದ ಜೀವಾಳ' ಸಾಧಕ ರಿಗೆ ಅತ್ಯುಪಯುಕ್ತವಾಗಿದೆ ಇಂತಹ ಇನ್ನೂ ಹಲವಾರು ಪ್ರಾಸಾದಿಕ ಮರಾಠೀ ಗ್ರಂಥಗಳು ಇವರಿಂದ ಅನುವಾದಗೊಂಡು ಪ್ರಾಸಂಗಿಕವಾಗಿ ಹೊರಬರಲೆಂದು ಹಾರೈಸುತ್ತೇನೆ

೧-೧೧-೯೯೪ **—ಅನಂತಾನಂದಕೃಷ್ಣ (ಕೆ.ಆರ್. ವೈಶ್ಯರ)**

ಕರ್ನಾಟಕ ರಾಜ್ಯೋತ್ಸವ ದಿನ ಅಧ್ಯಕ್ಷರು, ಅಧ್ಯಾತ್ಮ ವಿದ್ಯಾಪ್ರಚಾರ ಸೇವಾ ಸಂಘ, ಹುಬ್ಬಳ್ಳಿ

**ಈ ಪುಸ್ತಕದ ಪ್ರಕಟನೆಗೆ ಧನಸಹಾಯ ಮಾಡಿದ ಮಹನೀಯರ ಹೆಸರು ಮತ್ತು ವಿಳಾಸ. ಇವರಲ್ಲಿಯೂ ಪುಸ್ತಕಗಳು ಮಾರಾಟಕ್ಕೆ ಲಭ್ಯ ಇವೆ**

1) **Dr. S. G. Desai,**
1501 Marie
Dear Born HTS
Mi 48127 (USA)

೨) **ಶ್ರೀ ವ್ಹಿ. ಆರ್. ಮನೋಳಿ,**
c/o ಶ್ರೀ ಕೆ ಎಸ್. ವಾಯ್ ನಾಯಿಕ
'ಗುರುಕೃಪಾ' ೧೧೩, ಮೌಂಟ ಜಾಯ್ ಬಡಾವಣೆ,
ಸುಬ್ರಮಣ್ಯಂ ದೇವಸ್ಥಾನದ ಹತ್ತಿರ,
ಹನುಮಂತನಗರ, ಬೆಂಗಳೂರು–೫೬೦೦೧೯

೩) **ಶ್ರೀ ವಿ. ಎಚ್. ದೇಸಾಯಿ,**
'ಸದ್ಗುರುಕೃಪಾ' ಪ್ಲಾಟ ನಂ ೩೪
ರಾಮಕೃಷ್ಣನಗರ, ಗೋಕುಲರೋಡ
ಹುಬ್ಬಳ್ಳಿ–೫೮೦೦೩೦

೪) **ಶ್ರೀಮತಿ ಎಸ್. ಎಸ್. ಹಾರನಹಳ್ಳಿ,**
'ಸದ್ಗುರು' ಅಪಾರ್ಟಮೆಂಟ್ಸ ಪ್ಲಾಟ ನಂ. ೧೦೭ ಬ್ಲಾಕ ನಂ ೩೦೭
ಕಾನ್ಸೈ ಈಸ್ಟ **ಅಂಬರನಾಥ** (ಪೂರ್ವ)
ಜಿ ಠಾಣಾ ಬಾಂಬೆ

೫) **ಶ್ರೀ ಕೆ ಆರ್ ವೈಶ್ಯರ,**
ಅಧ್ಯಾತ್ಮವಿದ್ಯಾ ಪ್ರಚಾರ ಸೇವಾ ಸಂಘ
ಮರಪತಿಗಲ್ಲಿ
ಹುಬ್ಬಳ್ಳಿ–೫೮೦೦೨೦

೬) **ಶ್ರೀ ಎಲ್. ಎಸ್. ಜೋಶಿ,**
ಪ್ಲಾಟ ನಂ ೪೯ ನ್ಯೂ ಬದಾಮಿನಗರ
ಕೇಶವಾಪುರ ಹುಬ್ಬಳ್ಳಿ–೫೮೦೦೨೩

೭) **ಶ್ರೀ ಪ್ರಸಾದ ಎ. ಯರಗುದ್ದಿ**
'ಗುರುಪ್ರಸಾದ'
ವಾಠಾರ ರೇಲ್ವೆ ಸ್ಟೇಶನ್–೪೧೫೫೨೪
(ಜಿಲ್ಲಾ ಸಾತಾರಾ)

೮) **ಶ್ರೀ ಆರ್. ಜಿ. ದೇಸಾಯಿ,**
c/o ಡಾ|| ಕೃಷ್ಣಮೂರ್ತಿ ಕಿತ್ತೂರ
'ಚಂದ್ರಿಕಾ' ವಿಠ್ಠಲನಗರ ಗುಲಬರ್ಗಾ

೯) **ಶ್ರೀ ಕೆ. ಆರ್. ಚಿಟಗುಪ್ಪಿ,**
c/o ಶ್ರೀ ಜಿ. ಕೆ. ದೇಸಾಯಿ
'ಅಕ್ಷಯ' ಜನತಾ ಕಾಲೇಜ ಎದುರು
ವಿದ್ಯಾಗಿರಿ ಧಾರವಾಡ

೧೦) **ಶ್ರೀ ಎನ್. ಆರ್. ಕುಲಕರ್ಣಿ,**
ಅಕ್ಷಯ ಅಪಾರ್ಟಮೆಂಟ್ ಬ್ಲಾಕ ನಂ ೨
ಭಾಗ್ಯನಗರ ಅನಗೋಳ
ಬೆಳಗಾವ-೫೯೦೦೦೬

೧೧) **ಶ್ರೀ ವಿ. ಎಲ್. ಕುಲಕರ್ಣಿ,**
ಇಂದ್ರಾ ನಿವಾಸ ೨-೨-೬೪೭/೮೬A
ಸೆಂಟ್ರಲ್ ಎಕ್ಸೈಜ್ ಕಾಲೊನಿ
ಹೈದರಾಬಾದ-೫೦೦೦೭೩

೧೨) **ಶ್ರೀ ಡಿ. ವಿ ಮುಖಾಸಿ,**
A/೨೫, ನೇಮಿನಾಥ ಕೃಪಾ, ಶಿವಸೋಮೇಶ್ವರ
ಮೇವಾನಗರ ಹೌಸಿಂಗ್ ಕೋ-ಆಪ್ ಸೊಸಾಯಿಟಿ
ಅಹಮದಾಬಾದ-೩೮೦೦೫೨

೧೩) **ಕೆ. ಎನ್. ಕುಲಕರ್ಣಿ**
ಜಗತಾಪ ಬಂಗ್ಲೆ, ೨೦೯ 'ಸುಭದ್ರ'
ಬ್ಯಾಂಕ ಆಫ್ ಮಹಾರಾಷ್ಟ್ರ ಕಾಲೊನಿ
ತಾರಾಬಾಯಿ ಪಾರ್ಕ, ಕೊಲ್ಹಾಪುರ

೧೪) **ಶ್ರೀ ಎಸ್. ಪಿ. ಲೋಖಂಡೆ,**
ಶ್ರೀನಿವಾಸ ಸ್ಟೋರ್ಸ, ಲೋಖಂಡೆ ಬಿಲ್ಡಿಂಗ್
ಎಮ್. ಜಿ. ಮಾರ್ಕೆಟ, ಹುಬ್ಬಳ್ಳಿ

೧೫) **ಡಾ|| ಜಿ ಜಿ ದೇಸಾಯಿ,**
ಪ್ಲಾಟ ನಂ ೩೦, ಶ್ರೀನಗರ (ಉಣಕಲ್ಲ ಹತ್ತಿರ)
ಹುಬ್ಬಳ್ಳಿ

೧೬) ಜಿ ವಿ ಜೋಶಿ,
೫೭, ಗುಲ್‌ಮೋಹರ್ ಕಾಲೊನಿ
ಜೆಂಡೊವಾಳ
ಸಾತಾರಾ (ಮಹಾರಾಷ್ಟ್ರ)

೧೭) **ಶ್ರೀ ಎ ಜಿ ಯರಗುದ್ದಿ,**
'ಗುರುಪ್ರಸಾದ'
ವಠಾರ ರೇಲ್ವೆ ಸ್ಟೇಶನ್,
ವಠಾರ–೪೧೫೫೨೪
(ಜಿ ಸಾತಾರಾ)

೧೮) **ವೈದ್ಯ ಶ್ರೀ ಕೆ. ಜಿ. ದೇಸಾಯಿ,**
ವಾಳ್ವೇಕರಗಲ್ಲಿ
ಹುಬ್ಬಳ್ಳಿ–೫೮೦೦೨೦

೧೯) **ಶ್ರೀ ಡಿ. ಎನ್. ಪೋತದಾರ**
೯೩, 'ಶ್ರೀನಿಧಿ'
೮ನೇ ಕ್ರಾಸ್, ಕೆ ಬಿ. ಬಡಾವಣೆ
ದಾವಣಗೇರಿ.




ಶ್ರೀ ಏಕನಾಥ ಮಹಾರಾಜರು

# ನಾಥಭಾಗವತವನ್ನು ಗಂಗಾದೇವಿಯು ಮಸ್ತಕದ ಮೇಲಿರಿಸಿಕೊಂಡಳು

ಶ್ರೀ ದತ್ತಗುರುವಿನ ಆಜ್ಞೆಯಿಂದ ನಾಥಮಹಾರಾಜರು ಭಾಗವತದಲ್ಲಿಯ ಏಕಾದಶಸ್ಕಂಧದ ಅನುವಾದವನ್ನು ಮಾಡಲು ಪ್ರಾರಂಭಿಸಿದರು. ಮೊದಲಿನ ಐದು ಅಧ್ಯಾಯಗಳು ಪೈಠಣದಲ್ಲಿ ಸಿದ್ಧವಾದವು ಪೈಠಣದಲ್ಲಿಯ ಒಬ್ಬ ಭಾವಿಕ ಬ್ರಾಹ್ಮಣನು ನಾಥರು ಬರೆದ ಐದು ಅಧ್ಯಾಯದ ಪ್ರತಿಗಳನ್ನು ತಾನೂ ಬರೆದು ತಯಾರಿಸಿ, ಅದರ ಪಾರಾಯಣವನ್ನು ದಿನ ನಿತ್ಯವೂ ಮಾಡುವನೆಂದು ನಿರ್ಧರಿಸಿ ಕಾಶೀಯಾತ್ರೆಗಾಗಿ ತೆರಳಿದನು ಕಾಶಿಗೆ ಹೋದನಂತರ ಅಲ್ಲಿ ಅವನು ಗಂಗಾಸ್ನಾನವನ್ನು ಮಾಡಿ, ಅದರ ತಟದಲ್ಲಿ ಕುಳಿತು ತನ್ನ ಆಹ್ನೀಕವನ್ನು ಮುಗಿಸಿದ ನಂತರ ನಾಥ ಭಾಗವತದ ಪಂಚಾಧ್ಯಾಯವನ್ನು ಓದುವ ಪರಿಪಾಠವನ್ನಿಟ್ಟುಕೊಂಡಿದ್ದನು ಕಾಶಿಯಲ್ಲಿಯ ವಿದ್ವಜ್ಜನರ ಲಕ್ಷ್ಯವು ಆಗ್ರಂಥದತ್ತ ಕೇಂದ್ರಿತವಾಯಿತು ಅವರು ಆ ವೇಳೆಯಲ್ಲಿದ್ದ ಪೀಠಾಧಿಪತಿಯ ಬಳಿ ತಮ್ಮ ದೂರನ್ನು ಹೇಳಿಕೊಂಡರು ಅವರು ಆ ಬ್ರಾಹ್ಮಣನನ್ನು ಕರೆತಂದು, ಭಾಗವತವನ್ನು ಪ್ರಾಕೃತಭಾಷೆಯಲ್ಲಿ ಅನುವಾದಿಸಿದವರಾರೆಂದು ವಿಚಾರಿಸಿದರು ಬ್ರಾಹ್ಮಣನು ಏಕನಾಥರ ಸಮಾಚಾರವನ್ನು ಪ್ರೇಮಪುರಸ್ಸರವಾಗಿ ಆದರದಿಂದ ಹೇಳಿದನು ಅದನ್ನು, ಕೇಳಿ ಪೀಠಾಧಿಪತಿ ಸ್ವಾಮಿಗಳಿಗೆ ಮತ್ಸರ ಉಂಟಾಯಿತು ಹೀಗೂ ಅವರು ಏಕನಾಥರಿಗೆ ಕಾಶಿಯಲ್ಲಿ ಭೆಟ್ಟಿಯಾಗಲು ಆಜ್ಞಾಪತ್ರವನ್ನು ಕಳುಹಿಸಿಕೊಟ್ಟರು ಇಷ್ಟಕ್ಕೆ ಅವರು ಸುಮ್ಮನಾಗಲಿಲ್ಲ ಆ ಬ್ರಾಹ್ಮಣನ ಬಳಿಗಿದ್ದ ಗ್ರಂಥವನ್ನು ಕಿತ್ತುಕೊಂಡು ಮಠದಲ್ಲಿಟ್ಟರು, ನಾಥರ ಪಂಚಾಧ್ಯಾಯ ಭಾಗವತದ ಪಾರಾಯಣವನ್ನು ಮಾಡದ ಹೊರತು ಅನ್ನವನ್ನು ಸ್ವೀಕರಿಸುವದಿಲ್ಲವೆಂದು ಆ ಬ್ರಾಹ್ಮಣನು ಸಂಕಲ್ಪವನ್ನು ಮಾಡಿದುದರಿಂದ ಅವನು ಉಪವಾಸವನ್ನು ಪ್ರಾರಂಭಿಸಿದನು ಪ್ರಾಣವನ್ನು ಹಿಡಿಯುವದಕ್ಕಾಗಿ ಅವನು ಹಾಲು ಹಣ್ಣುಗಳನ್ನು ಸೇವಿಸಿ ನಾಥರಾಯರು ಬರುವ ದಾರಿಯನ್ನೇ ಕಾಯುತ್ತಿದ್ದನು ಕೆಲವೊಂದು ದಿನಗಳುರುಳಿದ ನಂತರ ನಾಥರಿಗೆ ಕಾಶೀ ವಿದ್ಯಾಪೀಠಾಧೀಶರ ಪತ್ರವು ಮುಟ್ಟಿತು ಸ್ವಾಮಿಯವರ ಅಜ್ಞನ್ಯೊತ್ತಿದ ಪತ್ರವನ್ನು ಕಂಡು ಸನ್ಮಾನಿಸಿ ಕೂಡಲೆ, ಅವರು ಕಾಶಿಗೆ ಹೊರಡಲು ಉದ್ಯುಕ್ತರಾದರು ನಾಥರು ಕಾಶೀಯಾತ್ರೆಗೆ ಹೊರಟಿರುವರೆಂಬ ವಾರ್ತೆಯನ್ನು ಕೇಳಿ, ಊರಲ್ಲಿಯ ಅನೇಕ ಜನರು, ನಾಥರಂತಹ ಸಹವಾಸವು ಯಾತ್ರೆಯಲ್ಲಿ ಮರಳಿ ಸಿಗಲಾರದೆಂದು ತಿಳಿದು, ಅವರ ಸಂಗಡ ಯಾತ್ರೆಗೆ ಹೊರಟರು ಆವಾಗ್ಗೆ ಬೇರೆ ವಾಹನಗಳು ಉಪಲಬ್ಧವಿಲ್ಲದುದರಿಂದ, ಕಾಲ್ನಡಿಗೆಯಲ್ಲಿಯೇ ಯಾತ್ರೆಯನ್ನು ಮಾಡುವದು ಬಹಳ ಪುಣ್ಯಕಾರಕವಾಗಿರುವದೆಂದು ತಿಳಿಯುತ್ತಿದ್ದರು ನೂರಾರು ಜನರು ಪೈಠಣದಿಂದ ಅವರನ್ನು ಹಿಂಬಾಲಿಸಿದರು ಇಲ್ಲಿ ನಾಥರು

ವಿಶ್ರಾಂತಿಗಾಗಿ ನಿಲ್ಲುತ್ತಿದ್ದರೋ, ಅಲ್ಲಿ ನಿತ್ಯವೂ ಅವರ ಪುರಾಣ ಮತ್ತು ಕೀರ್ತನೆಗಳಾಗು ತ್ತಿದ್ದವು ನಾಥರ ಪ್ರಾಸಾದಿಕ ವಾಣಿಯಿಂದ ಜನರು ಮಂತ್ರಮುಗ್ಧರಾಗಿ ಬೇರೆ ಬೇರೆ ಊರಿನ ಜನರು, ಸತ್ಸಂಗದ ಉದ್ದೇಶದಿಂದ, ಕಾಶೀಯಾತ್ರೆಯ ನಿಮಿತ್ತವನ್ನು ಮಾಡಿ ನಾಥರನ್ನು ಹಿಂಬಾಲಿಸಿದರು ಹೀಗಾಗುತ್ತ ಆ ಜನರ ಸಮೂಹವು ಸಾವಿರ ಗಟ್ಟಲೇ ಬೆಳೆಯಿತು ನಾದರು ಸಾವಿರಾರು ಜನರೊಂದಿಗೆ ಬರುತ್ತಿದ್ದಾರೆಂಬುವ ಸುದ್ದಿಯು ಕಾಶಿಯಲ್ಲಿ ಹರಡಿತು ನಾಥರ ಅಲೌಕಿಕವಾದ ಕೀರ್ತಿಯನ್ನು ಹಾಗೂ ಅವರು ಸಾಧುತ್ವದ, ಮಹಿಮೆಯನ್ನು ಕಾಶಿಯಲ್ಲಿಯ ಜನರು ಕೇಳಿದ್ದರಿಂದ, ಅವರ (ನಾಥರ) ದರ್ಶನಕ್ಕಾಗಿ ಉತ್ಸುಕರಾಗಿದ್ದರು ಗಂಗಾ ಮುಂತಾದ ತೀರ್ಥಗಳನ್ನು ಪವಿತ್ರ ಮಾಡು ವಂತಹ ನಾಥರ ಚರಣಗಳು ಕಾಶಿಯನ್ನು ಪ್ರವೇಶಿಸಿದವು ಈ ಯಾತ್ರಿಕರ ಸಮೂಹವು, ನಿಶಾನೆ, ತಾಳ ಮೃದಂಗಗಳ ಸಹಿತವಾಗಿ, ಭಗವನ್ನಾಮದ ಜಯ ಘೋಷವನ್ನು ಮಾಡುತ್ತ ಸಾಯಂಕಾಲದ ಸಮಯದಲ್ಲಿ ಕಾಶಿಯನ್ನು ತಲುಪಿತು ಭಗವನ್ನಾಮದ ಗರ್ಜನೆಯಿಂದ ಕಲಿಕಾಳನೂ ಕೂಡ ಭಯದಿಂದ ನಡುಗಿ ಓಡಿಹೋಗುತ್ತಾನೆ ಇಂತಹ ನಾಮಗರ್ಜನೆಯು ಕಾಶಿಯಲ್ಲಿಯ ಜನರ ಕಿವಿಗೆ ಬಿದ್ದುದು ಇದೇ ಮೊದಲನೇ ಸಲ ವಾಗಿತ್ತು ಪಂಚಗಂಗೆಯ ಕಟ್ಟಡದಲ್ಲಿ ಈ ಸಮೂಹವು ನೆಲಸಿತು ಕಿರಣಾ, ಧೂತ ಪಾಪಾ, ಸರಸ್ವತೀ, ಗಂಗಾ ಮತ್ತು ಯಮುನಾ ಈ ಐದೂ ನದಿಗಳೂ ನಾಥರ ಪದ ಸ್ಪರ್ಶದಿಂದ ಪುನೀತವಾದವು ಸಂಕಲ್ಪ ವಿಕಲ್ಪಗಳಿಂದ ಮುಕ್ತರಾಗಿದ್ದ ನಾಥರು, ಸ್ನಾನದ ಸಂಕಲ್ಪವನ್ನು ಹೇಳುವ ಭಟ್ಟರಿಂದ ಸಂಕಲ್ಪವನ್ನು ಹೇಳಿಸಿಕೊಂಡು 'ಜಯ ಗಂಗಾಮಾತಾ' ಎಂದು ನದಿಯಲ್ಲಿ ಮುಳುಗಿದರು ಗಂಗಾನದಿಯ ತಣ್ಣಗಿನ ಸ್ಪರ್ಶದಿಂದ ನಾಥರ ಪ್ರವಾಸದ ಶ್ರಮವಲ್ಲವೂ ಪರಿಹಾರವಾಯಿತು ಎಲ್ಲರ ಸ್ನಾನ ಮತ್ತು ಅಭಿಷೇಕಗಳಾದ ನಂತರ ವಿಶ್ವೇಶ್ವರನ ದರ್ಶನವನ್ನು ತೆಗದುಕೊಂಡು, ಕೈಯಲ್ಲಿ ವೀಣೆಯನ್ನು ಹಿಡಿದು, ಕಾಲಲ್ಲಿ ಗೆಜ್ಜೆಗಳನ್ನು ಕಟ್ಟಿ ನಾಥರು ಕೀರ್ತನೆಯನ್ನು ಮಾಡಿದರು ಅದಾದ ಮೇಲೆ ನಿರೂಪಣೆಯನ್ನು ಹೇಳಲು ಪ್ರಾರಂಭಿಸಿದರು ಭಕ್ತಿಪ್ರೇಮರಸದಿಂದ ಕೂಡಿದ ಅವರ ನಿರೂಪಣೆಯನ್ನು ಕೇಳಿ ಕಾಶಿಯಲ್ಲಿಯ ವಿದ್ವಜ್ಜನರೂ ಕೂಡ ಮಂತ್ರಮುಗ್ಧರಾದರು ಭಾವಿಕ ಜನರ ಅಂತಃಕರಣವಂತೂ ಕರಗಿ ನೀರಾಗಿ, ಪ್ರೇಮದಿಂದ, ಅವರ ಕಂಗಳಲ್ಲಿ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು ಅದರಲ್ಲಿಯೂ ಆ ವಿಶಾಲವಾದ ಸಮೂಹ ದಲ್ಲಿ ಕಳ್ಳ ಹೆಸರಿನ ಕಾಳಿನಂತೆ ಕೆಲವರ ಅಂತಃಕರಣವು ಕಠಿಣವಾಗಿತ್ತು ಇವರಾರೆಂದರೆ ಕಾಶೀಪೀಠಾಧಿಪತಿಯ ಶಿಷ್ಯರು, ಅವರು, ಅವರ ಪೀಠಾಧಿಪತಿಯೂ, ಸಾಧುಗಳಲ್ಲಿ ಶ್ರೇಷ್ಠ ಹಾಗೂ ವಿದ್ವತ್ತೆಯಲ್ಲಿ ಒಳ್ಳೇಉತ್ತಮರಾದ ನಾಥರನ್ನು ವಾದದಲ್ಲಿ ಗೆದ್ದು, ಅವರನ್ನು ಬಹಿಷ್ಕೃತರನ್ನಾಗಿ ಮಾಡುವದು ಬಹಳ ಕಠಿಣವಾಗಿದೆಯೆಂದು ಅವರು ಮನಗಂಡರು ಅವರು ಪೀಠಾಧಿಪತಿಗೆ, 'ನೀವು ನಾಥರ ಮುಖಾವಲೋಕನವನ್ನು ಮಾಡಿ ಮಾತನಾಡಲು ಹೋದರೆ, ನಿಮಗೆ ಅವರೊಡನೆ ಮಾತನಾಡಲು ಬರುವದೇ ಇಲ್ಲ' ಎಂದು ಅಂದರು ಇದನ್ನು ಕೇಳಿ ಗುರುಗಳು ಚಿಂತಾಗ್ರಸ್ತರಾಗಿ ಏಕಾಂತದಲ್ಲಿ ಒಂದು ಯುಕ್ತಿಯನ್ನು

ಮಾಡಿದರು 'ವೇದವ್ಯಾಸರ ಭಾಗವತದಂತಹ ಪವಿತ್ರ ಗ್ರಂಥವನ್ನು ಪ್ರಾಕೃತ ಭಾಷೆಯಲ್ಲಿ ಅನುವಾದಿಸುವ ಈ ಮಾನವನು ಮಹಾಪಾಪಿಯಾಗಿದ್ದಾನೆ ಇವನು ಮುಖವನ್ನು ತೋರಿಸಲು ಕೂಡ ಯೋಗ್ಯನಿಲ್ಲ'ಎಂದು ಪ್ರಕಟಿಸಿ ಮಹಾದ್ವಾರದ ಬಾಗಿಲಿಗೆ ಒಂದು ಪರದೆಯನ್ನು ಕಟ್ಟಿ, ನಾಥರನ್ನು ಪರದೆಯ ಆಚೆ ಕುಳ್ಳಿರಿಸಿ, ವಿದ್ವಜ್ಜನರ ಸಲಹೆಯು ಮೇರೆಗೆ ಏನು ನಿಷ್ಕರ್ಷವು ಹೊರಡುವದೋ ಹಾಗೆ ಮಾಡಿ, ಜಪ್ತುಮಾಡಿದ ಅವರ ಗ್ರಂಥವನ್ನು ಗಂಗಾನದಿಯಲ್ಲಿ ಮುಳುಗಿಸಬೇಕು ಹಾಗೂ ಇನ್ನು ಮೇಲೆ ಅವರ ಅನುವಾದಿಸುವದಕ್ಕೆ ಬಂಧನ ಮಾಡಬೇಕು ಹೀಗೆ ಆಲೋಚಿಸಿ ನಿಶ್ಚಯಿಸಿದರು ಈ ಮೊದಲೇ ಪ್ರಕಟಿಸಿದಂತೆ ಸಭೆಯು ಕೂಡುವ ಸಮಯದಲ್ಲಿ, ಬಾಗಿಲಿಗೆ ಪರದೆಯನ್ನು ಕಟ್ಟಿ, ನಾಥರು ಅದರ ಹಿಂದೆ ಕುಳಿತುಕೊಂಡು ಮಾತನಾಡಬೇಕೆಂದು ಪ್ರಸಿದ್ಧವಾಯಿತು ಜನರಿಗೆಲ್ಲರಿಗೂ ಬಹಳ ವಿಚಿತ್ರವೆನಿಸಿತು ಆದರೆ ನಾಥರಿಗೆ ಇದರ ವಿಷಯವಾಗಿ ಎಳ್ಳಷ್ಟು ಕೆಡಕೆನಿಸಲಿಲ್ಲ ನಿಶ್ಚಿತವಾದ ದಿನ ನಸುಕಿನಿಂದ ಜನರ ಸಮೂಹವು ನೆರೆಯುತ್ತಿತ್ತು ಬೆಳಗಿನ ಸ್ನಾನ ಸಂಧ್ಯೆಯನ್ನು ಮುಗಿಸಿ ಸಭಾಮಂಟಪದ ಬಾಗಿಲಿಗೆ ಕಟ್ಟಿದ ಪರದೆಯ ಹೊರಗೆ ಹರಿಚಿಂತನೆಯನ್ನು ಮಾಡುತ್ತ ನಾಥರು ಕುಳಿತರು ನಾಥರ ಈ ಅಪಮಾನವನ್ನು ಸಹಿಸಲಾರದೆ ಜನ ಸಮೂಹವು ಕ್ಷುಬ್ಧವಾಯಿತು ಆದರೆ ನಾಥರು ನಿರ್ವಿಕಾರರಾಗಿ ನಗಮುಖದಿಂದ ಕುಳಿತಿದ್ದರು 'ಯಾರು ಈ ಗ್ರಂಥವನ್ನು ಆದರಿಸುವರೋ ಅಥವಾ ಉಪೇಕ್ಷಿಸುವರೋ ಇಲ್ಲವೆ ಸಂಪೂರ್ಣವಾಗಿ ನಿಂದಿಸುವರೋ ಅವರೆಲ್ಲರೂ ನಮಗೆ ಸದ್ಗುರು ರೂಪದಿಂದ ಬ್ರಹ್ಮಮೂರ್ತಿಗಳೇ ಆಗಿದ್ದಾರೆ', 'ಪ್ರಾಣಿಮಾತ್ರಗಳ ಪ್ರಕೃತಿ ಗುಣದೋಷಗಳನ್ನೆಣಿಸದ ಎಲ್ಲ ಪ್ರಾಣಿಮಾತ್ರಗಳಲ್ಲಿ ನನ್ನನ್ನೇ (ಭಗವಂತನನ್ನೇ) ಕಾಣಬೇಕು' ಎಂದು ಜನಾರ್ಧನನು ಉಪದೇಶಿಸಿದ್ದುದರಿಂದ ನಾಥರು ನಿಃಸಂದೇಹವಾಗಿ ಕುಳಿತಿದ್ದರು. ಎಲ್ಲ ಸಮೂಹವು ಕೂಡಿದ ನಂತರ, ಸ್ವಾಮಿಯವರಿಗೆ ಸಭಾಮಂಟಪದ ಸೋಪಾನವನ್ನೇರುವಾಗ ಪರದೆಯ ಹೊರಗೆ ಕುಳಿತ ನಾಥರನ್ನು ನೋಡುವ ಆಸೆಯಾಯಿತು ಅವರು ಮೆಲ್ಲಗೆ ಕಿರುನೋಟದಿಂದ ಅವರನ್ನು ನೋಡಿದರು ಆದರೆ ಅದೇನಾಶ್ಚರ್ಯ! ನಾಥರ ಬದಲು ಅವರಿಗೆ, ಕಿರೀಟ ಕುಂಡಲದಿಂದ ಸುಶೋಭಿತವಾದ ಹಾಗೂ ಶಂಖ, ಚಕ್ರ, ಗಧಾ ಪದ್ಮವನ್ನು ಧರಿಸಿದ ಮತ್ತು ಶ್ರೀ ವತ್ಸ, ಕೌಸ್ತುಭ-ವೈಜಯಂತೀಮಾಲೆಯಿಂದ ಭೂಷಿತವಾದ ಶ್ಯಾಮಸುಂದರ ವಾಸುದೇವನು ಪ್ರತ್ಯಕ್ಷವಾಗಿ ಕಂಡನು ಸ್ವಾಮಿಯವರು ಆಶ್ಚರ್ಯದಿಂದ ದಿಙ್ಮೂಢರಾದರು ಹರಿಚಿಂತನೆಯನ್ನು ಮಾಡುತ್ತ ಕುಳಿತ ನಾಥರು ಹರಿರೂಪವಾಗಿದ್ದರು ಅವರನ್ನು ನಮಸ್ಕರಿಸಬೇಕೆಂದೆನಿಸಿದರೂ ಕೂಡ, ಅವರ ಪಾಪಕ್ಷ್ಯತಿಯಿಂದ ಅಹಂಕಾರವು ಅಡ್ಡಿಯಾಗಿ, ಸ್ವಾಮಿಯವರನ್ನು ನತಮಸ್ತಕರನ್ನಾಗಿ ಮಾಡದ ಅವರನ್ನು ಗದ್ದುಗೆಯತ್ತ ಒಯ್ದಿತು. ಅವರು ಹೇಗೋ ಮಾಡಿ ಸಿಂಹಾಸನದಲ್ಲಿ ಕುಳಿತರು ನಿಶ್ಚಯಿಸಿದಂತೆ ವಾದ ವಿವಾದಗಳನ್ನು ಮಾಡದೆಯೇ, ಜಪ್ತು ಮಾಡಿದ–ಗ್ರಂಥವನ್ನು ಗಂಗಾನದಿಯಲ್ಲಿ ಬೀಸ್ಹಾಕಬೇಕೆಂದು

ಆಜ್ಞಾಪಿಸಿ ಪೀಠಾಧೀಶರು ಕ್ರೋಧದಿಂದ ಅಲ್ಲಿಂದ ಹೊರಟು ಹೋದರು. ಅವರ ಆಜ್ಞೆಯನ್ನು ಕೇಳಿದ ತಕ್ಷಣ ಅವರ ಶಿಷ್ಯರಲ್ಲೊಬ್ಬನು ಆ ಗ್ರಂಥವನ್ನು ತೆಗೆದುಕೊಂಡು ಗಂಗಾನದಿಯ ದಾರಿಯನ್ನು ಹಿಡಿದನು ಹಾಗೂ ಸಭೆಯು ವಿಸರ್ಜನವಾಯಿತು. ಸ್ವಾಮಿಯವರು ಸಭೆಯ ನಿಯಮಗಳನ್ನು ಉಲ್ಲಂಘಿಸಿದರೆಂದು ಅಲ್ಲಿ ಕೂಡಿದ್ದ ಜನ ಸಮೂಹವು ಕ್ಷುಬ್ಧವಾಯಿತು. ಆದರೆ ಅಲ್ಲಿ ಅವರದು ಏನೂ ನಡೆಯುವ ಹಾಗಿರಲಿಲ್ಲ ಕ್ಷುಬ್ಧ ಮತ್ತು ಖಿನ್ನ ಮನಸ್ಸಿನಿಂದ ಜನರೆಲ್ಲರೂ ಗ್ರಂಥವನ್ನು ತೆಗೆದುಕೊಂಡು ಹೋದ ಆ ಶಿಷ್ಯನ ಹಿಂದ ತೆರಳಿದರು. ಮಣಿಕರ್ಣಿಕೆಯ ಘಾಟದಲ್ಲ ನಿಂತು ಆ ಶಿಷ್ಯನು ಗ್ರಂಥವನ್ನು ಗಂಗಾನದಿಯಲ್ಲಿ ಎಸೆದನು 'ಕೆಳಗಿನ ನ್ಯಾಯಾಲಯಕ್ಕಿಂತಲೂ, ಮೇಲಿರುವ, ಭಗವಂತನ ಉಚ್ಚನ್ಯಾಯಾಲಯದಲ್ಲಿ ಯೋಗ್ಯವಾದ ನ್ಯಾಯವು ಸಿಗುತ್ತದ' ಎಂದು ಲೋಕಮಾನ್ಯ ಟಿಳಕರು, ಅವರಿಗೆ ಆರು ವರ್ಷದ ಶಿಕ್ಷೆಯನ್ನು ಮಾಡಿದ ನ್ಯಾಯಾಧೀಶ ರಿಗೆ ಬಹಳ ಧೈರ್ಯದಿಂದ ಹೇಳಿದ್ದರಂತೆ, ಅದರಂತಯೇ ಇಲ್ಲಿ ಘಟನೆಯಾಯಿತು ಗಂಗಾನದಿಯಲ್ಲಿ ದೂರವಾಗಿ ಎಸೆದ ಆ ಗ್ರಂಥವನ್ನು ಗಂಗಾದೇವಿಯು ವಜ್ರದ ಕಂಕಣ ಗಳಿಂದ ಸುಶೋಭಿತವಾದ ತನ್ನ ಸುಂದರ ಕೈಗಳಿಂದ ಮೇಲಂದ ಮೇಲೆಯೇ ಎತ್ತಿ ಹಿಡಿದಳು ಇದನ್ನು ಕಂಡು ಜನರೆಲ್ಲರೂ, 'ಏಕನಾಥ ಮಹಾರಾಜಕೀ ಜಯ, ಗಂಗಾ ಮಾತಾಕೀ ಜಯ' ಎಂದು ಗಡ ಗರ್ಜನೆಯನ್ನು ಮಾಡಿ ನದಿಯಲ್ಲಿ ಜಿಗಿದರು ಹಾಗೂ 'ಗಂಗಾ ಮಾತಾಕೀ ಜಯ ಗಂಗಾಮಾತಾಕೀ ಜಯ' ಎಂದು ಜಯ ಜಯಕಾರವನ್ನು ಮಾಡುತ್ತ ಈ ಸುತ್ತ, ಗಂಗಾದೇವಿಯು ಸುಂದರವಾದ ಕೈಗಳಲ್ಲಿ ಹಿಡಿದ ಆ ಗ್ರಂಥದತ್ತ ಹೊರಟರು ಹತ್ತಿರ ಬಂದಿದ್ದ ಒಂದು ವ್ಯಕ್ತಿಯ ಬಳಿ ಆ ಗ್ರಂಥವನ್ನು ಕೊಟ್ಟು ಗಂಗಾ ದೇವಿಯು ಗುಪ್ತಳಾದಳು, ಯಾವ ಗ್ರಂಥವನ್ನು ಗಂಗಾದೇವಿಯು ಎತ್ತಿ ಹಿಡಿದಿದ್ದಳೋ, ಆ ಗ್ರಂಥದ ಮೆರವಣಿಗೆಯನ್ನು ಜನರು ಆನೆಯ ಮೇಲಿಟ್ಟು ಮಾಡಿದರು. ಗಂಗಾದೇವಿಯ ಎದುರು ಆ ಸ್ವಾಮಿಯನ್ನಾರು ವಿಚಾರಿಸುವವರು? ದುರಭಿಮಾನಿಗಳಾದ ಪಂಡಿತರ ಮುಖಗಳು ಕಪ್ಪಾದವು ಭಾವಿಕ ಸಜ್ಜನರ ಮುಖಗಳು ಗೆಲುವಿನ ಆನಂದ ದಿಂದ ಅರಳಿದವು ಅದಾದಮೇಲೆ ನಾಥರು ಇನ್ನುಳಿದ ಅಧ್ಯಾಯಗಳನ್ನು ಕಾಶೀ ಯಲ್ಲಿಯೇ ಅನುವಾದಿಸಿ ಸಂಪೂರ್ಣಗೊಳಿಸಿದರು ಹೀಗೆ ನಾಥರ ವ್ಯಕ್ತಿಮತ್ವವು ಅದ್ಭುತ ವಾಗಿದೆ ಜನಾರ್ಧನನ ಕೃಪೆಯಿಂದ ರಚಿಸಿದ ಈ ಏಕನಾಥೀ ಭಾಗವತವು ಬಹಳ ಅಮೂಲ್ಯವಾಗಿದೆ

# ನಾಥರ ಗುರುಸೇವೆಯು ಹಾಗೂ ಗುರುಭಕ್ತಿಯು ಫಲವೆಂದರೆ ಶ್ರೀಖಂಡ್ಯಾನ ಸೇವೆ!

ನಾಥರ ಚರಿತ್ರೆಯು ಅನೇಕ ತರಹದ ವಿಶಿಷ್ಟ ಸಂಗತಿಗಳಿಂದ ತುಂಬಿರುತ್ತದೆ. ಅದರಲ್ಲಿಯೂ ಅವರ ಗುರುಬಕ್ತಿಯು ಅದರ ಮುಕುಟ ಮಣಿಯಾಗಿರುತ್ತದೆ ಜ್ಞಾನೇಶ್ವರ ಮಹಾರಾಜರು ಗುರುಭಕ್ತಿಯು ಹಾಗೂ ಗುರುಸೇವೆಯ ವರ್ಣನೆಯನ್ನು ಜ್ಞಾನೇಶ್ವರಿಯ ೧೩ನೆಯ ಅಧ್ಯಾಯದಲ್ಲಿ ಬಹಳ ಅತ್ಯುತ್ತಮವಾಗಿ ಮಾಡಿದ್ದಾರೆ ಆದರೆ ಅಲ್ಪಾಯುಷ್ಯದಿಂದ ಅವರಿಗೆ ಮನದಣಿಯಾಗಿ ಗುರುಸೇವೆಯನ್ನು ಮಾಡಲಾಗ ಲಿಲ್ಲ ಆದುದರಿಂದ ಅವರು (ಜ್ಞಾನೇಶ್ವರ) ಅದೇ ವಾಸನೆಯನ್ನು ದೃಢಪಡಿಸಿಕೊಂಡು ಏಕನಾಥರ ರೂಪದಿಂದ ಅವತರಿಸಿ ಮನಃತೃಪ್ತಿಯಾಗಿ ತೇಗುವಂತೆ ಗುರುಸೇವಯನ್ನು ಮಾಡಿ ದೇವರಿಗೆ ಋಣಿಯನ್ನಾಗಿ ಮಾಡಿದರು ನಾಥರು ಅನ್ನುತ್ತಾರೆ ಕೋಟಿಗಟ್ಟಲೇ ಸಾಧನೆಗಳನ್ನು ಮಾಡಿದರೂ ಸದ್ಗುರುವಿನ ಭಜನೆಯನ್ನು ಮಾಡದ ಹೊರತು, ಭವ (ಸಂಸಾರ) ವೃಕ್ಷವನ್ನು ಕಡಿಯಲಾಗುವದಿಲ್ಲ ಹನುಮಂತನನ್ನು ಕಂಡು ಭೂತಗಳು ಹೇಗೆ ದಿಕ್ಕೆಟ್ಟು ಓಡಿಹೋಗುತ್ತವೆಯೋ, ಹಾಗೆಯೇ ಗುರುಭಜನೆಯಿಂದ ಸಂಸಾರ (ಭವ) ಭಯವು ಯಃಪಲಾಯನ ಮಾಡುತ್ತದೆ (ಅ ೧೨ ಓದಿ ೪೭೧-೭೫)

'ಗುರು ಅಂದರೆ ದೊಡ್ಡವನು ಹಾಗೂ ಬ್ರಹ್ಮನೆಂದರೂ ದೊಡ್ಡವನೇ' ಯಾರಿಗೆ ಯಾರ ಧ್ಯಾನವಿರುವದೋ, ಅದರಂತೆಯೇ ಅವರ ಮನಸ್ಸು ತದ್ರೂಪವಾಗುತ್ತದೆ ಇದೊಂದು ಸೃಷ್ಟಿಯ ನಿಯಮವಾಗಿದೆ ಈ ನಿಯಮದಂತೆ ಕಣ್ಣಿಗೆ ಗೋಚರ ವಾಗುವ ಪತಿಯನ್ನು ಹಾಗೂ ಮಾನವರೂಪದಿಂದ ಕಾಣುವ ಗುರುವನ್ನು 'ಬ್ರಹ್ಮ'ಮೂರ್ತಿ ಎಂದು ಭಜಿಸುವದೊಂದು ಉಪಾಸನೆಯು ಶಾಸ್ತ್ರದಿಂದ ಪ್ರಾಪ್ತವಾಗಿದೆ. ಇದರಿಂದ ಪತ್ನಿಯ ಶರೀರದಲ್ಲಿ ಇಲ್ಲವೇ ಶಿಷ್ಯನ ದೇಹದಲ್ಲಿ ಬ್ರಹ್ಮಸ್ಥಿತಿಯು ಬಿಂಬಿಸುತ್ತದೆ. ಇದೇನು ಪತ್ನಿಯು ಪತಿಯ ಮೇಲೆ ಇಲ್ಲವೆ ಶಿಷ್ಯನು ಗುರುವಿನ ಮೇಲೆ ಮಾಡುವ ಉಪಕಾರವಲ್ಲ ಇಂತಹ ಧ್ಯಾನ ಬಲದಿಂದಲೇ ಅನಸೂಯೆಯು ಅತ್ಯಂತ ಉಚ್ಚ ಸ್ಥಿತಿಯನ್ನು ಹೊಂದಿದ್ದಳು ಆದ್ದರಿಂದಲೇ ಅವಳು ತನ್ನ ಮನೆಗೆ ಅತಿಥಿಯಾಗಿ ಬಂದಿದ್ದ ಬ್ರಹ್ಮ, ವಿಷ್ಣು, ಮಹೇಶ್ವರರನ್ನು, ತನ್ನ ಉದರದಲ್ಲಿ ಜನಿಸಿದ ಬಾಲಕರಾಗಲೆಂದು ಸಂಕಲ್ಪವನ್ನು ಮಾಡಿ, ಪತಿಯ ಪಾದೋದಕವನ್ನು ಅವರ ಮೇಲೆ ಪ್ರೋಕ್ಷಿಸಲು, ಅವರು ಹಸುಗೂಸುಗಳಾಗಿ ಹೊರಳಾಡಹತ್ತಿದರು ಇದರಲ್ಲಿಯ ಗೂಢವಾದ ರಹಸ್ಯ ವೇನೆಂದರೆ, ಅನಸೂಯೆಯ ಸುದೃಢ ಭಾವನೆ ನಿಗ್ರಹಿಸಲು ದುಸ್ತರವಾದ ಇಂದ್ರಿಯಗಳ ನಿಗ್ರಹ ಹಾಗೂ ಪ್ರಾಚೀನ ಕಾಲದಿಂದಲೂ ನಡೆದುಬಂದ ಧ್ಯಾನದ ಬಲವತ್ತರವಾದ ಧಾರಣೆಯಿಂದಲೇ, ಅವಳಲ್ಲಿ ಈ ಅದ್ಭುತವಾದ ಸಾಮರ್ಥ್ಯವು ಬಂದಿತು ದೃಶ್ಯ ಪತಿಯನ್ನು ಬ್ರಹ್ಮಭಾವನೆಯಿಂದ ಭಜಿಸುವದು ಹಾಗೂ ಸೇವೆಯನ್ನು ಮಾಡುವದೇ, ಸತಿ ಅನಸೂಯೆಯ ಅಪ್ರತಿಮ ಸಾಮರ್ಥ್ಯ ಹಾಗೂ ಕೀರ್ತಿಯ ರಹಸ್ಯವಾಗಿದೆ

ಇದರಂತೆ ಗುರು ಚರಿತ್ರದಲ್ಲಿ, ವೇದಧರ್ಮ ಋಷಿಯ ಶಿಷ್ಯನಾದ ಸಂದೀಪಕನ ಹೃದಯದ್ರಾವಕ ಉಲ್ಲೇಖವಿದೆ ಅವನ ಗುರುವಿನ ಮೇಲಿರುವ ಉಜ್ವಲವಾದ ನಿಷ್ಠೆಯಿಂದ, ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ಸಂತುಷ್ಟರಾಗಿ, ಅವನು ಬೇಡದೆಯೇ ಅವನಿಗೆ ವರವನ್ನು ಕೊಡಲು ಹೋದರು ಸಂದೀಪಕನು ಸ್ವಲ್ಪ ಕೂಡ ಅಚ್ಚರಿಯನ್ನು ತೋರದೆ, ಅವರಿಗೆ ಅವನು, "ನಾನೇನೂ ನಿಮ್ಮ ಭಕ್ತಿಯನ್ನು ಮಾಡುವದಿಲ್ಲ ತಪ್ಪಿ ಕೂಡ ನಿಮ್ಮ ನಾಮಸ್ಮರಣೆಯನ್ನೂ ಮಾಡುವದಿಲ್ಲ ಸಾವಿರಾರು ವರ್ಷಗಳಿಂದ ನಿಮ್ಮ ನಾಮದ ಜಪವನ್ನು ಮಾಡುವ ಹಾಗೂ ತಪಶ್ಚರ್ಯೆಯ ಆಚರಿಸುವ ಜನರಿಗೆ ಪ್ರಸನ್ನರಾಗಿ ಪ್ರತ್ಯಕ್ಷ ದರುಷನವನ್ನು ಕೊಡದೆ, ನನಗೇಕೆ ವರವನ್ನು ಸ್ವೀಕರಿಸೆಂದು ಆಗ್ರಹಿಸುತ್ತಿರುವಿರಿ?" ಎಂದು ನುಡಿದನು ಅದಕ್ಕೆ ಅವರು ಪ್ರತಿಯಾಗಿ ನಿನ್ನ ಗುರುಭಕ್ತಿ ಮತ್ತು ಗುರುಸೇವೆಯಿಂದ ನಾವು ಮೆಚ್ಚಿದ್ದೇವ ಹಾಗೂ ನಿನಗೆ ಅತ್ಯಂತ ಋಣಿಯಾಗಿದ್ದೇವೆ ಆದ್ದರಿಂದ ಅದನ್ನು ತೀರಿಸುವದಕ್ಕಾಗಿ ನಾವು ವರ ಕೊಡಲು ಎಂದಿದ್ದೇವೆಂದು ಉತ್ತರಿಸಿದರು ಅದಕ್ಕೆ ಸಂದೀಪಕನು ತನ್ನ ಗುರುಭಕ್ತಿಯು ಉತ್ತರೋತ್ತರವಾಗಿ ವೃದ್ಧಿಂಗತವಾಗಲೆಂದು ಬೇಡಿಕೊಂಡನು ಅದೇ ಸಂದೀಪಕನನ್ನು ಶ್ರೀಕೃಷ್ಣನು ದ್ವಾಪರ ಯುಗದಲ್ಲಿ ಗುರುವನ್ನಾಗಿ ಮಾಡಿಕೊಂಡು ಅವನ ಸೇವೆಯನ್ನು ಮಾಡಿ ಋಣಮುಕ್ತನಾದನು ಶ್ರೀ ಏಕನಾಥ ಮಹಾರಾಜರ ಗುರುನಿಷ್ಠೆಯು ಕೂಡ ಹೀಗೆಯೇ ಅಲೌಕಿಕವಾಗಿತ್ತು ಅವರು ಬ್ರಹ್ಮಸ್ವರೂಪ ಜನಾರ್ಧನನೆಂದು ಭಾವಿಸದೆ, ಜನಾರ್ಧನ ಸ್ವರೂಪ ಬ್ರಹ್ಮನೆಂದು ಭಾವಿಸಿ ಅವರ (ಜನಾರ್ಧನನ) ಸೇವೆಯನ್ನು ಮಾಡಿದರು. ಇಂತಹ ಅಲೌಕಿಕವಾದ ಗುರುಭಕ್ತಿಯ ನಿಷ್ಠೆಯಿಂದಲೇ, ಭಗವಂತನಾದ ಶ್ರೀಕೃಷ್ಣನು ಶ್ರೀಖಂಡ್ಯಾನ ರೂಪದಿಂದ ಹನ್ನೆರಡು ವರ್ಷ ನಾಥರ ಮನೆಯಲ್ಲಿ ಸೇವಗಾಗಿ ಇದ್ದನು ಹೀಗೆ ಗುರುಸೇವಯ ಅಂದರೆ ಗುರುನಿಷ್ಠೆಯ ಮಹಿಮೆಯು ಅಗಾಧವಾಗಿದೆ.

ನಾಥರು ಮಾಡುವ ಗುರುಸೇವಯೆಂದರೆ ದೇವರ ಪೂಜೆಯ ಸಾಹಿತ್ಯ (ಉಪಕರಣೆ) ಗಳನ್ನು ಸ್ವಚ್ಛವಾಗಿ ತೊಳೆದು ಒರೆಸಿ ಮಿಂಚುವಂತೆ ಮಾಡುವದರಿಂದ, ಪ್ರಾರಂಭಿಸಿ ಗುರುಗಳ ಕಕ್ಕಸದ ಮನೆಯನ್ನೂ ಕೂಡ ಸ್ವಚ್ಛವಾಗಿ ಕಸಗೂಡಿಸಿ ತೊಳೆಯುವವರೆಗೂ ಅವರು ಮಾಡುತ್ತಿದ್ದರು. ಮನೆಯ ಕಾಗದಪತ್ರ ಲೆಕ್ಕಗಳನ್ನೊಳಗೊಂಡು, ಜನಾರ್ಧನ ಸ್ವಾಮಿಗಳ ದರಬಾರದ ಕಾಗದಪತ್ರಗಳನ್ನು ಕೂಡ ನೋಡುತ್ತಿದ್ದರು ಹೀಗೆ ಅವರು ಸೇವೆಯ ಉಚ್ಚ, ನೀಚವೆಂದೆನ್ನದೆ, ಮನಃಪೂರ್ವಕವಾಗಿ ಆದರದಿಂದ ಮಾಡುತ್ತಿದ್ದರು. ಹೀಗೆ ಮೇಲ್ಕಾಣಿಸಿದಂತೆ, ಭಗವಂತನಾದ ಶ್ರೀಕೃಷ್ಣನು ನಾಥರ ಗುರುಸೇವೆಗೆ ಋಣಿಯಾಗಿ 'ಶ್ರೀಖಂಡ್ಯಾ' ಎಂಬ ಹೆಸರಿನಿಂದ ಬ್ರಾಹ್ಮಣ ವಟುವಾಗಿ ನಾಥರ ಮನೆಯಲ್ಲಿ ಸೇವೆಗಾಗಿ ಇದ್ದನು. ನಾಥರ ಮನೆಯಲ್ಲಿ ಶ್ರೀಖಂಡ್ಯಾನ ಕೆಲಸವೇನೆಂದರೆ ಪ್ರಾಮುಖ್ಯವಾಗಿ ಗಂಧವನ್ನು ತೇಯುವದು ಪೂಜೆಗಾಗಿ ಹೂ ತುಳಸಿಯನ್ನು ತರುವದು ಹಾಗೂ ಬಹಳ ಬಿಕ್ಕಟ್ಟಿನ ಕೆಲಸವೇನೆಂದರೆ ಗೋದಾವರಿ ನದಿಯ ನೀರನ್ನು ಕಾವಡಿಯಿಂದ ತಂದು, ಸುಣ್ಣ ಮತ್ತು ಗಚ್ಚಿನಿಂದ ಕಟ್ಟಿದ, ಸುಮಾರು ಒಂದೂವರೆ ಪುರುಷ ಆಳವಾಗಿದ್ದ,

ಏಳೆಂಟು ಮಾರು ಉದ್ದ, ನಾಲ್ಕು ಮಾರು ಅಗಲವಾಗಿದ್ದ ಹೌಜನ್ನು (ತೊಟ್ಟಿ) ತುಂಬುವದು ನಾಥರ ಮನೆಯಲ್ಲಿ ನಿತ್ಯಶ್ರೀ-ನಿತ್ಯಮಂಗಲ ನಡೆಯುತ್ತಿತ್ತು ಅನ್ನಸಂತರ್ಪಣೆಯು ಎಡೆಬಿಡದ ನಡೆಯುತ್ತಿದ್ದುದರಿಂದ ನೀರು ಬಹಳ ಬೇಕಾಗುತ್ತಿತ್ತು. ಅದನ್ನು ಪೂರೈಸುವ ಮುಖ್ಯವಾದ ಮತ್ತು ಬಹಳ ಕಠಿಣವಾದ ಕೆಲಸವನ್ನು ಶ್ರೀಖಂಡ್ಯಾ ಮಾಡುತ್ತಿದ್ದನು ಅದಲ್ಲದೆ ಇನ್ನಿತರ ಕೆಲಸಗಳನ್ನೂ ಅವನು ಮಾಡುತ್ತಿದ್ದನು ಹೀಗೆಯೇ ಹನ್ನೆರಡು ವರ್ಷಗಳು ಕ್ರಮಿಸುತ್ತ ಬಂದವು ಇತ್ತಕಡೆಗೆ ದ್ವಾರಕಾದಲ್ಲಿ ಮದನರಾಯ ಶರ್ಮಾ ಎಂಬ ಮಹಾರಾಷ್ಟ್ರದಲ್ಲಿಯ ಬ್ರಾಹ್ಮಣನು ಶ್ರೀಕೃಷ್ಣದರ್ಶನಕ್ಕಾಗಿ ದೀರ್ಘವಾದ ತಪಶ್ಚರ್ಯೆಯನ್ನು ಆರಂಭಿಸಿದ್ದನು ಅವನ ತಪಶ್ಚರ್ಯೆಯು ಒಂದು ತಪ (೧೨ ವರ್ಷ) ವಾದ ನಂತರ ರುಕ್ಮಿಣಿ ಮಾತೆಯು ಬೇಸತ್ತು ಕೊನೆಗೆ ಅವನ ಕನಸಿನಲ್ಲಿ ಅವನಿಗೆ ಹೀಗೆ ಹೇಳಿದಳು "ದೇವರು ಇಲ್ಲಿ ಇಲ್ಲ ಅವರು ದಕ್ಷಿಣಕ್ಕೆ ಗೋದಾವರಿ ತಟದಲ್ಲಿರುವ ಪೈಠಣವೆಂಬ ಊರಿನಲ್ಲಿ ಏಕನಾಥರ ಮನೆಯಲ್ಲಿ ಶ್ರೀಖಂಡ್ಯಾನ ರೂಪದಿಂದ ಸೇವೆಯನ್ನು ಮಾಡುತ್ತಿದ್ದಾರೆ ಅಲ್ಲಿ ಹೋದರೆ ನಿನಗೆ ಅವರ ದರ್ಶನವಾಗುವದು" ಅದರಂತೆ ಅವನು (ಮದನರಾಯ ಶರ್ಮಾ) ದ್ವಾರಕಾದಿಂದ ಹೊರಟು ನೇರವಾಗಿ ಪೈಠಣಕ್ಕೆ ಬಂದನು ನಾಥರ ಮನೆಯನ್ನು ಹುಡುಕುತ್ತ ಬಂದು ನಾಥರನ್ನು ಭೆಟ್ಟಿಯಾದನು ಬ್ರಾಹ್ಮಣಭಕ್ತರಾದ ನಾಥರು ಅವನನ್ನು ಸ್ವಾಗತಿಸಿದರು ಅವನು ನಾಥರ ಮನೆಯನ್ನು ತಲುಪಿದಾಗ್ಗೆ ಮಧ್ಯಾಹ್ನವಾಗಿತ್ತು ಊಟದ ಎಲ್ಲ ಸಿದ್ಧತೆಯೂ ಆಗಿತ್ತು. ಎಲ್ಲ ಜನರು ಸಿದ್ಧರಾಗಿ ಮಣೆಯ ಮೇಲೆ ಬಂದು ಕುಳಿತಿದ್ದರು. ನಾಥರು ಆ ಬ್ರಹ್ಮಣನಿಗೂ ಕೂಡ ಕೈಕಾಲು ಮುಖ ತೊಳೆದುಕೊಂಡು, ಮಡಿಯನ್ನುಟ್ಟುಕೊಂಡು ಭೋಜನಕ್ಕಾಗಿ ಕುಳ್ಳಿರಲು ವಿನಂತಿಯನ್ನು ಮಾಡಿದರು ಆ ಬ್ರಾಹ್ಮಣನು ಏನು ಮಾಡಿದರೂ ಸಿದ್ಧನಾಗಲಾರದಾದನು ಅವನಿಗೆ ನಾಥರ ಮನೆಯಲ್ಲಿಯ ಶ್ರೀಖಂಡ್ಯಾನ ಭೆಟ್ಟಿಯನ್ನು ತೆಗೆದುಕೊಳ್ಳುವದಿತ್ತು ಅವನು ನಾಥರಿಗೆ, "ನನಗೆ ಶ್ರೀಖಂಡ್ಯಾನನ್ನು ನೋಡಬೇಕಾಗಿದೆ ನನಗೆ ಅವನ ದರ್ಶನವಾಗದ ಹೊರತು ನಾನು ಅನ್ನಗ್ರಹಣವನ್ನು ಮಾಡುವದಿಲ್ಲವೆಂದು" ಹಟ ಹಿಡಿದನು ನಾಥರು ಶ್ರೀಖಂಡ್ಯಾನನ್ನು ಹುಡುಕಿಕೊಂಡು ಬರುವದಕ್ಕಾಗಿ ಸೇವಕರನ್ನು ಕಳುಹಿಸಿದರು ಅವನು (ಶ್ರೀಕೃಷ್ಣ) ಹೂವಿನ ತೋಟದಲ್ಲಿ, ತುಳಸಿಯ ವನದಲ್ಲಿ, ಗೋದಾವರಿ ದಂಡೆಯ ಮೇಲೆ ಕೆಲಸಕ್ಕಾಗಿ ಅಲ್ಲಿ ಇಲ್ಲಿ ಹೋಗುತ್ತಿದ್ದನು ಎಲ್ಲೆಲ್ಲಿ ಹುಡುಕಿದರೂ ಅವನ ಸೊಲ್ಲು ಸುಳುವು ಕಾಣಲಿಲ್ಲ. ನಾಥರು ಬ್ರಾಹ್ಮಣನನ್ನು ಭೋಜನಕ್ಕಾಗಿ ಆಗ್ರಹಿಸಿದರು ಶ್ರೀಖಂಡ್ಯಾ ಇಲ್ಲಿಯೇ ಎಲ್ಲಿಯಾದರೂ ಹೋಗಿರಬೇಕು ಅವನನ್ನು ಭೆಟ್ಟಿ ಮಾಡಿಸಿಕೊಡುವೆನೆಂದು ಮಾತು ಕೊಟ್ಟರು ಏನಾದರೂ ಬ್ರಾಹ್ಮಣನು ಕೇಳಲಾರದಾದನು ಅವನು ಜೋರಾಗಿ ಆಕಾಂತವನ್ನು ಮಾಡಿ ನಾಥರನ್ನು ಅಪ್ಪಿಕೊಂಡು, 'ನನಗೆ ಶ್ರೀಖಂಡ್ಯಾನ ದರ್ಶನವನ್ನು ಮಾಡಿಸರಿ, ಶ್ರೀ ಖಂಡ್ಯಾನನ್ನು ತೋರಿಸರಿ' ಎಂದು ಕನಿಕರದಿಂದ ಗರ್ಜಿಸಿದನು ನಾಥರು ಬ್ರಾಹ್ಮಣನಿಗೆ 'ಶ್ರೀಖಂಡ್ಯಾ ನಿಮಗೇನಾಗಬೇಕು? ಅವನು

ಈಗ ಬಂದೇ ಬರುವನು, ಭಯಪಡಬೇಡಿರಿ' ಎಂದು ಸಮಾಧಾನಪಡಿಸಿದರು ಆವಾಗ್ಗೆ ಬ್ರಾಹ್ಮಣನು ಕಳಕಳಿಯಿಂದ ಕಸಿವಿಸಿಯಾಗಿ ನಾಥರಿಗೆ ಅಂದನು. "ಏಕನಾಥರೇ, ನೀವು ಅವನನ್ನು ಗುರುತಿಸಲಿಲ್ಲ. ಅವನು ಪ್ರತ್ಯಕ್ಷ ಶ್ರೀಕೃಷ್ಣ ಪರಮಾತ್ಮನಿದ್ದಾನೆ ನಾನು ಅವನ ದರ್ಶನಕ್ಕಾಗಿ ೧೨ ವರ್ಷ ತಪಶ್ಚರ್ಯೆಯನ್ನು ಮಾಡುತ್ತಲಿದ್ದೆ ರುಕ್ಮಿಣಿ ಮಾತೆಯು ಸ್ವಪ್ನದಲ್ಲಿ ಬಂದು, 'ಭಗವಂತನು ಇಲ್ಲಿ ಇಲ್ಲ ಅವರು ಶ್ರೀಖಂಡ್ಯಾನ ರೂಪದಿಂದ ಶ್ರೀ ಏಕನಾಥರ ಮನೆಯಲ್ಲಿ ಸೇವೆಯನ್ನು ಮಾಡುತ್ತಲಿದ್ದಾರೆ' ಎಂದು ಹೇಳಿದಳು. ಇದನ್ನು ಕೇಳಿ ಏಕನಾಥರ ಹೃದಯವು ತುಂಬಿ ಬಂದಿತು ಅವರು ಕೂಡ ಭಗವಂತನನ್ನು ಜೋರಾಗಿ ಕೂಗಿ ಕರೆದರು ನಾಥರು ಅನ್ನುತ್ತಾರೆ, 'ದೇವರೆ ನನಗೆ ನೀವು ಈ ರೀತಿಯಾಗಿ ಮೋಸ ಮಾಡಿದಿರಾ, ಚಾಂಡಾಳನಾದ ನಾನು ನಿಮ್ಮ ಕಡೆಯಿಂದ ಎಷ್ಟು ಎಂತೆಂತಹ ಸೇವೆಯನ್ನು ಮಾಡಿಸಿಕೊಂಡೆನು! ನನಗೆ ಧಿಕ್ಕಾರವಿರಲಿ ಬ್ರಾಹ್ಮಣರ ಸೇವೆಯಲ್ಲಿ ತಲ್ಲೀನನಾಗಿರುವದರಿಂದ ನನಗೆ ನಿಮ್ಮನ್ನು ಗುರುತಿಸಲಾಗಲಿಲ್ಲ ಈ ಮದನರಾಯ ಶರ್ಮಾನಿಂದ ನಿನ್ನ ಮಾಯೆಯು ನನಗೆ ಕಂಡುಬಂದಿತು! ಅಪರಾಧಿಯಾದ ನನ್ನನ್ನು ಕ್ಷಮಿಸಿರಿ ಮತ್ತು ನನಗೆ ನಿಮ್ಮ ದರ್ಶನವನ್ನು ಕೂಡಿರಿ' ಎಂದು ಒಂದೇ ಸಮನಾಗಿ ಪ್ರಾರ್ಥಿಸುತ್ತ ದೇವರೆದುರಿನಲ್ಲಿ ಆ ಬ್ರಾಹ್ಮಣನನ್ನು ಅಪ್ಪಿಕೊಂಡು ಕಣ್ಣೀರು ಸುರಿಸ ಹತ್ತಿದರು ದೇವರೇನು ದೂರಿದ್ದನೇನು ಹಾಗೂ ಇರುವನೋ? 'ದೂರಸ್ಥಂ ಚಾಂತಿಕೆ ಚ ತತ್', ಹೀಗಿದ್ದ ಆ ಪರಮಾತ್ಮನು, ಶಂಖ, ಚಕ್ರ, ಗಧಾ, ಪದ್ಮಧಾರಿಯಾಗಿ, ಕಮಲನೇತ್ರನೂ, ಕಿರೀಟಕುಂಡಲ ಮಂಡಿತನಾದ ಶ್ಯಾಮಸುಂದರನು ದೇವರ ಮನೆಯಿಂದ ಹೊರಗೆ ಬಂದನು ಅವನ ಆ ದಿವ್ಯಮೂರ್ತಿಯನ್ನು ಕಂಡು ಇಬ್ಬರೂ ಅವನನ್ನು ಹರ್ಷದಿಂದ ಅಪ್ಪಿದರು ದೇವರೂ ಕೂಡ ಅವರಿಬ್ಬರನ್ನೂ ತಬ್ಬಿದನು ಈ ತ್ರಿಮೂರ್ತಿಗಳನ್ನು ಕಂಡು ಆ ವೇಳೆಯಲ್ಲಿ, ಬಳಿಯಲಿದ್ದ ಜನರೆಲ್ಲ 'ಹರಿ, ಓಹೋ! ಹರಿ ಓಹೋ! ಜಯ ವಾಸುದೇವ ಹರಿ! ಜಯ ವಾಸುದೇವ ಹರಿ! ಜಯ ವಾಸುದೇವ ಹರಿ!' ಎಂದು ಜಯಜಯಕಾರವನ್ನು ಮಾಡಿದರು ನಾಥರು ಹಾಗೂ ಆ ಬ್ರಾಹ್ಮಣನು ಇಬ್ಬರೂ, ದೇವರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದರು. ಆ ಬ್ರಾಹ್ಮಣನು 'ದೇವರೇ ನಿನ್ನ ಪುರಾಣ ಪ್ರಸಿದ್ಧವಾದ ದಿವ್ಯರೂಪವನ್ನು ಪ್ರತ್ಯಕ್ಷವಾಗಿ ಕಂಡು ಕೃತಾರ್ಥನಾದೆನು ನನ್ನ ಜನ್ಮಜನ್ಮಾಂತರದ ದುಃಖವು ಇಲ್ಲದಂತಾಯಿತು! ಆದರೂ ಶ್ರೀಖಂಡ್ಯಾನ ರೂಪವನ್ನು ನೋಡುವ ಇಚ್ಛೆಯಾಗಿದೆ' ಎಂದು ಪ್ರಾರ್ಥಿಸಿದನು. ಕೂಡಲೇ ದೇವರು ಅವನಿಗೆ ಶ್ರೀಖಂಡ್ಯಾನ ರೂಪದಿಂದ ದರ್ಶನವನ್ನು ಕೊಟ್ಟು ಗುಪ್ತನಾದನು. ಆಕಾಶದಲ್ಲಿ ಮಿಂಚು ಮಿಂಚಿ ಇಲ್ಲದಂತಾಗುವಂತೆ ಆ ಸಮಯದಲ್ಲಿ ಆಯಿತು! ಪುಂಡಲೀಕವರದ ಹರೀ ವಿಠ್ಠಲ, ನಾರಾಯಣ ವಿಧಿ ಅತ್ರಿನಾಥ–ದತ್ತ ಜನಾರ್ಧನ ಶ್ರೀ ಏಕನಾಥ ಮಹಾರಾಜಕೀ ಜಯ! ನಾಥರ ಗುರುಭಕ್ತಿಯ ಮಹಿಮಯು ಹೀಗಿದ

# ವಿಷಯ ಸೂಚಿ

| ಪ್ರಕರಣ | ವಿಷಯ ಸೂಚಿ | ಪುಟ |
|---|---|---|
| | ಲಾಭ–ಮೊದಲಿನ ಯುಗದಲ್ಲಿಯ ಶ್ರೇಷ್ಠ ಜನರು ಕಲಿಯುಗದಲ್ಲಿ, ಕೀರ್ತನೆಗಾಗಿ ಜನಿಸಲು ಇಚ್ಛಿಸುತ್ತಾರೆ. (ಏ ಭಾ ಅ. ೫ ಪದ ಸಂಖ್ಯೆ ೪೨೨ ರಿಂದ ೪೫೦) | ೧೭ |
| ೮ | ಶ್ರೀ ಕೃಷ್ಣನನ್ನು ಬಾಲಕನೆಂಬ ಭಾವನೆಯಿಂದ ಕಾಣದೇ, ಬ್ರಹ್ಮ ಭಾವನೆಯಿಂದ ನೋಡಬೇಕು (ಏ. ಭಾ. ಅ ೫ ಪದ ಸಂಖ್ಯೆ ೫೩೧ ರಿಂದ ೫೪೩) | ೧೯ |
| ೯ | ಇತರ ಪ್ರಾಣಿಗಳಿಗಿಂತ, ಮಾನವ ದೇಹವೇ ಈಶ್ವರ ಪ್ರಾಪ್ತಿಗಾಗಿ ಅಧಿಕಾರಿಯಾಗಿದೆ –ಪರಮಾರ್ಥವನ್ನು ಎಷ್ಟು ತೀವ್ರತೆಯಿಂದ ಸಾಧ್ಯ ಮಾಡಿಕೊಳ್ಳಬೇಕು (ಏ ಭಾ ಅ. ೯ ಪದ ಸಂಖ್ಯೆ ೩೨೧ ರಿಂದ ೩೪೨) | ೨೦ |
| ೧೦ | ಸದ್ಗುರುವಿನ ಸ್ತುತಿ (ಏ ಭಾ ಅ ೧೦ ಪ ಸ ೩೦ ರಿಂದ ೩೭) | ೨೨ |
| ೧೧ | ಸ್ವಸ್ವರೂಪಜಾಗೃತಿಯಾದ ಮೇಲೆ ಜನ್ಮಮರಣವಿಲ್ಲ- ಭಕ್ತಿಯ ಸಾಮರ್ಥ್ಯ–ಸದ್ಗುರುವಿನಃ ಬ್ರಹ್ಮಜ್ಞಾನವಿಲ್ಲ–ಗುರು ಮತ್ತು ಬ್ರಹ್ಮ ಇವರ ಐಕ್ಯ–ಶಾಂತಿಯೇ ಸದ್ಗುರುವಿನ ಸ್ವರೂಪ - ಗುರುದರ್ಶನದ ತೀವ್ರ ಇಚ್ಛೆ–ಗುರುಪ್ರಾಪ್ತಿಯ ತಳಮಳದಿಂದ, ಗುರುರೂಪದಿಂದ ನಾನೇ (ಶ್ರೀ ಕೃಷ್ಣನೆ)ದರ್ಶನ ಕೊಡುವನು–ಸತ್ ಶಿಷ್ಯನು ಮಾನ ಅಪಮಾನಕ್ಕೆ ಅಂಜುವನು–ಜ್ಞಾನಾಭಿಮಾನದ ಕಟುತ್ವ–ಮತ್ಸರದ ಲಕ್ಷಣಗಳು ಮತ್ತು ಸಲಕರಣೆಗಳು–ನಿರ್ಮತ್ಸರದ ಸ್ವರೂಪ ದಕ್ಷತೆ–ನಿರ್ಮಮತೆ–ಸುಹೃದತೆ– ನಿಶ್ಚಲತೆ–ಅರ್ಥಜಿಜ್ಞಾಸತಾ–ಅನಸೂಯತೆ–ಗುರುವಚನದಲ್ಲಿ ಶ್ರದ್ಧೆ–ಮೃದು ಸತ್ಯ ಭಾಷಣ–ಬಹಳ ಭಾಷಣದ ತ್ಯಾಗ–ನವ ಲಕ್ಷಣದ ಮಹತ್ವ (ಏ ಭಾ ಅ ೧೦ ಪದ ಸಂಖ್ಯೆ ೮೭ ರಿಂದ ೨೪೧) | ೨೩ |
| ೧೨. | ಜಡತ್ವದಲ್ಲಿಯ ಭೇದ–ಜೀವ ಶಿವ ಲಕ್ಷಣ–ಭಾಗವತದ ನಿಜತತ್ವ (ಏ ಭಾ ಅ. ೧೧ ಪದ ಸಂಖ್ಯೆ ೧೨೪ ರಿಂದ ೧೫೨) | ೩೭ |
| ೧೩ | ಮುಕ್ತನ ಭಾಷಣ–ಜಗಳ ಕಾಯುವದರಲ್ಲಿಯೂ ಪರಮಾರ್ಥ ದರ್ಶನ–ಮುಕ್ತನು ಅದ್ವೈತ ಬೋಧದಿಂದ ಸಂಸಾರದಲ್ಲಿ ಸುಖವಾಗಿ ಜೀವಿಸುವನು–ಕೈಗಳ ಕ್ರಿಯೆಯ ವರ್ಣನೆ (ಏ ಭಾ ಅ ೧೧ ಪದ ಸಂಖ್ಯೆ ೩೩೦ ರಿಂದ ೩೭೦) | ೩೮ |
| ೧೪ | ಅನುಭವವಿಲ್ಲದ ಶಬ್ದಜ್ಞಾನ–ಶಾಸ್ತ್ರದ ನಿಂದೆ-ಶಬ್ದಜ್ಞಾನ ಪಂಡಿತನ ನಿಂದೆ–ಎಷ್ಟು ಕಷ್ಟದಿಂದ ಶಬ್ದಜ್ಞಾನದ ಪ್ರಾಪ್ತಿಯಾಗುವದೋ, ಅಷ್ಟೆ | |

## ಸ್ಫುಟ ವಾಙ್ಮಯ

ಓಂ

# ಗಣೇಶ ಸ್ತವನ ಹಾಗೂ ಸದ್ಗುರು ಮಹಿಮೆ

## ಪ್ರಕರಣ ೧

ಪ್ರಾರಂಭ: ಓಂಕಾರ ಸ್ವರೂಪ ಶ್ರೀ ಜನಾರ್ಧನ ಸ್ವಾಮಿಗಳಿಗೆ ನಮಸ್ಕಾರಗಳು ಹೇ ಸದ್ಗುರು ಜನಾರ್ಧನಾ! ನಿಮ್ಮ ಸ್ವರೂಪದಲ್ಲಿ ಆದಿ ಮತ್ತು ಅಂತ್ಯದ ಕಲ್ಪನೆಯು ಇರುವದಿಲ್ಲ ಇಂತಹ ನಿಮ್ಮ ಶ್ರೀ ಚರಣಗಳಿಗೆ 'ನೀನು, ನಾನು' ಎಂಬ ಭಾವರಹಿತ ನಮಸ್ಕಾರ ಮಾಡುವೆನು (ಸಮುದ್ರ ಮತ್ತು ತರಂಗದ ನ್ಯಾಯದಂತೆ) 'ಶ್ರೀ ಏಕದಂತಾ ಗಜಾನನಾ! ನಿನಗೂ ನಾನು ನಮಸ್ಕರಿಸುವೆನು. ಸದ್ಯಕ್ಕೆ ಐಕ್ಯಾತ್ಮದಿಂದ ನೀನೆ–ಏಕದಲ್ಲಿ ಅನೇಕತ್ವವನ್ನು, ತೋರಿಸುತ್ತಿರುವಿ, ಆದರೂ ನಿನ್ನ ಅದ್ವೈತವು ಸ್ಥಿರವಾಗಿದೆ! ನಿನ್ನಲ್ಲಿಯೇ ಎಲ್ಲ ಚರಾಚರ ಸೃಷ್ಟಿಯ ಸಮಾವೇಶವಾಗಿದೆ ಆದುದರಿಂದಲೇ ನಿನಗೆ 'ಲಂಬೋದರ' ಅನ್ನುತ್ತಾರೆ, ಆದಕಾರಣ ನಿಜವಾಗಲೂ ನೀನು ಎಲ್ಲರ ಬಾಂಧವನಾಗಿರುವಿ ಯಾವ ಮನುಜನು ನಿನ್ನ ದರ್ಶನದ ಲಾಭವನ್ನು ಪಡೆಯುವನೋ, ಅವನ ಸಂಸಾರವು ಸುಖಮಯವಾಗುವದು ಆದುದರಿಂದಲೇ 'ವಿಘ್ನನಾಶಕ'ನೆಂಬ ಉತ್ಕೃಷ್ಟ ಹೆಸರು ನಿನಗೆ ಶೋಭಿಸುತ್ತದೆ ಹೇ ಗಣರಾಜಾ! ಆನಂದವೆಂಬುದೇ ನಿನ್ನ ಮುಖ, ನಾಲ್ಕೂ ಪುರುಷಾರ್ಥಗಳೇ ನಿನ್ನ ನಾಲ್ಕು ಕೈಗಳು ಮತ್ತು ಪ್ರಕಾಶಕರಿಗೆ ಪ್ರಕಾಶವನ್ನು ಕೊಡುವ ನಿನ್ನ ದಂತಗಳು, ಲಕಲಕಿಸುತ್ತಿವೆ

## ಪ್ರಕರಣ ೨

ಇನ್ನು ಭಕ್ತಿಯ ಮಹಿಮೆಯು ಅಗಾಧವಾಗಿದೆ ಅದರಲ್ಲಿ ಸಂಸಾರ ಬಂಧನದ ಸಮಾವೇಶವಾಗುವದಿಲ್ಲ ಇಂತಹ ಭಗವದ್ಭಜನ ಪ್ರಾಪ್ತವಾಗಬೇಕಾದರೆ ಸದ್ಗುರುಚರಣ ಸೇವೆಯನ್ನು ಮಾಡಬೇಕಾಗುತ್ತದೆ. ಯಾವನು, ಶಿಷ್ಯನನ್ನು 'ಮರಣ ಭಯ'ದಿಂದ ಮುಕ್ತಮಾಡುತ್ತಾನೋ, ಅವನೇ ನಿಜವಾದ ಸದ್ಗುರು–ಇದಲ್ಲದೇ ಅನೇಕ ಪ್ರಕಾರದ ಗುರುತ್ವವು ಬರಿ ಮಂತ್ರ ತಂತ್ರೋಪದೇಶಕ್ಕೆಂದು ತಿಳಿಯಬೇಕು ಮಂತ್ರ–ತಂತ್ರೋಪದೇಶ ಮಾಡುವ ಗುರುಗಳು ಅನಾಯಾಸವಾಗಿಯೇ ಸಿಗುತ್ತಾರೆ, ಆದರೆ ಯಾವನು 'ಶಿಷ್ಯನಿಗೆ ಸದ್ವಸ್ತುವಿನ ಲಾಭ ಮಾಡಿ ಕೊಡುವನೋ, ಅವನೇ ನಿಜವಾದ ಸದ್ಗುರು'

ಬಂದು ಶ್ರೀಕೃಷ್ಣನು ಅನ್ನುತ್ತಾನೆ ಗುರುವೇ ದೇವನು, ತಾಯಿ-ತಂದೆ, ಆತ್ಮಾ ಮತ್ತು ಗುರುವೇ ಈಶ್ವರನೂ ಆಗಿರುವನು ಗುರುವೇ ಸರ್ವಸ್ವಿ ಪರಮಾತ್ಮನಾಗಿರುವನು ತತ್ವ ದೃಷ್ಟಿಯಿಂದ ನೋಡಲಾಗಿ ಗುರುವೇ ಪರಬ್ರಹ್ಮನಾಗಿರುವನು ಗುರುವಿಗೆ ಸಮಾನ ವಾಗುವಂತಹ ವಸ್ತುವು ಈ ಜಗತ್ತಿನಲ್ಲಿ ಎಲ್ಲಿ ಹುಡುಕಾಡಿದರೂ ಕೂಡ ಏನೂ ಸಿಗುವ ದಿಲ್ಲ ಗುರುವಿನ ಮಹಿಮೆಯು ಅಗಾಧವಾಗಿದೆ ಸದ್ಭಾಗ್ಯವಿಲ್ಲದೇ ಅವನ ಭೆಟ್ಟಿ ಯಾಗುವದಿಲ್ಲ ನಿಷ್ಕಾಮ ಪುಣ್ಯದ ರಾಶಿ ಮತ್ತು ನಿಃಸ್ಸೀಮ ವೈರಾಗ್ಯ ಎದ್ದು, ನಿತ್ಯಾನಿತ್ಯವಿವೇಕದ ಅಭಿರುಚಿಯುಂಟಾಗುತ್ತದೆಯೋ, ಆವಾಗ್ಗೆ ಸದ್ಗುರು ಕೃಪಾ ಪ್ರಾಪ್ತವಾಗುತ್ತದೆ ಸದ್ಗುರು ಕೃಪಾ ಪ್ರಾಪ್ತವಾದ ಕೂಡಲಿ ಭಕ್ತಿಯ-ಭಾಂಡಾರವು ತೆಗೆಯುತ್ತದೆ, ಆವಾಗ್ಗೆ ಕಲಿಕಾಳ ಸುದ್ಧಾ ಪಲಾಯನ ಮಾಡುತ್ತಾನೆ ಆಮೇಲಿ ಭವ ಭಯದ ಹೆದರಿಕೆ ಎಂತಹದು? ಗುರುವಿಗೆ 'ತಾಯಿ ತಂದೆ' ಅನ್ನಬೇಕೆಂದರೆ, ಅವರು ಒಂದೇ ಜನ್ಮದ ಸಲುವಾಗಿ ಇರುತ್ತಾರ, ಆದರೆ ಗುರುವು ಜನ್ಮಜನ್ಮಾಂತರದ 'ತಾಯಿ ತಂದೆ'ಯಾಗಿರುವನು ಯೋನಿದ್ವಾರದಿಂದ ಜನ್ಮಕೊಡುವವರು ಲೌಕಿಕ ತಾಯಿ ತಂದೆ ಇರುವರು ಆದರೆ ಗರ್ಭವಾಸವನ್ನೇ ತಪ್ಪಿಸುವ ತಾಯಿ ತಂದೆ ಎಂದರೆ ನಿಜವಾದ ಸದ್ಗುರುವೆಂದು ತಿಳಿಯಬೇಕು ಗುರುವಿಗೆ ಕುಲದೇವತೆ ಎನ್ನ ಬೇಕೆಂದರೆ, ಕುಲದೇವತೆಯ ಪೂಜ್ಯತ್ವವು ಕುಲಧರ್ಮ ಕುಲಾಚಾರಕ್ಕಷ್ಟೇ ಮರ್ಯಾದಿತವಾಗಿರುತ್ತದೆ, ಆದರೆ ಸರ್ವ ಕರ್ಮದಲ್ಲಿ ಅಕರ್ತಾತ್ಮನಿದ್ದು ಸರ್ವಸ್ವೀ ಪೂಜನೀಯ ಗುರುದೇವನು ಇರುತ್ತಾನೆ ಗುರುವಿಗೆ ದೇವರ ಸರಿ ಎನ್ನಬೇಕೆಂದರೆ ದೇವರಿಗೆ ದೇವತ್ವವು ಗುರುವಿನಿಂದಲೇ ಪ್ರಾಪ್ತವಾಗುತ್ತದೆ ಆದ್ದರಿಂದ ದೇವರ ತುಲನೆಯನ್ನು ಗುರುವಿನೊಡನೆ ಮಾಡಲು ಸಾಧ್ಯವಿಲ್ಲ ಗುರು ಮತ್ತು ಬ್ರಹ್ಮ ಇಬ್ಬರೂ ಸರಿಸಮಾನ ರೆಂಬುವ ಉಪಮೆಯು ಕೂಡ ಸ್ವಲ್ಪ ಗೌಣವಾಗಿರುತ್ತದೆ ಏಕೆಂದರೆ ಬ್ರಹ್ಮನಿಗೆ ಬ್ರಹ್ಮತವು ಗುರುಮುಖದಿಂದಲೇ ಬಂದಿದೆ ಅದ್ವೈತದಲ್ಲಿ ಮಾತ್ರ ಅವನು (ಬ್ರಹ್ಮನು) ಸದ್ಗುರುವಿಗೆ ಸಮನಾಗುವನು ಆದಕಾರಣ ಗುರುವಿನ ಮಹಿಮೆಯು ಅಗಾಧವಾಗಿದೆ ಅವನು ಉಪಮೆ ರಹಿತ ಇರುವನು ಬ್ರಹ್ಮನಲ್ಲಿರುವ ಬ್ರಹ್ಮತ್ವ-ಪ್ರಮಾಣ-ಪ್ರಭಾ ಪ್ರಮೇಯ ಇತ್ಯಾದಿ ವಾಕ್ಯ ಮಹಿಮಾ ಗುರುವಿನವೇ ಇರುವವು ಬ್ರಹ್ಮ ಈ ಎಲ್ಲ ಸೃಷ್ಟಿಯ ಪ್ರಕಾಶಕನಿದ್ದರೆ, ಅವನನ್ನು (ಬ್ರಹ್ಮ) ಸದ್ಗುರುವು ಪ್ರಕಾಶಮಾನ್‌ನನ್ನಾಗಿ ಮಾಡುತ್ತಾನೆ ಆದಕಾರಣ ಗುರುವಿಗಿಂತ ಹೆಚ್ಚಿಗೆ ಪೂಜ್ಯ ಯಾರೂ ಇರುವದಿಲ್ಲ ಆದ ಕಾರಣ ರಾಜಾ! ಗುರುಗಳನ್ನು ಮನುಷ್ಯಭಾವನೆಯಿಂದ ಎಂದಿಗೂ ನೋಡ ಬಾರದು. ಈ ಪ್ರಕಾರವಾಗಿ ಭಾವಯುಕ್ತ ಭಕ್ತಿಯಿಂದ ಇದ್ದರೆ ಸತ್-ಶಿಷ್ಯನ ಚಿತ್ತಶುದ್ಧಿ ಸಹಜವಾಗಿ ಆಗುತ್ತದೆ ಯಾವನ ಭಕ್ತಿ ಗುರು ಚರಣದ ಮೇಲಿ ಅತ್ಯುತ್ತಮವಾಗಿರುತ್ತದೆಯೋ, ಅವನ ಮನೋರಥವನ್ನು ದೇವರು ಪೂರ್ಣಮಾಡು ತ್ತಾನೆ ಏಕೆಂದರೆ ದೇವರು ಕೂಡ ಗುರುವಿನ ಆಜ್ಞೆಯನ್ನು ಪಾಲಿಸುತ್ತಾನೆ ಜಡ

ಮೂಢನಾದವನನ್ನೂ ಕೂಡ ದೇವರು, ಗುರು ಹೇಳಿದರೆ, ಉದ್ಧಾರ ಮಾಡುವನು ಬ್ರಹ್ಮಭಾವನೆಯಿಂದ ಯಾರು ಗುರುಸೇವೆ ಮಾಡುವರೋ, ಅವರ ಆಜ್ಞೆಯನ್ನು ದೇವರು ಪಾಲಿಸುತ್ತಾನೆ ಹಾಗೂ ಅವನಿಗೆ ನಿಜಸ್ವರೂಪದ ಸುಖವನ್ನು ಸದೈವ ಕೊಡುತ್ತಲೇ ಇರುತ್ತಾನೆ ಈ ತರಹದ ಗುರು–ಮರ್ಯಾದೆಯನ್ನು ದೇವರು ದಾಟಿ ಹೋಗುವದಿಲ್ಲ ಗುರುವಿನ ಆಜ್ಞಾಯನ್ನು ದೇವರು ಸ್ವತಃ ಪಾಲಿಸುತ್ತಾನೆ ಹಾಗೂ ಗುರುಗಳೂ ಕೂಡ ಅವನಿಗೆ (ದೇವರಿಗೆ) ಶ್ರೇಷ್ಠತ್ವವನ್ನು ಕೊಡುತ್ತಾರೆ ಆದಕಾರಣ ಅವರಿಬ್ಬರನ್ನು (ಗುರು ಮತ್ತು ದೇವರು) ಅಭಿನ್ನ ಭಾವನೆಯಿಂದ ಭಜಿಸುವ ಜನರನ್ನು ಅವರು ಉದ್ಧರಿಸುತ್ತಾರೆ ಅಂತಃಕರಣದಲ್ಲಿ ಶುದ್ಧ ಭಾವನೆಯಿಲ್ಲದೆ ಯಾರು ಬಯಲು ಡಂಭವ ತೋರಿಸಿ ಭಜಿಸುವರೋ, ಅವರು ತಮ್ಮ ಭಾವನೆಗನುಸಾರವಾಗಿ ಸಂಸಾರದಲ್ಲಿ, ಅನೇಕ ಪ್ರಕಾರದ ದುಃಖವನ್ನನುಭವಿಸುತ್ತಾರೆ ಹಾಗೂ ಸಂಸಾರ ಸಾಗರದಲ್ಲಿ ಮುಳುಗುತ್ತಿರುತ್ತಾರೆ ಅವರಲ್ಲಿಯ ಮನುಷ್ಯತ್ವವು ಉಳಿಯುವದಿಲ್ಲ ಆತ್ಮಪ್ರಾಪ್ತಿ ಯಿಂದ ದೂರಾಗುತ್ತಾರೆ ಮತ್ತು ಬ್ರಹ್ಮಪ್ರಾಪ್ತಿಯಿಂದ ಅವರು ವಂಚನೆ ಹೊಂದು ತ್ತಾರೆ ಜಂಭದಿಂದ ಹರಿಭಕ್ತಿಯು ಎಂದಿಗೂ ಹುಟ್ಟಲಾರದು ಇಲ್ಲಿ ಶುದ್ಧಭಾವನೆಯ ಹೊರತು ಎಂದಿಗೂ ಪರಮಾರ್ಥ ಪ್ರಾಪ್ತಿಯಾಗುವದಿಲ್ಲ ಎಲ್ಲ ಸಾಧನೆಗಳಲ್ಲಿ 'ಸದ್ಭಾವ'ವೇ ಶ್ರೇಷ್ಠಸಾಧನವಿರುವದೆಂಬುದನ್ನು ತಿಳಿದುಕೋ ಕೊರಡು ಕಂಬದಲ್ಲಿ ಭಗವಂತನ ಶುದ್ಧ ಭಾವನೆ ಇಟ್ಟದ್ದಕ್ಕೆ, ಅಲ್ಲಿ ದೇವರ ದೇವನು ಪ್ರಕಟನಾದನು, ಮತ್ತೆ ಸದ್ಗುರುವು ಸಾಕ್ಷಾತ್ ಪರಬ್ರಹ್ಮನೆ ಇರುವನು ಆದುದರಿಂದ ಗುರುಭಜನೆ ಯಂತಹ ಸುಲಭಮಾರ್ಗವು ಮತ್ತಾವದೂ ಇಲ್ಲ ನಿಜವಾಗಿಯೂ ಜ್ಞಾನಭಕ್ತಿಯು ಕೂಡ ಸದ್ಗುರು–ಭಕ್ತಿಯೇ ಆಗಿರುತ್ತದೆ 'ಗುರುವಿಗಿಂತ ಬ್ರಹ್ಮನು ಶ್ರೇಷ್ಠನಿದ್ದಾನೆ' ಅಂದರೆ ಗುರುವಿಗೆ ಕಡಿಮೆ ಲೆಕ್ಕಿಸಿದಂತಾಗುತ್ತದೆ ಹೀಗೆ ವಿಷಮ ಭಾವ ಶಿಷ್ಯನಲ್ಲಿ ಉಂಟಾದರೆ, ಅವನಲ್ಲಿ ಬ್ರಹ್ಮಸಾಮ್ಯವು (ಗುರು ಮತ್ತು ಬ್ರಹ್ಮ ಒಂದೇ) ಹುಟ್ಟ ಲಾರದು ನಮಗೆ 'ಸದ್ಗುರುವೇ ಪರಬ್ರಹ್ಮ' ಎಂಬ ಪ್ರೀತಿಯುಕ್ತ ನಿಜಭಾವನ ಯನ್ನಿಡುವದೇ ಅತ್ಯುತ್ತಮವಾದ ಗುರುಸೇವೆ ಇಂತಹ ನಿಜಭಾವಯುಕ್ತ ಸೇವೆ ಯಿಂದಲೇ ಶಿಷ್ಯನು ಸ್ವತಃ ಪರಬ್ರಹ್ಮನಾಗುತ್ತಾನೆ ಈ ಪ್ರಕಾರವಾದ ಗುರುಸೇವೆ ಯಿಂದಲೇ ಪ್ರಲ್ಹಾದನು ದ್ವಂದ್ವಾತೀತನಾದನು, ನಾರದ ಮಹರ್ಷಿಯೂ ಕೂಡ ಪರಬ್ರಹ್ಮನಲ್ಲಿ ಏಕರೂಪನಾಗಿ, ನಿಜಾನಂದದಿಂದ ಹಾಡುತ್ತ ಕುಣಿಯುತ್ತ, ದೇವ ದಾನವರ ಆಸ್ಥಾನದಲ್ಲಿ ಸಂಚರಿಸುತ್ತಾ ಇರುತ್ತಾನೆ ಹೀಗೆಯೇ ಗುರುಸೇವ ಮಾಡು ತ್ತಿರುವಾಗ್ಗೆ ಅಂಬರೀಷರಾಜನ ಗರ್ಭವಾಸವು ತಪ್ಪಿತು ಅವನ ಗರ್ಭವಾಸವನ್ನು ದೇವರು ಸಹಿಸಿದನು ಅವನು ತನ್ನ ಭಕ್ತನ ಸಂಸಾರ ದುಃಖವನ್ನು ತಪ್ಪಿಸಿದನು ಹೀಗೆ ಅಭಿನ್ನ ಭಾವನೆಯಿಂದ ಯಾವ ಬುದ್ಧಿವಂತನು ಗುರುವನ್ನು ಭಜಿಸುವನೋ, ಅವನು ಜನಾರ್ಧನನ ಪ್ರೀತಿಗೆ ಪಾತ್ರನಾಗುತ್ತಾನೆ ಅವನು ಅವರಿಗೆ ಸಂಸಾರದ

ಸ್ಫುರಣ ಕೂಡ ಆಗದಂತೆ ನೋಡಿಕೊಳ್ಳುತ್ತಾನೆ ಗುರು ಮತ್ತು ಬ್ರಹ್ಮ ಇಬ್ಬರೂ ಒಂದೇ ಇರುವರು, ಅದರಂತೆ ಶಿಷ್ಯನು ಕೂಡ ತದ್ರೂಪ ಇರುವನು ಯಾರು ಇವರಲ್ಲಿ ಭಿನ್ನತೆಯನ್ನು ಕಾಣುವರೋ, ಅವರು ಮಾಯೆಯಿಂದ ಆಚ್ಛಾದಿತರಾಗಿರುವರೆಂದು ತಿಳಿಯಬೇಕೆಂದು ಕವಿಯು ಹೇಳುತ್ತಾನೆ

## ಪ್ರಕರಣ ೩

ವಿಷಯ ಸುಖವು ಅಲ್ಪವಾದುದೆಂದು ತಿಳಿದು, ಪರಿಪೂರ್ಣ–ಬ್ರಹ್ಮ–ಪ್ರಾಪ್ತಿಗೋಸ್ಕರ, ಪೂರ್ಣ ಶ್ರದ್ಧೆಯಿಂದ, ಸದ್ಗುರುವಿಗೆ ಅನನ್ಯ ಭಾವನೆಯಿಂದ ಶರಣು ಹೋಗಬೇಕು ಹೇ ರಾಜಾ! ಸದ್ಗುರು ವಚನ ಮಾತ್ರದಿಂದಲೇ, ಈ ಮಾಯೆಯಿಂದ ತಾರಣೆ ಹೊಂದುವೆನೆಂಬ ಏಕನಿಷ್ಠ ಭಕ್ತಿಯಿಂದ, ದೃಢವಾದ ಶ್ರದ್ಧೆಯಿಂದ ಮುಮುಕ್ಷು ತನ್ನ ಅಭೀಷ್ಟಸಾಧಿಸುವದಕ್ಕೋಸ್ಕರ ಅವನಿಗೆ ಶರಣು ಹೋಗುತ್ತಾನೆ 'ಗುರು' ಎನ್ನುವದರಲ್ಲಿಯೂ ಅನೇಕ ಪ್ರಕಾರಗಳಿರುತ್ತವೆ ರಾಜಾ, ಆ ಪ್ರಕಾರಗಳನ್ನೂ ನಿನಗೆ ಹೇಳುತ್ತೇನೆ ಕೇಳು– ಕೆಲವರು ವೇದಾಧ್ಯಯನ ಕಲಿಸುವವರು, ಕೆಲವರು ವ್ಯಾಖ್ಯಾನ ಕೊಡುವದರಲ್ಲಿ ಚತುರರು, ಕೆಲವರು ಜ್ಯೋತಿಷಿಶಾಸ್ತ್ರದಲ್ಲಿ ಪಾರಂಗತರು ಇರುತ್ತಾರೆ ಆದರೆ ಚತುರ ಜನರು ಅವರಿಗೆ ಗುರು ಎನ್ನುವದಿಲ್ಲ ಅನೇಕರು ಆಗಮೋಕ್ತ ಮಂತ್ರದ ಉಪಾಸನೆ ಮಾಡುತ್ತಾರ ಮತ್ತು ಶಿಷ್ಯನಿಗೆ ಮಂತ್ರೋಪದೇಶ ಮಾಡಿ, ವಿಧಿಪೂರ್ವಕವಾಗಿ ಅದನ್ನು (ಮಂತ್ರ) ಜಪಿಸಲು ಹೇಳುತ್ತಾರೆ ಆದರೆ ಅದರಿಂದ ಆತ್ಮಾನುಭವ ಪ್ರಾಪ್ತಿ ಯಾವಾಗ್ಗೆ ಆಗುವದೆಂಬುದನ್ನು ಹೇಳಲು, ಗುರುಶಿಷ್ಯರಿಬ್ಬರಿಗೂ ತಿಳಿಯುವದಿಲ್ಲ ಇನ್ನಿತರರು ವಾಯುಧಾರಣಾ (ಪ್ರಾಣಾಯಾಮ ಇತ್ಯಾದಿ) ಮಾಡಲು ಕಲಿಸುತ್ತಾರೆ, ಕೆಲವರು ತರತರಹದ ಧ್ಯಾನ ಮಾಡಲು ತೋರಿಸಿ ಕೊಡುತ್ತಾರ, ಅನೇಕರು ಹಟಯೋಗದ ಬಲಿಗೆ ಬೀಳುತ್ತಾರೆ, ಮತ್ತೆ ಕೆಲವರು ಭೂಚರಿ, ಖೇಚರಿ, ಷಣ್ಮುಖಿ, ಶಾಂಭವಿ ಇತ್ಯಾದಿ ಮುದ್ರಾಯೋಗಗಳನ್ನು ಮಾಡಿಸುತ್ತಾರೆ ಕೆಲವರು ಬ್ರಹ್ಮಸಂವಾದದಲ್ಲಿ ನಿಷ್ಣಾತ, ಕಲವರು ತತ್ವನಿರೂಪಣೆಯಲ್ಲಿ ಎತ್ತಿದ ಕೈ, ಇನ್ನಿತರರು ವೈರಾಗ್ಯ ನಿರೂಪಣೆಯನ್ನು ಇಷ್ಟು ಉತ್ತಮವಾಗಿ ಹೇಳುತ್ತಾರೆಯೋ, ಅದರಿಂದ ಕೇಳುವವರಿಗ ಇಹ ಪರ ಭೋಗದ ವಿಷಯವಾಗಿ ಹೇಸಿಗೆಯುಂಟಾಗುತ್ತದೆ ಶುದ್ಧ ಬ್ರಹ್ಮನ ನಿರೂಪಣೆಯನ್ನು ಕೇಳಿದರಂತೂ, ಸಾತ್ವಿಕ ಮನುಷ್ಯನು ಪ್ರೇಮದಿಂದ ಹುಚ್ಚನಾಗುತ್ತಾನೆ ಆದರೆ ಅವನಿಗೆ, ತನ್ನ ಅಂತಃಕರಣದಲ್ಲಿಯ ಭ್ರಮೆಯು ದೂರವಾಗುವ ಗುಟ್ಟು ಮಾತ್ರ ತಿಳಿಯುವದಿಲ್ಲ ಬೆಲ್ಲ ತಯಾರಿಸಲು ಹಾಕಿದ ಗಾಣವು ಯಾವ ಪ್ರಕಾರವಾಗಿ ಕಬ್ಬಿನ ರಸವನ್ನು ಕೆಳಗಿನ ಪಾತ್ರೆಯಲ್ಲಿ ತುಂಬಿ, ತಾನು ಮಾತ್ರ ಅದರ (ಕಬ್ಬಿನ) ದಂಟನ್ನು ತನ್ನ ಬಾಯಿಯಲ್ಲಿ 'ಕರಕರ'

ಶಬ್ದ ಮಾಡುತ್ತ ತಿರುಗುತ್ತದೆಯೋ, ಆ ಪ್ರಕಾರವಾಗಿ ಶಬ್ದಪಾಂಡಿತ್ಯವುಳ್ಳವನು ಶಬ್ದ ಚಾತುರ್ಯದಿಂದ ಹಾಗೂ ಜ್ಞಾನದ ನಿರೂಪಣೆಯಿಂದ ಜನರ ಮನೋರಂಜನೆಯನ್ನು ಚೆನ್ನಾಗಿ ಮಾಡುತ್ತಾನೆ ಆದರೆ ಸ್ವತಃ ಮಾತ್ರ ಶುಷ್ಕವಾಗಿ ಬರಿ ವಟವಟ ಅನ್ನುತ್ತಿರುತ್ತಾನೆ ಅವನ ಯೋಗ ಕ್ಷೇಮವು ಚೆನ್ನಾಗಿ ನಡೆಯುತ್ತದೆ ಅವನಿಗೆ ಬೇಕಾದ ಹಾಗೆ ಪ್ರತಿಷ್ಠೆಯೂ ಸಿಗುತ್ತದೆ, ಆದರೆ ಇಂತಹ ಗುರುವಿನ ಕಡೆಯಿಂದ, ಉತ್ತಮ ಪ್ರತಿಯ ಶಿಷ್ಯನ ಆತ್ಮಪ್ರಾಪ್ತಿಯ ಹವ್ಯಾಸವು ಪೂರ್ಣವಾಗುವದಿಲ್ಲ 'ಅಮೃತ' ಎಂದು ಶಬ್ದ ಉಚ್ಚಾರಮಾಡುವದರಿಂದ ಹೇಗೆ ಅದರ ರುಚಿ ತಿಳಿಯುವದಿಲ್ಲವೋ, ಹಾಗೆಯೇ ಬರೀ ಶಬ್ದ ಜ್ಞಾನದಿಂದ, ಅನುಭವದ ಲೇಶವೂ ಕೂಡ ಸಿಗುವದಿಲ್ಲ ಯಾವನು ಅನನುಭವಿ ಇರುವನೋ ಅವನು ಇನ್ನೊಬ್ಬನಿಗೆ ಏನು ಅನುಭವ ಕೊಡಬಲ್ಲನು? ಆದಕಾರಣ ಯಾವನು ಪೂರ್ಣ ಅನುಭವಿಕನಿರುವನೋ, ಅವನೇ ಸದ್ಭಾವದಿಂದ ಶಿಷ್ಯನ ಉದ್ಧಾರ ಮಾಡುತ್ತಾನೆ ಈ ಪ್ರಕಾರವಾಗಿ ಬೇರೆ ಬೇರೆ ತರಹದ ಅನೇಕ ಪ್ರಕಾರದ ಗುರುಗಳು ಇದ್ದಾರೆ. ಆದರೆ ಯಾವನು ಅಪರೋಕ್ಷಾನುಭವದ ಪ್ರಾಪ್ತಿ ಶಿಷ್ಯನಿಗೆ ಮಾಡಿಕೊಡುವನೋ, ಅವನಿಗೆ 'ಸದ್ಗುರು ಸ್ವಾಮಿ' ಅನ್ನುತ್ತಾರೆ ಯಾವನ ಭಾಷಣದಿಂದ 'ಮಿಥ್ಯಾ ಜಗದ್ಭಾಸ' ಇಲ್ಲದಂತೆ ಆಗುತ್ತದೆಯೋ ಮತ್ತು 'ಸತ್ಯ' (ಸ್ವರೂಪಾಕಾರಾಭಾಸ) ಉದಯಕ್ಕೆ ಬರುತ್ತದೆಯೋ, ಅವನಿಗೇ ವೇದಶಾಸ್ತ್ರಗಳು ಸದ್ಗುರುತ್ವವನ್ನು ಕೊಟ್ಟಿರುತ್ತವೆ ಮಂತ್ರ ತಂತ್ರ ಉಪದೇಶ ಮಾಡುವವರು ಕೂಡ ದೊಡ್ಡವರೆ ಇರುತ್ತಾರೆ, ಆದರೆ ಯಾವನಲ್ಲಿ ಪೂಜ್ಯ ಪೂಜ್ಯಕತೆಯ ಅಭೇದತ್ವವು ಇರುವದೋ, ಅವನೇ ನಿಜವಾದ 'ಸದ್ಗುರು ಸ್ವಾಮಿ' ಇರುವನು ಕೆಲವರ ಬ್ರಹ್ಮಜ್ಞಾನವು ಶುದ್ಧವಾಗಿರುತ್ತದೆ, ಬ್ರಹ್ಮಸ್ವರೂಪವನ್ನು ನೋಡಿ ಅದರಲ್ಲಿ ಅವರ ಮನಸ್ಸು ಏಕರೂಪವಾಗುತ್ತದೆ, ದ್ವೈತ ಭಾವನೆಯು ನಷ್ಟವಾಗಿ, ನಾಲ್ಕೂ ವಾಣಿಗಳು ಮೂಕ ಸ್ವರೂಪ ತಾಳುತ್ತವೆ, ಎಲ್ಲ ಇಂದ್ರಿಯಗಳು ಸಮಾಧಿಸ್ತವಾಗುತ್ತವೆ, ಪ್ರಾಣದ ಗತಿಯು ಇದ್ದಲ್ಲಿಯೇ ಕುಂಠಿತವಾಗುತ್ತದೆ, ಈ ಪ್ರಕಾರವಾಗಿ ಪರಮ ಅದ್ಭುತ ಬ್ರಹ್ಮನನ್ನು ದೃಷ್ಟಿಸಿ ದೇಹವು ಚಲನ ವಲನ ರಹಿತವಾಗುತ್ತದೆ ಈ ಪ್ರಕಾರವಾಗಿ ಇದ್ದವನಿಗ, ಶಿಷ್ಯನು ಭಕ್ತಿಭಾವನೆಯಿಂದ ವಿನಂತಿ ಮಾಡಿಕೊಳ್ಳುತ್ತಾನೆ, ಆದರ ಅವನು ಅವನನ್ನು ವಿಚಾರಿಸುವದೂ ಇಲ್ಲ, ಇಲ್ಲವೆ ಅವನಿಗೆ ತಿಳಿಸಿ ಹೇಳುವದೂ ಇಲ್ಲ ಅವನು ತಾಟಸ್ಥ್ಯಭಾವದಿಂದ ಮೂಕನಾಗಿರುತ್ತಾನೆ ಇನ್ನು ಕೆಲವರು ಬ್ರಹ್ಮಾನುಭವ ಪಡೆದವರು ಇರುತ್ತಾರೆ ಬಾಧ್ಯ ಬಾಧಕತೆಯ ಭ್ರಮೆಯು ಕೂಡ ದೂರವಾಗಿರುತ್ತದೆ. ದ್ವೈತಭಾವನೆಯ ಕರ್ಮವು ಇರುವದಿಲ್ಲ, ಜಗತ್ತಿನಲ್ಲಿ ಅವನಿಗ ಎಲ್ಲಿಯೂ ದ್ವೈತಭಾವನೆ ಇರುವದಿಲ್ಲ, ಆದರೆ ಅವನ ನಡತೆಯು ವಿಚಿತ್ರವಾಗಿರುತ್ತದೆ, ಅವನು ಏನಾದರೂ ಅಘಟಿತ ಕೃತ್ಯವನ್ನು ಮಾಡುತ್ತಾನೆ ಹಾಗೂ ಅತಿಶಯ ಉಗ್ರತೆಯ ಮೂಲಕ, ಭಯದಿಂದ ಅವನ ಹತ್ತಿರ ಯಾರೂ ಹೋಗುವದೇ ಇಲ್ಲ ಅವನು ತನ್ನಷ್ಟಕ್ಕೆ ತಾನೇ ನಗುತ್ತಿರುತ್ತಾನೆ,

ಪರಮಾರ್ಥದ ವಿಷಯವನ್ನು ಧ್ವನಿತಾರ್ಥದಿಂದ ಹೇಳುತ್ತಾನೆ, ಆದರೆ ಅದರಿಂದ ಶಿಷ್ಯನಿಗೆ ಯಾವ ತರಹದ ಬೋಧವು ಆಗುವದಿಲ್ಲ ಮತ್ತು ಅದರಿಂದ ಮನಸ್ಸಿನ ಸಮಾಧಾನವಾಗುವದಿಲ್ಲ ಈ ಪ್ರಕಾರವಾಗಿ ಯಾವ ಬ್ರಹ್ಮಜ್ಞಾನಿಯ ನಡತೆಯು ಇರುವದೋ, ಅವನ ಬ್ರಹ್ಮಸ್ಥಿತಿಯು ಜನರಿಗೆ ತಿಳಿಯುವದಿಲ್ಲ ಮತ್ತೆ ಭಕ್ತಿಯಿಂದ ಜ್ಞಾನಪ್ರಾಪ್ತಿಗಾಗಿ ಅವನ ಕಡೆಗೆ ಯಾರು ಹೋಗುತ್ತಾರೆ? ಹೇ ರಾಜಾ, ಇನ್ನು ಮೇಲೆ ಸದ್ಗುರುವಿನ ಅತಿಶಯ ನಿಜವಾದ ಲಕ್ಷಣಗಳನ್ನು ಹೇಳುತ್ತೇನೆ ಕೇಳು ಅಂತಃಕರಣ ಪೂರಕವಾಗಿ ಶ್ರದ್ಧೆಯಿಂದ ಕೇಳಿದರೆ, ನೀನು ಅತ್ಯಂತ ಸುಖಿಯಾಗುವಿ ಯಾವನು ಕಾಯಾ-ವಾಚಾ-ಮನಸ್ಸಿನಿಂದ ದೀನ ಜನರ ಮೇಲೆ ದಯೆ ಮಾಡುವನೋ, ಶಿಷ್ಯನ ಸಂಸಾರ ಬಂಧನವನ್ನು ಇಲ್ಲದಂತೆ ಮಾಡುವನೋ ಮತ್ತು ಅಹಂಕಾರವನ್ನು ಉಳಿಯಗೊಡುವದಿಲ್ಲವೋ, ಯಾವನು ಶಬ್ದಜ್ಞಾನದಲ್ಲಿ ಪಾರಂಗತನಿದ್ದು, ಯಾವಾಗಲೂ ಬ್ರಹ್ಮಾನಂದದಲ್ಲಿ ನಲಿಯುತ್ತಿರುತ್ತಾನೋ, ಅವನೇ ಶಿಷ್ಯನ ಭಕ್ತಿಭಾವನೆಯಂತೆ ಬೋಧ ಮಾಡಲು ಸಮರ್ಥನಿರುತ್ತಾನ ಯಾರ ಭಾವನೆಯು ಹೇಗಿದೆಯೋ, ಹಾಗೆಯೇ ಅವರಿಗೆ ಅನುಭವ ಕೊಡುತ್ತಾನೆ, ಆದರೆ ಮನಸ್ಸಿನಲ್ಲಿ ಗುರುತ್ವದ ಅಭಿಮಾನವನ್ನು ಎಳ್ಳಷ್ಟು ಹಿಡಿಯುವದಿಲ್ಲ ಶಿಷ್ಯನ ಕಡೆಯಿಂದ ಸೇವೆ ತೆಗೆದು ಕೊಳ್ಳುವದು, ಅವನು ಕನಸಿನಲ್ಲಿಯೂ ಕೂಡ ನೆನಿಸುವದಿಲ್ಲ ಇಷ್ಟೇ ಅಲ್ಲದೆ ಅವನು ತಾನಾಗಿಯೇ ಶಿಷ್ಯನ ಸೇವೆಯನ್ನು ಮಾಡುತ್ತಾನೆ ಮತ್ತು ಶಿಷ್ಯನನ್ನು ಪೂಜ್ಯನೆಂದು ತಿಳಿಯುತ್ತಾನೆ ಶಿಷ್ಯನನ್ನು ಮಗನಂತೆ ತಿಳಿಯಬೇಕೆಂದು ಸ್ಮೃತಿವಾಕ್ಯದ ಪ್ರಮಾಣ ಇದೆ, ಅದಕ್ಕೆ ಅನುಸರಿಸಿ ಶಿಷ್ಯನನ್ನು ಹೀನನನ್ನಾಗಿ ನೋಡದೆ, ಬ್ರಹ್ಮ-ಭಾವನೆ ಯಿಂದಲೇ ನೋಡುತ್ತಾನೆ ಶಿಷ್ಯನು ಭಕ್ತಿಯ ಸಲುವಾಗಿ ಅವನ ಸೇವೆಯನ್ನು ಮಾಡುತ್ತಾನೆ, ಆದರೆ ಅವನು ಅವನನ್ನು ಸೇವಕನೆಂದು ತಿಳಿಯುವದಿಲ್ಲ ಎಲ್ಲ ಪ್ರಾಣಿ ಮಾತ್ರಗಳಲ್ಲಿ ಭಗವಂತನನ್ನು ನೋಡುವ ಅವನಿಗೆ, ಶಿಷ್ಯನು ಹೇಗೆ ಬೇರೆ ಕಾಣಬಲ್ಲನು ? ಇರಲಿ ಈ ತರಹದಿಂದ ನಾನೊಬ್ಬ ದೊಡ್ಡ ಯೋಗಿ ಇರುವೆನೆಂಬ ಜಂಭವನ್ನೂ ಕೊಚ್ಚುವದಿಲ್ಲ ಗುರುತ್ವದ ಅಭಿಮಾನವು ಎಂದಿಗೂ ತಲೆಯೆತ್ತುವದಿಲ್ಲ ತನ್ನ ನಿರ್ವಾಹದ ಭಾರವನ್ನು ಕನಸಿನಲ್ಲಿಯೂ ಕೂಡ ಶಿಷ್ಯನ ಮೇಲೆ ಹಾಕುವದಿಲ್ಲ, ಇಷ್ಟೆ ಅಲ್ಲದೆ, ಒಂದು ವೇಳೆ ಶಿಷ್ಯನು ಕಷ್ಟದಲ್ಲಿದ್ದರೆ, ಅವನು ಅವನ ಕಷ್ಟವನ್ನು ಕೂಡಲೆ ನಿವಾರಿಸುತ್ತಾನೆ ನಾನೊಬ್ಬ ಅಕರ್ತಾತ್ಮ ನಿಜಾತ್ಮಯೋಗಿ ಇರುವನೆಂದು ಅವನು ವಿಷಯ ಸೇವನೆಯನ್ನು ಮಾಡುವದಿಲ್ಲ ಇಲ್ಲವೆ ವಿಷಯವನ್ನು ಸಂಪೂರ್ಣ ವಾಗಿ ಬಿಟ್ಟುಬಿಡುವೆನೆಂಬ ಅಟ್ಟಹಾಸಕ್ಕೆ ಬೀಳುವದಿಲ್ಲ ಅವನು ವಿಷಯವನ್ನು ಸೇವಿಸುವದೂ ಇಲ್ಲ ತ್ಯಾಗವೂ ಮಾಡುವದಿಲ್ಲ ಅವನು ತನಗೆ ಬಂದ ಭೋಗ ಗಳೆಲ್ಲವು ಪ್ರಾರಬ್ಧಾಧೀನವಾಗಿವೆಯೆಂದು ತಿಳಿದು, ತಾನು ಪರಬ್ರಹ್ಮಯೋಗದಲ್ಲಿ ತಲ್ಲೀನನಿರುತ್ತಾನೆ ದೈವಯೋಗದಿಂದ ದೇಹವು ಪಲ್ಲಕ್ಕಿಯಲ್ಲಿ ಕೂಡಲಿ ಇಲ್ಲವೇ

ಹೇಸಿಗೆಯಲ್ಲಿ ಬೀಳಲಿ, ಅವೆರಡರ ಸುಖ ದುಃಖಗಳು ಅವನನ್ನು ಎಂದಿಗೂ ಎದುರಿಸ ಲಾರವು ದೇಹದಲ್ಲಿದ್ದು ದೇಹಾಭಿಮಾನವಿಲ್ಲ, ಮನೆಯಲ್ಲಿದ್ದು ಮನೆಯ ಆಸಕ್ತಿ ಇಲ್ಲ, ಹಾಗೂ ಸಮಾಜದಲ್ಲಿದ್ದು ಎಲ್ಲರಂತೆ ಎಲ್ಲ ವ್ಯವಹಾರ ಮಾಡುತ್ತಲಿರುತ್ತಾನೆ ಅವನಿಗೆ ಅವನ ಹೆಂಡತಿ ತನ್ನ ಯಜಮಾನ (ಪತಿ), ಮಗನು ತನ್ನ ತಂದೆ ಮತ್ತು ಶಿಷ್ಯನು ತನ್ನ ಗುರು ಅನ್ನುತ್ತಾನೆ, ಆದರೆ ಅವನು ಅವರಲ್ಲಿ ನಿರಾಸಕ್ತನಾ ಗಿರುತ್ತಾನೆ ಹೀಗೆ ಪೂರ್ಣಾನುಭವದಿಂದ ಭಕ್ತಿಯನ್ನು ಮಾಡಿ ತೋರಿಸುತ್ತಾನೆ ಎಲ್ಲ ಪ್ರಾಣಿ ಮಾತ್ರಗಳಲ್ಲಿ ಭಗವಂತನನ್ನೇ ನೋಡಬೇಕು ಮತ್ತು ಹಾಗೆಯೇ ಭಜನೆ ಮಾಡಬೇಕೆಂದು ಶಿಷ್ಯನಿಗೆ ಉಪದೇಶಿಸುತ್ತಾನೆ ಹೀಗೆ ಸದ್ಗುರುವಿನ ನಿಜವಾದ ಲಕ್ಷಣಗಳಿರುತ್ತವೆ ಆದರೆ ಜ್ಞಾನಾಭಿಮಾನದಿಂದ ಪಂಡಿತರಿಗೆ ಇದು ತಿಳಿಯುವ ದಿಲ್ಲ ಪೂರ್ಣ ಅನುಭವವಿದ್ದವರೇ ಇದರ ಗುಟ್ಟನ್ನು ತಿಳಿಯುತ್ತಾರೆ ಇತರರ ಜ್ಞಾನವು ಇಲ್ಲಿ ಕುಂಠಿತವಾಗುತ್ತದೆ ಅವನ ಗುರುತ್ವದ ಮುಖ್ಯವಾದ ಲಕ್ಷಣವೆಂದರೆ ಅವನಲ್ಲಿ ಪರಿಪೂರ್ಣ ಶಾಂತಿಯು ನೆಲೆಸಿರುತ್ತದೆ ಹೇ ರಾಜಾ! ಸದ್ಗುರುವಿನ ಮುಖ್ಯ ಲಕ್ಷಣ ಮತ್ತು ಅಲಂಕಾರವೆಂದರೆ, ಅವನಲ್ಲಿಯ ಅಪ್ರತಿಮ ಶಾಂತಿಯೇ ಆಗಿರುತ್ತದೆ ಜಗತ್ತಿನಲ್ಲಿ 'ಶಾಂತಿ'ಯು ಅನಾಥಳಾಗಿದ್ದಳು ಅವಳಿಗೆ ಎಲ್ಲಿಯೂ ಸ್ಥಾನವಿರಲಿಲ್ಲ ಆದುದರಿಂದ ಅವಳು ಸುಖವಾಗಿ ಇರಲು ಗುರುಚರಣದ ಆಶ್ರಯಕ್ಕೆ ಬಂದಳು ತವರಿಗೆ ಬಂದ ಕನ್ಯೆಯು ಹೇಗ ನಿರ್ಬಂಧವಾಗಿ ವಿಹಾರ ಮಾಡುತ್ತಾ ಳೆಯೋ ಹಾಗೆ ಶಾಂತಿಯೂ ಕೂಡ ಅತಿಶಯ ಆನಂದದಿಂದ ಇರಲು ಬಂದಿರುತ್ತಾಳೆ ವೇದಶಾಸ್ತ್ರದಲ್ಲಿಯ ಗುಟ್ಟನ್ನು ಅರಿತು ಕೂಡ ವಿದ್ವತ್ತೆಯಿಂದ ಮೆರೆಯುವದಿಲ್ಲವೋ, ಯಾವನಿಗೆ ಆತ್ಮಾನುಭವದಿಂದ ಪೂರ್ಣ ಶಾಂತತೆಯು ಬಂದಿರುತ್ತದೆಯೋ, ಅವನೆ ನಿಃಸಂದೇಹವಾಗಿ ಸದ್ಗುರುವು ಇರುತ್ತಾನೆ

ರಾಜಾ! ಈ ಪ್ರಕಾರವಾಗಿ ಸದ್ಗುರುವಿನ ಸ್ಥಿತಿಯ ಎಲ್ಲ ಲಕ್ಷಣಗಳನ್ನು ನಿನಗೆ ಹೇಳಿದ್ದೇನ ಈಗ ಶಿಷ್ಯನ ಲಕ್ಷಣಗಳನ್ನು ಹೇಳುತ್ತೇನೆ ಅದನ್ನು ಚೆನ್ನಾಗಿ ಕಿವಿಗೊಟ್ಟು ಕೇಳು

ಕೆಲವು ಶಿಷ್ಯರು ಮೇಲೆ ಮೇಲೆ ಸಾತ್ವಿಕರಂತೆ ಕಾಣುತ್ತಾರೆ, ಆದರೆ ಅಂತರಂಗ ದಿಂದ ವಿಕಲ್ಪವುಳ್ಳವರಾಗಿರುತ್ತಾರೆ ಕೆಲಕೆಲವರಂತೂ ಪೂರ್ತಿ ಡಾಂಭಿಕರಾಗಿರುತ್ತಾರೆ ಕೆಲವರು ಕಳ್ಳತನದಿಂದ ಜ್ಞಾನಾರ್ಜನೆ ಮಾಡಲು ಸಮರ್ಥರಿರುತ್ತಾರೆ ಕೆಲವರಿಗೆ ತಮ್ಮ ಮಾನಸನ್ಮಾನದ ಇಚ್ಛೆ ಮಾತ್ರ ಇರುತ್ತದೆ, ಕೆಲವರಿಗೆ ತಮ್ಮ ದೊಡ್ಡಿಸ್ತನದ ಬಡಿವಾರವಿರುತ್ತದೆ, ಕೆಲವರಿಗೆ ತಮ್ಮ ಜ್ಞಾನದ ಗರ್ವವಿರುತ್ತದೆ, ಆದರೆ ಕೆಲವರಿಗೆ ಸಿದ್ಧಿಯ ಪ್ರಾಪ್ತಿಯ ಭ್ರಮೆ ಇರುತ್ತದೆ ಇನ್ನಿತರರು ವಾದ ವಿವಾದ ಮಾಡುವವ ರಿರುತ್ತಾರೆಂದರೆ, ಬೇರೆಯವರು ಬರಿ ವಟ ವಟ ಮಾತನಾಡುವವರಿರುತ್ತಾರೆ ಆದರೆ ಕೆಲವರು ತಾವು ಬ್ರಹ್ಮನಿಷ್ಠರಿರುವರೆಂಬ ಅಭಿಮಾನದಿಂದ ಕಾರ್ಯವನ್ನೇ ಮಾಡುವ

ದಿಲ್ಲ! ಒಬ್ಬನಿಗೆ ಪ್ರಾಣಾಯಾಮ ಮಾಡಲು ಸೇರುತ್ತದೆ, ಇನ್ನೊಬ್ಬನಿಗೆ ಆಸನ ಜಯದ ಅಭಿಮಾನವಿರುತ್ತದೆ, ಒಬ್ಬನ ಮನಸ್ಸು ಸಂಶಯಗ್ರಸ್ತವಾದುದರಿಂದ, ಅವನು ಯಾರ ಮೇಲೆಯೂ ಪೂರ್ಣ ವಿಶ್ವಾಸವಿಡುವದಿಲ್ಲ ಕೆಲವರು ಬಹಳ ಆಗ್ರಹಪೂರ್ವಕ ಗುರೂಪದೇಶ ತೆಗೆದುಕೊಳ್ಳುತ್ತಾರೆ, ಆಮೇಲೆ ಅದು ತಮಗೆ ತಿಳಿಯುವದೋ ಇಲ್ಲವೋ ಎಂದು ಮನದಲ್ಲಿ ಸಂಶಯಿತರಾಗುತ್ತಾರೆ ಈ ಪ್ರಕಾರವಾಗಿ ಶಿಷ್ಯರ ಅನೇಕ ತರಹ ಗಳಿರುತ್ತವೆ ಆದರೆ ನಿಜವಾಗಲೂ ಅವರೆಲ್ಲರೂ ಡಾಂಭಿಕರೆಂದು ತಿಳಿಯಬೇಕು ಈಗ ಸತ್‌ಶಿಷ್ಯನ ಲಕ್ಷಣಗಳನ್ನು ಹೇಳುವೆನು ಕೇಳು ಸತ್-ಶಿಷ್ಯನು ನಿಷ್ಕಪಟ ಬುದ್ಧಿ ಯವನು, ಶುದ್ಧ ಸಾತ್ವಿಕನೂ ಹಾಗೂ ನಿಜವಾದ ಪರಮಾರ್ಥಿಯಾಗಿರುತ್ತಾನೆ ಅವನು ಡಾಂಭಿಕನಿರುವದಿಲ್ಲ ಅವನು ಗುರುವಿನ ಗುಲಾಮನು, ಗುರು ವಚನಕ್ಕೆ ಆರ್ತನು ಮತ್ತು ತನ್ನ ಸರ್ವಸ್ವವನ್ನು, ಅವನ ಮೇಲಿಂದ ನಿವಾಳಿಸುವವನು ಇರು ತ್ತಾನೆ ಸತ್ ಶಿಷ್ಯನು, ಸದ್ಗುರುವಿನ ವಚನಕ್ಕಾಗಿ ತನ್ನ ಪ್ರಾಣತ್ಯಾಗ ಮಾಡಲು ತಯಾರಿರುತ್ತಾನೆ ಅವನು ಗುರು ಆಜ್ಞೆಯನ್ನು ಎಳ್ಳಷ್ಟೂ ಮೀರುವದಿಲ್ಲ ಗುರು ವನ್ನು ಮನುಷ್ಯನೆಂದು ಕಾಣುವದು ಅವನಿಗೆ ಗೊತ್ತೇ ಇರುವದಿಲ್ಲ ಗುರುಸೇವೆಗಾಗಿ ಯಾವಾಗಲೂ ಸದೈವ ಸಿದ್ಧನಾಗಿರುತ್ತಾನೆ ಅಂತಃಕರಣದಿಂದ ಸೇವೆ ಮಾಡಲು ಅವನು ಸಿದ್ಧನಿರುತ್ತಾನೆ, ಎಂಟೂ ಪ್ರಹರ ತನ್ನ ದೇಹವನ್ನು ಸವೆಯಿಸಬೇಕಾದರೂ, ಅವನು ಸ್ವಲ್ಪು ಕೂಡ ಆಲಸ್ಯವನ್ನು ತಂದುಕೊಳ್ಳುವದಿಲ್ಲ ಸೇವೆಯಲ್ಲಿ ಉಚ್ಚ, ನೀಚವೆಂಬ ಭಾವನೆಯು ಅವನಲ್ಲಿರುವದಿಲ್ಲ ತನ್ನ ದಿನನಿತ್ಯದ ಧರ್ಮ-ಕರ್ಮಗಳಿಗೆ ಕಡಿಮೆ ಲೆಕ್ಕಿಸಿ, ಗುರುಸೇವೆಯೇ ಉತ್ತಮ ಕರ್ಮವೆಂದು ತಿಳಿಯುತ್ತಾನೆ ಅವನು ಗುರುಸೇವೆಯನ್ನು ತೋರಿಕೆಗಾಗಿ ಮಾಡದೆ, ಶುದ್ಧ ಭಾವನೆಯಿಂದ ಮಾಡುತ್ತಾನೆ ಸೇವೆಯಲ್ಲಿ ಕಷ್ಟ ಉಂಟಾದಷ್ಟು ಅವನಿಗೆ ವಿಶೇಷ ಆನಂದ ಉಂಟಾಗುತ್ತದೆ ಗುರುವಿಗೆ ಸತ್-ಶಿಷ್ಯ ಮತ್ತು 'ಅಸತ್-ಶಿಷ್ಯ' ಇವರಿಬ್ಬರೂ ಒಂದೇ ಆದರೆ ಯಾರ ಹೃದಯದಲ್ಲಿ ಹೇಗೆ ಭಾವನೆಯಿರುತ್ತದೆಯೋ ಹಾಗ, ಅವರಿಗ ಫಲಪ್ರಾಪ್ತಿಯಾ ಗುತ್ತದೆ 'ಭಾವನೆಯಲ್ಲಿಯೇ ದೇವನಿದ್ದಾನೆ' (ಕಟ್ಟಿಗೆ, ಕಲ್ಲು ಇಲ್ಲವೆ ಮಣ್ಣಿನಲ್ಲಿ ಇರುವದಿಲ್ಲ) ಇದೇ ಉಪದೇಶದ ಮುಖ್ಯ ಸಾರಭಾಗವಾಗಿದೆ (ಸಾರವಾಗಿದೆ) ನಮ್ಮ ಭಾವನೆಯಿಂದಲೇ ನಾವು ನಮ್ಮ ಫಲ ಭೋಗಿಸುತ್ತೇವೆ ತನ್ನ ಜಾಣತನದ ಬಲದ ಮೇಲೆ, ಮೃತ್ಯುವನ್ನು ಗೆದೆಯುವೆನೆಂದು ಪ್ರಯತ್ನಿಸಿದ್ದರಿಂದ ಹಿರಣ್ಯಕಶ್ಯಪು ಗತಿಕಾಣದಾದನು ವೇಳೆಯನ್ನು ಅವಲೋಕಿಸಿ ದೇವನು ಅವನನ್ನು ಕೊಂದನು ಆದರೆ ಆ ಪ್ರಲ್ಹಾದನನ್ನು ನೋಡಿರಿ! ಏನಾದರೂ 'ನನ್ನ ರಕ್ಷಣೆಯನ್ನು ಮಾಡುವವನು ದೇವಾಧಿದೇವನಿರುವನು' ಎಂಬ ನಿಶ್ಚಯಾತ್ಮಕ ಭಾವನೆಯನ್ನು ಇಟ್ಟಿರುವದರಿಂದ, ಆ ಭಾವನೆಯ ಬಲದಿಂದಲೇ, ಅವನನ್ನು ಕೊಲ್ಲಬೇಕೆಂದು ಹಿರಣ್ಯಕಶ್ಯಪು ರಾಜನು ಎಷ್ಟು ಬೇಕಾದಷ್ಟು ಪ್ರಯತ್ನಿಸಿದರೂ, ಅದೆಲ್ಲವೂ ವ್ಯರ್ಥವಾಯಿತು. ಜ್ಞಾನಾಭಿ

ಮಾನದಿಂದ ಪರಮಾರ್ಥದ ಹಾನಿಯಾಗುತ್ತದೆ ಆದಕಾರಣ ಯಾವನು ಸದ್ಭಾವನೆ ಯಿಂದ ಪರಿಪೂರ್ಣನಿರುವನೋ, ಅವನೇ ಜನ್ಮ ಮರಣದ ಪಾಶವನ್ನು ಹರಿದುಹಾಕು ತ್ತಾನೆ 'ಶಿಷ್ಯನ ಪರೀಕ್ಷೆಯನ್ನು ನೋಡುವ ನಾನೊಬ್ಬ ಜ್ಞಾನಿಯು' ಎನ್ನುವ ಅಹಂಕಾರವು ಸದ್ಗುರುವಿಗೆ ಇರುವದಿಲ್ಲ ಆದರೆ ಅವನಲ್ಲಿ (ಸದ್ಗುರುವಿನಲ್ಲಿ) ಯಾವನ ಭಕ್ತಿ ಹೇಗೆ ಇರುವದೋ ಹಾಗೆ ಅವನಿಗೆ ಫಲಪ್ರಾಪ್ತಿಯಾಗುತ್ತದೆ ರಾಜಾ! ಇದಿರಲಿ, ಆದರೆ ಸತ್‌ಶಿಷ್ಯನ ಸದ್ಭಾವ ಎಷ್ಟು ವಿಲಕ್ಷಣವಾಗಿರುತ್ತದೆ ನೋಡು! ಗುರು ಮತ್ತು ಬ್ರಹ್ಮ ಇಬ್ಬರೂ ಒಂದೇ ಎಂದು ನಿಶ್ಚಯಪೂರ್ವಕವಾಗಿ ಮನ್ನಿಸು ತ್ತಾರೆ ಸದ್ಗುರು ಇವನು ನನ್ನ ಇಂದ್ರಿಯ ವೃತ್ತಿಗೆ ಗತಿ ಕೊಡುವವ ಮತ್ತು ನನ್ನ ಹೃದಯಸ್ಥ 'ಆತ್ಮ'ನಿದ್ದಾನೆ ಹಾಗೂ ಅವನ ಬಾಹ್ಯ ಸೇವೆಯನ್ನು ಮಾಡುವಾಗ್ಗೆ ಸದ್ಗುರುವಿಗೆ ಸಾಕ್ಷಾತ್ ಬ್ರಹ್ಮಮೂರ್ತಿಯೆಂದು ತಿಳಿಯುತ್ತಾನೆ ಅವನು ಸದ್ಗುರು ಚರಣದಲ್ಲಿ ತನು-ಮನ-ಧನವನ್ನು ಅರ್ಪಿಸಿ, ಸರ್ವಸ್ವದಿಂದ ತನ್ನ ಪ್ರಾಣವನ್ನು ಕೂಡ ಸಮರ್ಪಿಸುತ್ತಾನೆ ಅಂದರೆ ಸಂಪೂರ್ಣವಾಗಿ ಆತ್ಮಾರ್ಪಣೆ ಮಾಡುತ್ತಾನೆ. ಆದ್ದರಿಂದ ಸದ್ಗುರುವು ಕೂಡ ಬಹಳ ಆನಂದಿತನಾಗಿ ಅವನ ಮೇಲೆ ಮೋಹಿತ ನಾಗುತ್ತಾನೆ ಮತ್ತು ತಾನು ಸ್ವಾಮಿ ಇದ್ದರೂ, ಬಹಳ ಪ್ರೀತಿಯಿಂದ ಸೇವಕನ ಆಧೀನನಾಗಿ ಇರುತ್ತಾನೆ ಬಲಿಯು ಸರ್ವಸ್ವ ಅರ್ಪಣ ಮಾಡಿದನು ಆದುದರಿಂದ ಭಗವಂತನು ಅವನ ಬಾಗಿಲು ಕಾಯುವ ದ್ವಾರಪಾಲಕನಾದನು ಭಜನ ಭಕ್ತಿಯ ಮಹಿಮೆಯೇ ಹೀಗಿರುತ್ತದೆ ಇದರಲ್ಲಿ ಸ್ವಾಮಿ ಇದ್ದವನೇ ಸೇವಕನ ಹತ್ತಿರ ಅವನನ್ನು ಕಾಯುವವನಾಗಿರುತ್ತಾನೆ ಉತ್ತಮ ಭಕ್ತನು ಇಷ್ಟೊಂದು ಭಗವಂತನ ಪ್ರೀತಿಗೆ ಪಾತ್ರನಾಗುತ್ತಾನ, ಆದರೆ ಈ ಸ್ಥಿತಿ ಭೋಳೆ ಭಾವಿಕ ಜನರಿಗ ಹೇಗೆ ಸಿಗಬೇಕು? ಆದಕಾರಣ ಸರ್ವದೃಷ್ಟಿಯಿಂದಲೂ ಸದ್ಗುರುವಿಗೆ ಶರಣು ಹೋಗಬೇಕು ಅಂದರೆ ಅವನು ಸಂತುಷ್ಟನಾಗಿ ಭಜನ ಧರ್ಮದ ಉಪದೇಶವನ್ನು, ಶಿಷ್ಯನಿಗೆ ಮಾಡು ತ್ತಾನೆ ಯಾವ ಭಜನದಿಂದ ಭಗವಂತನನ್ನು ಭಜಿಸಿ ಉತ್ತಮನಾದನೋ, ಆ ಎಲ್ಲ ಭಾಗವತ ಧರ್ಮವನ್ನು ಸದ್ಗುರುವಿನ ಕಡೆಯಿಂದ ನಿಶ್ಚಿತಾರ್ಥದಿಂದ ಮತ್ತು ಭಕ್ತಿಯಿಂದ ಕಲಿಯಬೇಕು ಭಾಗವತ ಧರ್ಮದ ಮುಖ್ಯ ಲಕ್ಷಣವೆಂದರೆ, ಸತ್ಸಂಗತಿ ಯನ್ನು ಪ್ರಾಮುಖ್ಯವಾಗಿ ಹಿಡಿಯಬೇಕು, ಸದ್ಗುರುವು ಕೂಡ ದುರ್ಜನರ ಸಂಗತಿ ಯನ್ನು ಬಿಟ್ಟುಬಿಡಲು ಇದೇ ಉಪದೇಶ ಮಾಡುತ್ತಾರ

## ಪ್ರಕರಣ ೪

ಪ್ರಾರಬ್ಧಾನುಸಾರವಾಗಿ ದೇಹದಲ್ಲಿದ್ದು ಸುಖ-ದುಃಖವನ್ನನುಭವಿಸಿದಲ್ಲಿ ಅವು (ಸುಖ, ದುಃಖ) ಬಂಧನಕಾರಕವಾಗುವದಿಲ್ಲ ಈ ಅಪ್ರತಿಮ ಗುರುವಿನ ಗುಟ್ಟು ಶ್ರದ್ಧೆಯುಳ್ಳ ಶಿಷ್ಯನಿಗಷ್ಟೇ ಸಿಗುತ್ತದೆ ಶ್ರದ್ಧೆಯಿಲ್ಲದವನಿಗೆ ಈ ಗುರುಗಮ್ಯವು ಸಿಕ್ಕುವದೇ ಇಲ್ಲ ಮತ್ತು ಈ ಗುರುಗಮ್ಯವು ಕೈಗ ಸಿಗದೇ ಹೋದರೆ, ಸುಖದುಃಖ ದಲ್ಲಿ ಸಮತ್ವ ಭಾವನೆಯು ಎಂದಿಗೂ ಉತ್ಪನ್ನವಾಗುವದಿಲ್ಲ ಎಲ್ಲಿಯವರೆಗೆ ದೇಹ ದಲ್ಲಿ ಅಹಂಭಾವವು ದೃಢವಾಗಿರುತ್ತದೆಯೋ, ಅಲ್ಲಿಯವರೆಗೆ ಸುಖ ದುಃಖಗಳು ಭಯಾನಕವಾಗಿರುತ್ತವೆ, ಆದರೆ ಯಾರು ಗುರೂಪದೇಶದಿಂದ ಅಭಿಮಾನರಹಿತರಾಗು ತ್ತಾರೋ, ಅವರಿಗೆ ದ್ವಂದ್ವ ದುಃಖವು ಸುಳ್ಳಾಗಿ ಹೋಗುತ್ತದೆ ಇದನ್ನು ಚೆನ್ನಾಗಿ ಲಕ್ಷದಲ್ಲಿಡು, ಕನಸಿನಲ್ಲಿಯ ಬಡತನ ಮತ್ತು ಒಡೆತನ (ಐಶ್ವರ್ಯ) ಎಚ್ಚರಾದ ಮೇಲೆ ಎಲ್ಲ ಹೇಗೆ ಸುಳ್ಳೆಂದೆನಿಸುತ್ತದೆಯೋ ಹಾಗೆಯೇ ಗುರುಭಕ್ತನಿಗೆ ಆತ್ಮ ಸಾಕ್ಷಾತ್ಕಾರವಾದುದರಿಂದ, ದ್ವಂದ್ವ ದುಃಖದ ವಾರ್ತೆಯೂ ಕೂಡ ತಿಳಿಯುವದಿಲ್ಲ (ಸುಳ್ಳಾಗುತ್ತದೆ ಹೇಗೆ ಮಕ್ಕಳಾಟದಲ್ಲಿಯ ಏಕಾದಶಿ ಮತ್ತು ಪಾರಣೆ ಎರಡೂ ಒಂದೇ ಇರುತ್ತವೆಯೋ‹ ಆ ಪ್ರಕಾರವಾಗಿ ಗುರೂಪದೇಶದೊಡನೆ ಅವನ ಎಲ್ಲ ದ್ವಂದ್ವಗಳು ಇಲ್ಲದಂತಾಗುತ್ತವೆ ಬಾರಿಹಣ್ಣಿನ ಮತ್ತು ಜಾಲಿಯ ಮರವು (ಗಿಡಗಳು) ಚಂದನದ ಸಹವಾಸದಿಂದ ಸುವಾಸಿಕವಾಗಿ ಚಂದನದಂತೆ ಆಗುತ್ತವೆಯೋ, ಅದರಂತೆ ಗುರು ವಾಕ್ಯದ ಪ್ರಚಿತಿಯಿಂದ ಎಲ್ಲ ಸುಖ-ದುಃಖಗಳು ಆತ್ಮನಲ್ಲಿ ಏಕರೂಪವಾಗುತ್ತವ ಚಂದನದ ಗಿಡದ ಸುತ್ತಮುತ್ತಲಿನ ಗಿಡಗಳು ಒಣಗಿದ ಕಟ್ಟಿಗೆಗಳಾಗಿದ್ದರೂ ಕೂಡ ದೇವ ಬ್ರಾಹ್ಮಣರ ಮಸ್ತಕದ ಮೇಲೆ ಏರಿಸುತ್ತಾರೆ ಇದೆಲ್ಲವು ಸಜ್ಜನರ ಸಹವಾಸದ ಮಹತ್ವವಿರುತ್ತದೆ ಸದ್ಗುರುವೇ ಮುಖ್ಯವಾಗಿ ಸತ್ಸಂಗವಾಗಿರುತ್ತಾನೆ ಅವನ ಸಹವಾಸದಿಂದ ಶಿಷ್ಯನ ಪರಿವರ್ತನೆಯು ಬ್ರಹ್ಮ ಸ್ವರೂಪದಲ್ಲಿ ಆಗುತ್ತದೆ ಆವಾಗ್ಗೆ ಅವನು ದ್ವಂದ್ವರಹಿತನಾಗುತ್ತಾನೆ ಈ ಪ್ರಕಾರವಾಗಿ ಗುರುವಾಕ್ಯದ ಮೇಲೆ ವಿಶ್ವಾಸವಿಡುವದರಿಂದ ಸುಖ-ದುಃಖದ ಸಮತ್ವವು ಕೈಸೇರುತ್ತದೆ ಅಂತಹ ಗುರು ವಚನವನ್ನು ಈಗ ಹೇಳುತ್ತೇನೆ ಅವನು (ಶಿಷ್ಯನು) ಸದ್ಗುರುವಿನ ವಚನದ ಮೇಲೆ ವಿಶ್ವಾಸವಿಟ್ಟು, ಎಲ್ಲ ಕಡೆಯಲ್ಲಿಯೂ ಪರಮಾತ್ಮನೇ ಇರುವನೆಂದು ತಿಳಿಯುತ್ತಾನ ಇದೆ ಆತ್ಮಬುದ್ಧಿಯನ್ನು ನಿಶ್ಚಯಪೂರ್ವಕವಾಗಿ ಗಟ್ಟಿಮಾಡಿ, ತನ್ನ ಮನಸ್ಸಿನಲ್ಲಿ ಈ ಪ್ರಕಾರವಾಗಿ ವಿಚಾರ ಮಾಡುತ್ತಾನೆ (ಆ ವಿಚಾರವು ಹೀಗ ಇರುತ್ತದೆ) ನನ್ನಲ್ಲಿ ಪರಮಾತ್ಮನು ವಾಸ ಮಾಡುವದರಿಂದ ಈ ಜಡ ದೇಹದ ವ್ಯಾಪಾರವು ನಡೆ ಯುತ್ತದೆ ಅವನ ಪೂರ್ಣ ಚಿತ್ ಪ್ರಕಾಶದಿಂದಲೇ ಈ ಜಗತ್ತು ಜಗದ್ರೂಪದಿಂದ ಭಾಸಮಾನವಾಗುತ್ತದೆ ಅವನ (ಪರಮಾತ್ಮ) ನಿಜ ತೇಜದಿಂದಲೇ ನನ್ನ ಕಣ್ಣಿಗೆ

ದೃಶ್ಯವು ಕಾಣಿಸುತ್ತದೆ ದೃಶ್ಯ-ದೃಷ್ಟಾ-ದರ್ಶನರೂಪದಿಂದ ಪರಮಾತ್ಮನೇ ಸುಶೋಭಿತನಾಗಿದ್ದಾನೆ ಯಾವ ಯಾವ ಪದಾರ್ಥವು ದೃಶ್ಯರೂಪದಿಂದ ಕಣ್ಣಿಗೆ ಕಾಣಿಸುತ್ತದೆಯೋ, ಅದರ (ದೃಶ್ಯ ಪದಾರ್ಥದ) ಒಳ ಹೊರಗೆ ಆತ್ಮ ಸ್ವರೂಪವೇ ತುಂಬಿದೆ ಈ ಪ್ರಕಾರವಾಗಿ ಎಲ್ಲ ಜಗತ್ತು ದೇವರಿಂದ ತುಂಬಿತುಳುಕುತ್ತಿದೆಯೆಂದು ಅವನು ಕಾಣುತ್ತಾನೆ ಆವಾಗ್ಗೆ ತನ್ನ ಕಣ್ಣಿಗೆ ಕಾಣಿಸುವ ಎಲ್ಲ ಪ್ರಾಣಿಮಾತ್ರಗಳು ಪರಮಾತ್ಮ ಸ್ವರೂಪ ಇರುವರೆಂಬ ಅನುಭವವು ಅವನಿಗೆ ಬರುತ್ತದೆ ಇದಲ್ಲದೆ ಮೂರು ಲೋಕದ ಒಡೆಯನಾದ ಈಶ್ವರನೂ ಅವನೇ ಇರುವನೆಂಬ ಸ್ಫೂರ್ತಿಯು ಉಂಟಾಗುತ್ತದೆ ನನ್ನ ಬಲದಿಂದಲೇ ಈ ಜಗತ್ತು ನಡೆದಿದೆ, ಕಳಿಕಾಳನ ಮೇಲೆ ಅಧಿಕಾರ ನಡೆಸುವವನೂ ನಾನೇ, ಉತ್ಪತ್ತಿ-ಸ್ಥಿತಿ ಮತ್ತು ನಾಶ ಮಾಡುವವನು ನಾನೇ, ಈ ಮೂಲಾಗ್ರದಲ್ಲಿದ್ದ ಅಹಂಕಾರವು ಸಹಜವಾಗಿ ಸ್ಫುರಣ ಹೊಂದುತ್ತದೆ ದೃಶ್ಯ ದರ್ಶನ ದೃಷ್ಟಾ ಈ ಭೇದವು ಇಲ್ಲದಂತಾಗುತ್ತದೆ ಅಹಂಕಾರವು ಅಲ್ಲಿಯೇ ಕರಗಿ ಹೋಗುತ್ತದೆ. ಆವಾಗ್ಗ ಪರಬ್ರಹ್ಮನಲ್ಲಿ ಪೂರ್ಣ ಏಕರೂಪವಾಗಿ ಎಲ್ಲೆಡೆಯಲ್ಲಿಯೂ ಸಚ್ಚಿದಾನಂದ ಸ್ವರೂಪವು ವ್ಯಾಪಿಸುತ್ತದೆ ಹೀಗ ಶುದ್ಧ ಅನುಭವವು ಶಿಷ್ಯನಿಗೆ ಗುರೂಪದೇಶದಿಂದ ಲಭಿಸುತ್ತದೆ ಆವಾಗ್ಗೆ 'ವೈಕುಂಠದಲ್ಲಿ ದೇವನಿದ್ದಾನೆ' ಎಂಬ ಮಾತನ್ನು ಕೇಳಿ, ಅವನಿಗೆ ಹೇಗೋ ಅನ್ನಿಸುತ್ತದೆ, ಕ್ಷೀರಸಾಗರದಲ್ಲಿ ದೇವರು ವಾಸಮಾಡುತ್ತಾನೆ ಎಂದು ಕೇಳಿದ ಕೂಡಲೇ ಅವನ ನಗೆಯು ಅನಿವಾರ್ಯವಾಗುತ್ತದೆ ನಿಜವಾಗಿ ನೋಡಿದರೆ, ದೇವರ ಹೊರತು ಎಳ್ಳಷ್ಟು ಜಾಗೆಯು ಖಾಲಿ ಇರುವದಿಲ್ಲ ಇಂತಹ ಸರ್ವವ್ಯಾಪಿಯಾದ ದೇವರಿಗೆ, ಒಂದು ನಿರ್ದಿಷ್ಟವಾದ ಸ್ಥಾನವಿರುವದೆಂಬುದು ಅವನಿಗೆ ಹಿಡಿಸುವದಿಲ್ಲ ವೈಕುಂಠ ಮತ್ತು ಕ್ಷೀರಸಾಗರವು, ಯಾವನ ಪ್ರಕಾಶದಿಂದ ಯಾವನಲ್ಲಿ ಪ್ರಕಾಶಿಸುತ್ತವೆಯೋ ಆ ಪರಮಾತ್ಮನು ವೈಕುಂಠವಾಸಿ ಇಲ್ಲವೆ ಕ್ಷೀರಾಬ್ಧಿವಾಸಿ ಇರುವನು ಎಂಬ ನುಡಿಯು, ಸುಲಭವಾಗಿ ಸಬಳ ಬ್ರಹ್ಮನಿಗೆ ಸರಿಹೋಗುತ್ತದೆ ಎಲ್ಲರಲ್ಲಿ ಸರ್ವವ್ಯಾಪಿಯಾದ ಪರಮಾತ್ಮನಿರಲು, ಅವನನ್ನು ಏಕದೇಶಿಯೆಂದು ವರ್ಣಿಸುವದು ಯೋಗ್ಯವಾಗುವದಿಲ್ಲ ಅವನು ಸ್ಥಾನವಿಲ್ಲದ ಪೂರ್ಣ ಬ್ರಹ್ಮನಿದ್ದಾನೆ, ವೈಕುಂಠಾದಿ ಸ್ಥಾನದಲ್ಲಿ ಅವನನ್ನು ಕಟ್ಟಿಹಾಕುವದು ಸಾಧ್ಯವಿಲ್ಲ ಯಾವನು ಎಲ್ಲಡೆಯಲ್ಲಿಯೂ ವಾಸವಾಗಿರುವನೋ, ಅವನಿಗ 'ಆವಾಹನ', ಯಾವನು ಎಲ್ಲರ ಅಧಿಷ್ಠಾನವಾಗಿರುವನೋ, ಅವನಿಗೆ 'ಆಸನ', ಯಾವನು ಸರ್ವವ್ಯಾಪಿಯಾಗಿರುವನೋ, ಅವನಿಗೆ ಸ್ಥಾನ ಕಲ್ಪಿಸುವದೆಂದರೆ ಇದೊಂದು ಕಲ್ಪನೆಯ ಆಟವೇ ಆಗಿರುತ್ತದೆ ಆದರೆ ಹೀಗೆ ವಿಚಾರ ಮಾಡುವ ನಮ್ಮ ವೃತ್ತಿಯು ಕೂಡ ಬ್ರಹ್ಮರೂಪವಿದೆಯೆಂದು ಯಾವನು ದಿನಾಲು ನೋಡುತ್ತಾನಯೋ, ಅವನ ಪರಬ್ರಹ್ಮ ಸ್ಥಿತಿಯು ಕಲ್ಪಾಂತದಲ್ಲಿ ಕೂಡ ಖಂಡಿಸುವದಿಲ್ಲ ಈ ಪ್ರಕಾರದ ಪರಬ್ರಹ್ಮ ಸ್ಥಿತಿಯು ನಿಜವಾಗಲೂ ಪ್ರಾಪ್ತವಾಗಬೇಕಾದರೆ, ಸಾಧಕನು ದ್ವೈತ

ಭಾವನೆಯನ್ನು ಬಿಟ್ಟು ಏಕಾಂತವನ್ನು ಸೇವಿಸಬೇಕು ಪರಮಾರ್ಥದ ಭಾಂಡಾರವು ಸಾಧ್ಯವಾಗಬೇಕಾದರೆ, ಸಾಧಕನಿಗೆ ಅನ್ನವಸ್ತ್ರದ ತಾಪತ್ರಯವುಂಟಾದರೆ, ಏನೂ ಬೆಲೆ ಬೀಳುವದಿಲ್ಲವೋ, ಅಂತಹ ಸಾರು ಬಟ್ಟೆಯನ್ನು ತೆಗೆದುಕೊಳ್ಳಬೇಕು ಇಲ್ಲವೆ ಜನರು ಬೀಸ್ಹಾಕಿದ ಹರಕು ಬಟ್ಟೆಗಳನ್ನು ತೆಗೆದುಕೊಳ್ಳಬೇಕು ಕಾಯಿಪಲ್ಲೆ, ಹಣ್ಣು ಹಂಪಲ, ಗಡ್ಡೆಗೆಣಸು ಮುಂತಾದವುಗಳನ್ನು ಸೇವಿಸಿ ತನ್ನ ಹೊಟ್ಟೆ ಹೊರೆಯಬೇಕು ಆದರೆ ಪರಮಾರ್ಥ ಸಾಧನಯನ್ನು ಬಿಟ್ಟು ಅನ್ನವಸ್ತ್ರ ಮತ್ತು ದ್ರವ್ಯಾರ್ಜನೆಗಾಗಿ ಎಂದಿಗೂ ಹೋಗಬಾರದು ಹಗಲಿಗೆ ಜೋಳಿಗೆ ಹಾಕಿ ಸುಖವಾಗಿ ಎಲ್ಲ ಕಡೆಗೂ ಭಿಕ್ಷ ಬೇಡಬೇಕು ಆದರೆ ಅನ್ನವಸ್ತ್ರಕ್ಕಾಗಿ ಎಳ್ಳಷ್ಟೂ ಆಯುಷ್ಯವನ್ನು ಹಾಳುಮಾಡಬಾರದು ಜ್ಞಾನ ಸಾಧಕನು ಅನ್ನ ಮತ್ತು ಹೊದಿಕೆಗಾಗಿ ಎಂದಿಗೂ ಕಷ್ಟ ಸಾಧ್ಯ ಪ್ರಯತ್ನ ಮಾಡುವದಿಲ್ಲ ದೇಹವು ಪ್ರಾರಬ್ಧಾಧೀನವಾಗಿರುತ್ತದೆ, ಪ್ರಾರಬ್ಧದಿಂದಲೇ ಅದರ ಪಾಲನ ಪೋಷಣೆಯಾಗುತ್ತದ ನಾವು ಹಗಲು ಇರುಳೂ ಕಷ್ಟಬಟ್ಟರೂ, ನಮ್ಮ ಹಣೆಯ ಬರಹದಲ್ಲಿ ಎಷ್ಟು ಇರುವದೋ ಅಷ್ಟೇ ನಮಗೆ ಸಿಗುತ್ತದೆ ಇದು ಜ್ಞಾನಿ ಸಾಧಕನಿಗೆ ತಿಳಿದಿರುತ್ತದ ಆದಕಾರಣ ಅವನು, ಅವನಿಗೆ ದೈವಯೋಗದಿಂದ ಏನು ಪ್ರಾಪ್ತಿಯಾಗುತ್ತದೆಯೋ, ಅಷ್ಟರಲ್ಲಿ ತನ್ನ ಹೊಟ್ಟೆ ಹೊರೆದುಕೊಂಡು, ನಿಶ್ಚಿಂತನಾಗಿರುತ್ತಾನೆ ಮತ್ತು ಗುರುವಾಕ್ಯದ ಪ್ರಮಾಣವನ್ನಿಟ್ಟು ಆನಂದದಿಂದ ಪರಮಾರ್ಥ ಸಾಧನೆಯನ್ನು ಮಾಡುತ್ತಾನ, ಪ್ರಾರಬ್ಧಾನುಸಾರವಾಗಿ ದೇಹದಲ್ಲಿ ಸುಖ ದುಃಖದ ಆಗು ಹೋಗುಗಳು ಆಗುತ್ತವ, ಅದರಲ್ಲಿ ಅವನಿಗೆ ಆನಂದವೇ ಆಗುತ್ತದೆ, ಏಕೆಂದರ ಅವನಿಗ ಗುರುವಾಕ್ಯದ ಅಚ್ಚ ರುಚಿ ರುಚಿಯಾಗಿ ಹತ್ತಿರುತ್ತದೆ ದೇಹದ ಪೂರ್ವಕರ್ಮವು ಹೇಗಿರುತ್ತದೆಯೋ ಹಾಗೆಯೇ ಅನ್ನವಸ್ತ್ರವು ಸಿಗುತ್ತಿರುತ್ತದೆ, ಆದರೆ ಗುರುವಾಕ್ಯದ ಸುಖವನ್ನು ಬಿಟ್ಟು ಮನಸ್ಸು ಮಮತೆಯಿಂದ ದೇಹಭಾನದ ಮೇಲೆ ಬರುವದಿಲ್ಲ ಯಾಚನೆ ಮಾಡದ ಯಾವ ಕಾಲದಲ್ಲಿ ಸುಲಭವಾಗಿ ಏನು ಸಿಗುತ್ತದೆಯೋ, ಅದೆಲ್ಲವೂ ಚೆನ್ನಾಗಿದೆಯೆಂದು ತಿಳಿದು ಅದೆಲ್ಲವನ್ನೂ ಗುರುವಾಕ್ಯಕ್ಕನುಸರಿಸಿ ಆನಂದದಿಂದ ಸ್ವೀಕರಿಸುತ್ತಾನೆ ಶರೀರ ಪೋಷಣೆಗಾಗಿ ಅವನು ಎಲ್ಲಿಯೂ ಯಾವ ತರಹದ ಇಚ್ಛೆಯನ್ನು ಮಾಡುವದಿಲ್ಲ

ಸಿಕ್ಕಷ್ಟರಲ್ಲಿಯೇ 'ಏಪಾ' ಎಂದು ಆತ್ಮಾನಂದದಲ್ಲ ಸಂತುಷ್ಟನಾಗಿರುತ್ತಾನ ಪ್ರಾರಬ್ಧಾನುಸಾರವಾಗಿ ಸುಖ ದುಃಖಗಳ ಪೀಡೆಯನ್ನು ಅನುಭವಿಸುತ್ತಿರುವಾಗ, ಸಾಧಕನ ಮನಸ್ಸಿಗ ಆನಂದವೇ ಆಗುತ್ತಿರುತ್ತದೆ ಈ ಅನುಭವವು ಆ ಶಿಷ್ಯನಿಗೆ ಗುರುವಾಕ್ಯದ ಮೇಲೆ ವಿಶ್ವಾಸವಿಟ್ಟಿರುವದರಿಂದಲೇ ಪ್ರಾಪ್ತವಾಗುತ್ತದೆ ಈ ವಿಶ್ವಾಸವು ಗಟ್ಟಿಯಾಗುವದರ ಸಲುವಾಗಿ, ಶಿಷ್ಯನು ಗುರುವಿನ ಹತ್ತಿರ ಅಗತ್ಯದಿಂದ

ಶ್ರದ್ಧೆಯಿಟ್ಟು ಜ್ಞಾನವನ್ನೀಯುವ ಭಾಗವತ ಶಾಸ್ತ್ರದ ಅಭ್ಯಾಸವನ್ನು ಮಾಡಬೇಕು

ಯಾವದರಲ್ಲಿ ಭಗವಂತನ ಸಗುಣ ಅಥವಾ ನಿರ್ಗುಣ ಸ್ವರೂಪದ ವರ್ಣನೆ ಇರುತ್ತದೆಯೋ, ಇಲ್ಲವೆ ಭಗವಂತನ ವಚನೋಕ್ತಿಯು ಇರುವದೆಯೋ ಅಥವಾ ಭಗವತ್ಪುರಾಣಾನುವಾದದ ನಿರೂಪಣೆಯು ಇರುತ್ತದೆಯೋ, ಹೇ ರಾಜಾ! ಅದೇ ಈ 'ಭಾಗವತಶಾಸ್ತ್ರ'ವೆಂದು ನೀನು ತಿಳಿದುಕೋ ಅದು ಅಂತಹ ಸಾಧಕನಿಗೆ ಪ್ರಾಣಕ್ಕಿಂತ ಪ್ರಿಯವಾಗುತ್ತದೆ ಅದರಲ್ಲಿಯೂ ಅವರಿಗೆ, ಜ್ಞಾನ ನಿರೂಪಣೆಯಲ್ಲಿ ಹೆಚ್ಚಿಗೆ ಅಭಿರುಚಿಯಿರುತ್ತದೆ ಹಾಗೂ ಅದನ್ನು ಅವರು ಬಹಳವಾಗಿ ಅಭಿಲಾಷಿಸುತ್ತಾರೆ ಗುರುಮುಖದಿಂದ ಕೇಳುವ ಜ್ಞಾನ ನಿರೂಪಣೆಯು ಅವರಿಗೆ ಬಹಳ ಪ್ರಿಯವೆನಿಸುತ್ತದೆ ಮತ್ತು ಅದರಿಂದ ಭಾಗವತದ ಮೇಲೆ ಅವರಿಗೆ ಪೂರ್ಣ ಶ್ರದ್ಧೆಯುಂಟಾಗುತ್ತದೆ ಅದರ (ಭಾಗವತ) ಶ್ರವಣದಿಂದ ಅವರ ಜೀವನದಲ್ಲಿಯ ಮನೋರಥವು ಪೂರ್ಣವಾಗಿ, ವಿಷಯೇಚ್ಛೆಯು ಸಂಪೂರ್ಣವಾಗಿ ಮಾಯವಾಗುತ್ತದೆ

## ಪ್ರಕರಣ ೫

ಅಗ್ನಿಹೋತ್ರ ಮುಂತಾದವುಗಳ 'ಯಾಗ' ಹಾಗೂ ಹೋಮ, ಗ್ರಹಣ ಕಾಲದಲ್ಲಿ ಮಾಡಿದ ಉತ್ತಮವಾದ 'ದಾನ' ಮತ್ತು 'ತಪಶ್ಚರ್ಯ' ಅಂದರೆ ವರ್ಣಾಶ್ರಮ ಧರ್ಮದಂತೆ ಮಾಡಿದ ಸ್ವಧರ್ಮವು ವೇದೋಕ್ತ, ಶಾಸ್ತ್ರೋಕ್ತ, ಆವರಣ ವಿಧಿ ವಿಧಾನ ತಂತ್ರಾನುಸಾರ ಗುರುದೀಕ್ಷೆಯನ್ನು ಪಡೆದು ಸಿಕ್ಕಂಥ ಶುದ್ಧ ಮಂತ್ರ, ಇಲ್ಲವೆ ಭಗವಂತನ ನಾಮದ ಜಪ ಮುಂತಾದವುಗಳೆಲ್ಲವೂ ಅಂದರೆ, ಯಜ್ಞ, ದಾನ, ಧರ್ಮಾಚರಣ, ತಪಶ್ಚರ್ಯ, ದೀಕ್ಷಾಮಂತ್ರ ಇಲ್ಲವೆ ನಾಮಜಪ, ಇವೆಲ್ಲವುಗಳನ್ನು ಸಂಕಲ್ಪ ಮಾಡದೆ ನಿಃಸಂಶಯವಾಗಿ ಕೃಷ್ಣಾರ್ಪಣ ಮಾಡಬೇಕು ಈ ರೀತಿಯಿಂದಿದ್ದು ಯಾರು ಅನನ್ಯ ಭಾವನೆಯಿಂದ ಶರಣು ಹೋಗುತ್ತಾರೋ ಅವರು ಭಗವಂತನ ಪ್ರೀತಿಗೆ ಯೋಗ್ಯರಾಗುತ್ತಾರೆ ಮತ್ತು ತಾಯಿಯು ಹೇಗೆ ಹಸುಗೂಸಿನ ಲಾಲನ ಪಾಲನ ಮಾಡುವಳೋ, (ಆ ಪ್ರಕಾರವಾಗಿ) ಹಾಗೆಯೇ ಶ್ರೀ ಹರಿಯು ಅವನನ್ನು ರಕ್ಷಿಸುತ್ತಾನೆ ಆದ್ದರಿಂದ ಏನೇನು ಉದರನಿರ್ವಾಹದ ಉದ್ಯಮಗಳಿರುವವೋ, ಅವುಗಳೆಲ್ಲವನ್ನು ಕೃಷ್ಣಾರ್ಪಣ ಮಾಡಬೇಕು ಜ್ಞಾನಿ ಭಕ್ತನಿದ್ದವನು 'ಇದು ನನ್ನದು' ಎಂಬ ಅಹಂಕಾರವನ್ನು ಎಂದಿಗೂ ತಾಳುವದಿಲ್ಲ ಯಾವದರ ಬಗ್ಗೆ ಮನಸ್ಸಿನಲ್ಲಿ ಅತ್ಯಂತ ಮೋಹವಿರುತ್ತದೆಯೋ, ಯಾವದು ಅವನಿಗೆ ಬಹಳ ಪ್ರಿಯವಿರುವದೋ, ಅವೆಲ್ಲವನ್ನೂ ಗುರುವಚನದಲ್ಲಿ ವಿಶ್ವಾಸವಿಟ್ಟು

ಅವನು ಕೃಷ್ಣಾರ್ಪಣ ಮಾಡುತ್ತಾನೆ ಮತ್ತು ಅದಕ್ಕಾಗಿ ಎಂಟೂ ಪ್ರಹರ ಸೇವೆಯಲ್ಲಿ ತನ್ನ ಶರೀರವನ್ನು ಸವೆಯಿಸುತ್ತಾನ ಸ್ವಲ್ಪು ಕೂಡ (ಅರ್ಧ ನಿಮಿಷ) ವಿಷಯಕ್ಕೆ ಸಂಬಂಧಿಸಿದ ಉದ್ಯೋಗ ಮಾಡುವದಿಲ್ಲ ಅನ್ನದ ಸಲುವಾಗಿ ಹುಚ್ಚನಾಗಿ ಶ್ರೀಮಂತರ ಕಾಲು ಹಿಡಿಯುವದಿಲ್ಲ ವಿಷಯೇಚ್ಛೆಯಿಂದ ತನ್ನ ಆಯುಷ್ಯವನ್ನು ಹಾಳು ಮಾಡಿಕೊಳ್ಳುವದಿಲ್ಲ ಲಕ್ಷಗಟ್ಟಲೆ ಹಣ ಸುರಿದರೂ ಕೂಡ, ಆಯುಷ್ಯದಲ್ಲಿಯ ಅರ್ಧಕ್ಷಣವೂ ಸಿಗಲಾರದು, ಇಂತಹ ಅಮೂಲ್ಯವಾದ ಆಯುಷ್ಯವನ್ನು ಪರಮಾರ್ಥ ಸಾಧನಯಲ್ಲಿ ಕಳೆಯುತ್ತಾನ ಮತ್ತು ವಿಷಯದ ರಾಶಿಯನ್ನು ಹೀಯಾಳಿಸಿ ತ್ಯಜಿಸುತ್ತಾನೆ ರಾಜರು ಕೂಡ ರಾಜ್ಯದ ಐಶ್ವರ್ಯ ಬಿಟ್ಟು ವನವಾಸಿಯಾಗುತ್ತಾರೆ ಮತ್ತು ವಿಷಯಾಸಕ್ತಿಯನ್ನು ಬಿಟ್ಟು ಪರಮಾರ್ಥವನ್ನು ಸಾಧಿಸುತ್ತಾರೆ ಪೂರ್ಣ ಭಕ್ತಿಯ ಅಭಿರುಚಿಯನ್ನಂತೂ ಏನೆಂದು ಹೇಳಬೇಕು? ನಿಜವಾದ ಭಕ್ತನು ಅರ್ಧ ಗಂಟೆ ಕೂಡ ವ್ಯುಕ್ಕಟಿಯಾಗಿ ಕಳೆಯುವದಿಲ್ಲ ತನ್ನ ಎಲ್ಲ ಆಯುಷ್ಯವನ್ನೇ ಕೃಷ್ಣಾರ್ಪಣ ಮಾಡಿಬಿಡುತ್ತಾನ ಅದರಂತೆಯೇ ಹೆಂಡತಿ ಮಕ್ಕಳು ಮತ್ತು ಇನ್ನಿತರರು ಯಾರು ಇರುವರೋ ಅವರೆಲ್ಲರನ್ನು ಮತ್ತು ಸ್ವತಃ ತನ್ನನ್ನೂ ಕೂಡ ಭಗವಂತನ ಸೇವೆಗಾಗಿಯೇ ಅರ್ಪಣ ಮಾಡುತ್ತಾನ ಹೆಂಡರು ಮಕ್ಕಳು 'ನನ್ನವರ' ಡ್ಡಾರೆಂದು, ಅವರ ಮೇಲೆ ಮನಸಿನಲ್ಲಿ ತನ್ನತನವನಿಡುವದಿಲ್ಲ (ಇದೆ ಅವರನ್ನು ಕೃಷ್ಣಾರ್ಪಣ ಮಾಡುವದು ) ಹೆಂಡತಿ, ಮಗ, ತನ್ನ ದೇಹ, ಮನ ಮತ್ತು ಪ್ರಾಣ ಇವೆಲ್ಲದರಲ್ಲಿಯೂ ಒಳ ಹೊರಗ ಪರಮಾತ್ಮನೇ ಇರುವನೆಂದು ನೋಡುತ್ತಿರುವದರಿಂದ, 'ಸಂಕಲ್ಪವಿಲ್ಲದೆ ಅರ್ಪಣ ಮಾಡುವೆನು' ಎಂದು ಅನ್ನದಲೇ ಸಹಜವಾಗಿ ಬ್ರಹ್ಮಾರ್ಪಣೆಯಾಗುತ್ತಿರುತ್ತದೆ

ಈ ಪ್ರಕಾರವಾಗಿ ಹೆಂಡತಿ, ಮನೆ, ದೇಹ ಮತ್ತು ಸಂಪತ್ತು (ಐಶ್ವರ್ಯ) ಇವೆಲ್ಲವನ್ನೂ ಯಾರು ಶುದ್ಧ ಭಾವನಯಿಂದ ಆತ್ಮಾರ್ಪಣೆ ಮಾಡಿ ಯಾವಾಗಲೂ ಭಜಿಸುತ್ತಿರುತ್ತಾರೋ, ಅವರೇ ಭಗವಂತನ ಪ್ರೀತಿಗೆ ಯೋಗ್ಯರಾಗುತ್ತಾರೆ ಅವನು ತನ್ನ ಸ್ವತಃದ ಹಿತವನ್ನು ಪ್ರಾಪ್ತ ಮಾಡಿಕೊಳ್ಳುವದಕ್ಕೋಸ್ಕರ, ಎಲ್ಲ ಪ್ರಾಣಿಮಾತ್ರಗಳ ಹೃದಯಸ್ಥನಾದ ಶ್ರೀ ಕೃಷ್ಣನನ್ನು ಎಲ್ಲ ರೀತಿಯಿಂದಲೂ ಭಜಸುತ್ತಾನೆ ಎಲ್ಲಿಯವರೆಗೆ ಅವನ ಆ ಹೃದಯಸ್ಥ (ನಿರ್ಗುಣ) ಪರಮಾತ್ಮನಲ್ಲಿ ದೃಷ್ಟಿಯು ಸ್ಥಿರವಾಗುವದಿಲ್ಲವೋ ಅಲ್ಲಿಯವರೆಗೆ, ಅವನು ಸರ್ವಾತ್ಮ ಭಾವದಿಂದ ಸಗುಣಮೂರ್ತಿಯ ಧ್ಯಾನವನ್ನೇ ಹೃದಯದಲ್ಲಿ ಮಾಡಬೇಕು ಮತ್ತು ಭಜನ ಮಾಡಬೇಕು ನಿರ್ಗುಣ ಮೂರ್ತಿಯು ಕೂಡ ಸರಿಯಾಗಿ ಧ್ಯಾನದಲ್ಲಿ ಬಾರದೆ ಹೋದರೆ, ಪ್ರತಿಮಯ ಧ್ಯಾನ ಹಾಗೂ ಭಜನೆ ಮಾಡಬೇಕು ಅದರಲ್ಲಿಯೂ ಚೇತನ ಮತ್ತು ಅಚೇತನ ಹೀಗೆ ಎರಡೂ ತರಹದ ಮೂರ್ತಿಗಳು ಗುರೂಪದೇಶದಂತೆ, ಸರಿಸಮಾನ ಇವ ಎಂಬ

ಭಾವನೆಯಿಂದ ಭಜನೆ ಮಾಡಬೇಕು ಉಪಾಸಕರು ತಮ್ಮ ಮನೆಯಲ್ಲಿ ಯಾರ ಪೂಜೆ ಮಾಡುತ್ತಾರೋ, ಅದರ 'ಚೇತನ ಮೂರ್ತಿ' ಎಂದು ತಿಳಿಯಬೇಕು ಮತ್ತು ದ್ವಾರಕಾ ಇಲ್ಲವೆ ಇತರ ಕ್ಷೇತ್ರದಲ್ಲಿಯ ಪಾಂಡುರಂಗ ಮುಂತಾದ ಪುರಾಣ ಪ್ರಸಿದ್ಧ ಮೂರ್ತಿಗಳು ಮುಂಚಿನ ಕಾಲದವು, ಅಂದರೆ 'ಅಚೇತನ' ಮೂರ್ತಿಗಳೆಂದು ತಿಳಿಯಬೇಕು ಆ ಮೂರ್ತಿಗಳಿಗಿಂತಲೂ ಶ್ರೇಷ್ಠನೆಂದರೆ 'ಬ್ರಾಹ್ಮಣ' ನೆಂದು ತಿಳಿಯಬೇಕು ಅವರು ಪೂರ್ಣತೆಯಿಂದ ಪೂಜ್ಯರಿರುವರು ಎಲ್ಲ ವೇಳೆಯಲ್ಲಿಯೂ ಎಲ್ಲ ರೀತಿಯಿಂದಲೂ ಅವರ ಭಜನೆ ಮಾಡಬೇಕು ಆ ಬ್ರಾಹ್ಮಣರಲ್ಲಿಯೂ ಒಳ್ಳೆ ಆಚಾರವುಳ್ಳವ 'ಶ್ರೋತ್ರಿಯ' ಅಂದರೆ ವೇದವನ್ನರಿತ ಬ್ರಾಹ್ಮಣನು ಶ್ರೇಷ್ಠನಿರುವನು ಅದರಲ್ಲಿಯೂ 'ವೇದಶಾಸ್ತ್ರಾರ್ಥದಲ್ಲಿ ಪಾರಂಗತ'ನಿದ್ದರೆ, ಅವನು ಅತಿಶಯವಾಗಿ ಶ್ರೇಷ್ಠನೆಂದರೆ ಪೂಜನೀಯನಿರುವನೆಂದು ತಿಳಿಯಬೇಕು ಅದರಲ್ಲಿಯೂ 'ಭಾಗವತ' ಎಂದರೆ ಭಗವದ್ಭಕ್ತನಿದ್ದು, ಯಾವಾಗಲೂ ಭಾಗವತ ಧರ್ಮದಲ್ಲಿ ಉದ್ಯುಕ್ತನಿರುವನೋ, ಯಾವನು ನಿಷ್ಕಾಮ ಭಾವನೆಯಿಂದ ಭಗವದ್ಭಕ್ತಿ ಮಾಡುವವನಿದ್ದು, ಯಾವನದು ಶ್ರೀ ಕೃಷ್ಣನ ಮೇಲೆ ಪೂರ್ಣ ಭಾವನೆಯಿರುವದೋ, ಅವನ ಹೃದಯಸ್ಥ ಆತ್ಮಾ ಅಂದರೆ ಶ್ರೀಕೃಷ್ಣ, ಶ್ರೀಕೃಷ್ಣನಾಥನೇ ಅವನ ಏಕಮೇವ ಸ್ವಾಮಿ, ಹೀಗ ಯಾರು ಪೂರ್ಣ ಭಗವದ್ಭಕ್ತರಿರುವರೋ, ಲವರೇ ಭಕ್ತನಿಗೆ ನಿಜವಾಗಲೂ ಪೂಜನೀಯರಾಗುತ್ತಾರೆ ದೇವ, ಮನುಷ್ಯ ಮತ್ತು ವೇದಗಳು ಯಾವನನ್ನು ಹೊಗುಳುತ್ತಿವೆಯೋ ಆ 'ಸದ್ಗುರುವು' ಶಿಷ್ಯನಿಗೆ ಅತ್ಯಂತ ಹಿರಿಯನಾಗಿದ್ದು, ಸರ್ವಸ್ವೀ ಎಂದರೆ ಎಲ್ಲರಿಗಿಂತಲೂ ಹೆಚ್ಚಿಗೆ ಪೂಜನೀಯನಾಗಿರುವನು, ಇದನ್ನು ಚೆನ್ನಾಗಿ ಲಕ್ಷದಲ್ಲಿಡು 'ಗುರು ಮತ್ತು ಬ್ರಹ್ಮ' ಇವರಿಬ್ಬರೂ ಸರಿಸಮಾನರೆಂಬುವ ನುಡಿಯೂ ಕೂಡ ಗೌಣವೆನಿಸುತ್ತದೆ ಏಕೆಂದರೆ, ಗುರು ವಚನದಿಂದಲೇ ಬ್ರಹ್ಮನಿಗೆ ಬ್ರಹ್ಮತ್ವ ಉಂಟಾಗುತ್ತದೆ ಆವಾಗ್ಗೆ 'ಸಮಾನ' ವೆಂದು ನುಡಿಯಲು ಭೇದವೇ ಉಳಿಯುವದಿಲ್ಲ ದೇವರಲ್ಲಿ ಯಾವ ಪ್ರಕಾರವಾಗಿ ಭಾವನೆಯನ್ನಿಡುವರೋ ಅದರಂತೆಯೇ ಸದ್ಗುರು ಚರಣದಲ್ಲಿ'ಸದ್ಭಾವನೆ' ಯನ್ನಿಡಬೇಕು ಏಕೆಂದರೆ ಗುರು ಮತ್ತು ದೇವರಲ್ಲಿ ಭಿನ್ನಭಾವನೆಯೇ ಇರುವದಿಲ್ಲ ಆದ್ದರಿಂದ ದೇವರ ಪೂಜೆ ಮಾಡಿದರೆ ಗುರುವಿಗೆ ಸಂತೋಷವಾಗುತ್ತದೆ ಮತ್ತು ಗುರುವಿನ ಪೂಜೆ ಮಾಡಿದರೆ ದೇವರಿಗೆ ಸಂತೋಷವಾಗುತ್ತದೆ ಹೆಸರಿನಲ್ಲಿ ಇಬ್ಬರಾದರೂ ಸಂತೋಷದಲ್ಲಿ (ಆನಂದದಲ್ಲಿ) ಒಂದೇ ಸ್ವರೂಪದಲ್ಲಿರುತ್ತಾರೆ ಬಂಗಾರ ಮತ್ತು ಬಳೆ ಹೆಸರಿನಲ್ಲಿ ಬೇರೆ ಬೇರೆಯಾಗಿದ್ದರೂ, ಅದರಲ್ಲಿಯ ಬಂಗಾರವು ಒಂದೇ ಇರುವದು ಅದರಂತೆ ಗುರುವಿನಲ್ಲಿ ಮತ್ತು ಬ್ರಹ್ಮನಲ್ಲಿ ಭೇದಭಾವವಿರುವದಿಲ್ಲ ಆ ಸದ್ಗುರುವಿನ ಭಜನೆಯನ್ನು, ತನು, ಮನಸ್ಸು, ಧನದಿಂದ ಮನಸ್ಸು ಕೊಟ್ಟು ವಂಚಿಸದೇ ಮಾಡಬೇಕು ತಾನು ಸರ್ವಸ್ವ ಸಹಿತವಾಗಿ ಗುರುಚರಣದಲ್ಲಿ ಆತ್ಮಾರ್ಪಣೆಯನ್ನು ಮಾಡಬೇಕು ಅದರಂತೆ ಸಾಧು ಮತ್ತು ಜ್ಞಾನ ಸಂಪನ್ನರಾದ ಶ್ರೋತ್ರೃ ವೃಂದವೂ

ಸದ್ಗುರುವಿನ ಸಮಾನವೆಂದು ತಿಳಿಯಬೇಕು ಅವರ ಕೂಡ ಸಂವಾದ ಮಾಡುತ್ತ ತಾವೂ ಶ್ರವಣ ಮತ್ತು ನಿರೂಪಣೆಯನ್ನು ಮಾಡುತ್ತಲಿರಬೇಕು

## ಪ್ರಕರಣ ೬

ಹೇ ರಾಜಾಧಿರಾಜಾ! ಇದೆಂತಹ ಆಶ್ಚರ್ಯವು? ಶ್ರೀ ಕೃಷ್ಣನಿಗೆ ಕೀರ್ತನವೇ ಒಂದು ದೊಡ್ಡ ಪೂಜೆಯೆನಿಸುತ್ತದೆ ಇಷ್ಟೊಂದು ಕೃಷ್ಣನಿಗೆ ಕೀರ್ತನದ ಅಭಿರುಚಿ ಯಿರುವದು ಅದರಿಂದಲೇ (ಕೀರ್ತನದಿಂದಲೇ) ಆ ಗರುಡಧ್ವಜನಿಗೆ ಯಾವಾಗಲೂ ಆನಂದವಾಗುತ್ತದೆ ಶ್ರೀ ಕೃಷ್ಣನಿಗೆ ಕೀರ್ತನವು ಪ್ರಿಯವಾಗಿದೆಯೆಂತಲೇ ಅವನು ನಾರದನನ್ನು ಸನ್ಮಾನಿಸುತ್ತಾನೆ ಏಕೆಂಪರ ಅವನು ಕೃಷ್ಣನ ಕೀರ್ತಿ ಯನ್ನೇ ವರ್ಣಿಸುತ್ತ ಅವನದೇ ನಾಮಸಂಕೀರ್ತನೆಯನ್ನು ಮಾಡುತ್ತಿರುತ್ತಾನೆ ನಾಮಸಂಕೀರ್ತನ ಮಾಡಿದುದರಿಂದಲೇ, ಪ್ರಲ್ಹಾದನನ್ನು ಸಂಕಟಗಳಿಂದ ರಕ್ಷಿಸಿದನು ಕೀರ್ತನದಿಂಸ ಶ್ರೀಹರಿಗೆ ಸಂತೋಷ ಉಂಟಾಗುತ್ತದೆ ಮತ್ತು ಅವನು ಭಕ್ತನ ಸಂಸಾರ ಬಂಧನವನ್ನು ಹರಿದೊಗೆಯುತ್ತಾನೆ ಗಜೇಂದ್ರನು ನಾಮಸ್ಮರಣ ಮಾಡಿದಾಗಲೇ, ಅವನಿಗೆ ನಾರಾಯಣನು ಪ್ರತ್ಯಕ್ಷನಾದನು ಅವನ ಸಂಸಾರ ಬಂಧನವನ್ನು ತೊರೆದು, ಅವನನ್ನು ವೈಕುಂಠಕ್ಕೆ ಕರೆದೊಯ್ದನು ಅಧಮದಲ್ಲಿ ಅಧಮ, ಅತ್ಯಂತ ಪಾತಕಿಯಾದ ಗಣಿಕಾ ಅಂದರೆ ವೇಶ್ಯೆಯು ಇದ್ದಳು ಆಕಸ್ಮಿಕ ವಾಗಿ ಅವಳು ರಾಮನಾಮದ ಉಚ್ಚಾರವನ್ನು ಮಾಡಿದಳು, ಅಷ್ಟೇ ನಾಮಸ್ಮರಣದ ಸಲುವಾಗಿ ಶ್ರೀಹರಿಯು, ಅವಳನ್ನು ವೈಕುಂಠದಲ್ಲಿರಲು ಯೋಗ್ಯಳನ್ನಾಗಿ ಮಾಡಿದನು ಎಲ್ಲ ಪಾತಕದ ಪ್ರತ್ಯಕ್ಷ ಮೂರ್ತಿಯು ಮತ್ತು ಅತಿಶಯ ನಷ್ಟನಾದ ಅಜಾಮಿಳನೂ, ಸಹ ನಾಮದಿಂದಲೇ ಶುದ್ಧನಾಗಿ ಬಿಟ್ಟನು ಇದರಂತೆ ನಾಮದ ಮಹಿಮೆಯು ಬಹಳೇ ಅದ್ಭುತವಿರುತ್ತದೆ ಗೋವಿಂದ ನಾಮಸ್ಮರಣದಲ್ಲಿ ಏಕರೂಪಳಾದ ದ್ರೌಪದಿ ಯನ್ನು ಅವನು ಸಂಕಟದಿಂದ ಪಾರು ಮಾಡಿದನು ನಿಜವಾಗಲೂ ನಾಮವು ಭಕ್ತ ನನ್ನು, ಆದಿವ್ಯಾಧಿಯಿಂದ ಮುಕ್ತ ಮಾಡುತ್ತದೆ (ನಾಮದಿಂದ ಭಕ್ತನು ಆಧಿವ್ಯಾಧಿ ಯಿಂದ ಮುಕ್ತನಾಗುತ್ತಾನೆ) ಹರೀಕೀರ್ತನದಿಂದ ಮುಖ್ಯವಾಗಿ ಅಂತಃಕರಣ ಶುದ್ಧ ವಾಗುತ್ತದೆ ಚಿತ್ತ ಶುದ್ಧಿಗಾಗಿ ನಾಮಸ್ಮರಣದಂತಹ ಬೇರೆ ಉಪಾಯವೇ ಇಲ್ಲ ಕೀರ್ತನವು ಭಗವಂತನಿಗ ಹೇಗೆ ರುಚಿಸುತ್ತದೆ? ಅಂದರೆ ಕರುವಿಗೆ ಹೇಗ ಹಸು, ಇಲ್ಲವೆ ಜೇನುಹುಟ್ಟಿಗೆ ಹೇಗೆ ಜೇನ್ನೊಣ ಒಂದು ಕ್ಷಣ ಕೂಡ ಬಿಟ್ಟಿರುವದಿಲ್ಲವೊ, ಅದ ರಂತೆ ನಾಮಸ್ಮರಣ ಮಾಡುವ ಭಕ್ತನನ್ನು ಶ್ರೀ ಹರಿಯು ಬಹಳಷ್ಟು ಪ್ರೀತಿಸುತ್ತಾನೆ. ಭಕ್ತನಿಗೆ ಕಿಂಚಿತ್ ದುಃಖವಾದರೂ ಕೂಡ, ಅದನ್ನು ಅವನು ತಾನೇ ದೂರ ಮಾಡು ತ್ತಾನ ಆದ್ದರಿಂದ ಯಾವನಿಗೆ ನಿಜವಾಗಲೂ ಹರಿಕೀರ್ತನೆಯಲ್ಲಿ ಅಭಿರುಚಿಯುಂಟಾ

ಗುತ್ತದೆಯೋ, ಅವನಿಗೆ ಇತರ ಸಾಧಕರಂತೆ ಸಂಕಟಗಳನ್ನನುಭವಿಸುವ ಕಾರಣವೇ ಇರುವದಿಲ್ಲ ಯಾವನಿಗೆ ನಾಮ ಸಂಕೀರ್ತನೆಯಲ್ಲಿ ಮತ್ತು ಹರಿಯ ಗುಣವರ್ಣನೆ ಮಾಡುವದರಲ್ಲಿ ಮನಸ್ಸಿಗೆ ನಾಲ್ಕುಪಟ್ಟು ಉಲ್ಲಾಸವಾಗುತ್ತದೆಯೋ, ಅವನು ಎಲ್ಲ ಸಾಧನೆಗಳನ್ನು ಮಾಡಿದವನಂತಾಗಿ ಉದ್ಧಾರ ಹೊಂದುತ್ತಾನೆ

## ಪ್ರಕರಣ ೭

ಹೇ ರಾಜೇಶ್ವರಾ! ಯಾರು ಜನ್ಮಮರಣದ ಚಕ್ರದಲ್ಲಿ ಸಿಲುಕಿ ಸಂಸಾರದಲ್ಲಿ ಭ್ರಮಣ ಮಾಡುತ್ತಿರುತ್ತಾರೆಯೋ, ಅವರಿಗೆ ಕಲಿಯುಗದಲ್ಲಿ ಕೀರ್ತನದಿಂದಲೇ ಸದ್ಗತಿ ಯುಂಟಾಗುತ್ತದೆ ಕಲಿಯುಗದಲ್ಲಿ ಅವರು ಕೀರ್ತನದಿಂದಲೇ, ಸಂಸಾರದ ಬೇಲಿಯನ್ನು ಕಿತ್ತೆಸೆದು, ಶಾಂತಿ ಸುಖದ ಅನುಭವದಿಂದ, ಪರಮಾನಂದದಲ್ಲಿ ಮುಳುಗುತ್ತಾರೆ ಹೀಗೆ ಕೀರ್ತನವು ಬಹಳ ಲಾಭದಾಯಕವಾಗಿರುತ್ತದೆ ದೇವರು ಇಲ್ಲವೆ ಜನರಿಗೆ (ಬೇರೆ ಯುಗದಲ್ಲಿ) ಕಷ್ಟಪಟ್ಟರೂ ಕೂಡ ಅದು (ಪರಮಾನಂದವು) ಸಿಗುವದಿಲ್ಲ ಆದರೆ ಕಲಿಯುಗದಲ್ಲಿ ಅದು ಸುಲಭವಾಗಿದೆ ಆದುದರಿಂದ ಭಾಗ್ಯವಂತರೇ ಹರಿಕೀರ್ತನೆ ಯನ್ನು ಬಹಳವಾಗಿ ಅಪೇಕ್ಷಿಸುತ್ತಾರೆ ಕೀರ್ತನದಿಂದ ನಾಲ್ಕೂ ಮುಕ್ತಿಗಳು ಅವನನ್ನು ವರಿಸುತ್ತವೆ (ಮಾಲೆ ಹಾಕುತ್ತವೆ) ಯಾರಾದರು ಹೀಗೆ ಆಗುವದು ಸಾಧ್ಯವಿಲ್ಲ ವೆಂದರೆ, ರಾಜಾ ಅದರ ಉತ್ಪತ್ತಿ (ಮಹಿಮೆ) ಹೇಗಿದೆ ಎಂಬುದನ್ನು ಹೇಳುತ್ತೇನೆ ಕೇಳು ಕೀರ್ತನದಲ್ಲಿ ಹರಿನಾಮದ ಗಡಗಡಾಟವಾಗುತ್ತದೆ ಅದರಿಂದ ದೇವರಿಗೆ ಬಹಳ ಸಂತೋಷವಾಗುತ್ತದೆ ಮತ್ತು ಅವನು ವೈಕುಂಠವನ್ನು ಬಿಟ್ಟು ಬೇಗನೆ ಓಡಿ ಬರುತ್ತಾನೆ ದೇವನು, ತನ್ನ ಗುಣ ಕೀರ್ತನದಿಂದ ಮುಗ್ಧನಾಗುತ್ತಾನೆ ಅವನು ವೈಕುಂಠಕ್ಕೆ ಹೋಗುವದನ್ನೇ ಮರೆತು ಬಿಡುತ್ತಾನೆ ಭಕ್ತನ ಭಕ್ತಿಯನ್ನು ಕಂಡು ಅವನಿಗೆ ಅದೇ ಸ್ಥಾನವು ಸೇರುತ್ತದೆ ಅಂದರೆ ಎಲ್ಲಿ ಯದುನಾಯಕನಿರುವನೋ, ಅಲ್ಲಿಯೇ ವೈಕುಂಠವು ಬರುತ್ತದೆ, ಇದರಂತೆ ಭಕ್ತರು ಕೀರ್ತನದಿಂದಲೇ, 'ಸಲೋಕತಾ' ಮುಕ್ತಿಯನ್ನು ಹೊಂದುತ್ತಾರೆಂದು ನೀನು ತಿಳಿದುಕೋ, ನಾಮಸಂಕೀರ್ತನದ ಗಡ ಗಡಾಟದಿಂದ, ಶ್ರೀಹರಿ ಭಕ್ತನ ಹತ್ತಿರ ಓಡಿ ಬರುತ್ತಾನೆ ಇದೇ 'ಸಮೀಪತಾ' ಮುಕ್ತಿಯು ಇರುತ್ತದೆ ಹರಿಕೀರ್ತನದಿಂದಲೇ ಭಕ್ತನಿಗೆ ಅದು ಪ್ರಾಪ್ತವಾಗುತ್ತದೆ ಕೀರ್ತನದಿಂದ ಭಗವಂತನು ಸಂತುಷ್ಟನಾದನೆಂದರೆ, ಅವನು ಭಕ್ತನಿಗೆ ಪ್ರತ್ಯಕ್ಷ ದರುಶನ ಕೊಡುತ್ತಾನೆ ಅವನ ಶ್ಯಾಮಸುಂದರ ಚತುರ್ಭುಜ ಪೀತಾಂಬರಧಾರಿಯಾದ ಧ್ಯಾನವು ಭಕ್ತನ ಮನಸ್ಸಿನಲ್ಲಿ ಸಹಜವಾಗಿ ಬಿಂಬಿಸುತ್ತದೆ ಯಾವ ಧ್ಯಾನದಿಂದ ಭಕ್ತನು ಕೀರ್ತನೆ ಮಾಡುತ್ತಾನೆಯೋ, ಅದೇ ಧ್ಯಾನವು ಮನಸ್ಸಿನಲ್ಲಿ ಪೂರ್ಣವಾಗಿ

ಬಿಂಬಿಸುತ್ತದೆ ಆವಾಗ್ಗೆ ದೇವರ ರೂಪ ಲಕ್ಷಣಗಳು ಭಕ್ತನಿಗೆ ಲಭಿಸುತ್ತವೆ ಶ್ಯಾಮ-ಸುಂದರ, ನಾಲ್ಕು ಭುಜ, ಪೀತಾಂಬರವನ್ನುಡುವ, ಶಂಖಚಕ್ರ ಮುಂತಾದ ಆಯುಧಗಳಿದ್ದ ಇಂತಹ 'ಸರೂಪತಾ', ಕೀರ್ತನದ ಗರ್ಜನೆಗೆ ಮರುಳಾಗಿ ಭಕ್ತನಿಗೆ ಮಾಲೆ ಹಾಕುತ್ತಾಳೆ (ವರಿಸುತ್ತಾಳೆ) ಆವಾಗ್ಗೆ ಭಕ್ತ ಮತ್ತು ದೇವರು ಇಬ್ಬರೂ ಒಂದೇ ಆಗುತ್ತಾರೆ ಇಬ್ಬರ ಅವಯವಗಳು ಒಂದೇ ಸಮ ಮತ್ತು ಇಬ್ಬರ ಆಯುಧ ಅಲಂಕಾರ ಇತ್ಯಾದಿ ಚಿಹ್ನಗಳು ಒಂದೇ ಸಮವಾಗಿರುತ್ತವೆ ಭಕ್ತಿ ಭಾವನೆಯಿಂದ ಹರಿಕೀರ್ತನೆಯನ್ನು ಮಾಡಿದಲ್ಲಿ, ಹರಿಭಕ್ತರಿಗೆ ಇಷ್ಟೊಂದು ಮಹತ್ವ ಉಂಟಾಗುತ್ತದೆ ಲಕ್ಷ್ಮೀಯು ಯಾವಾಗ್ಗೆ ಇಬ್ಬರನ್ನೂ ಒಂದೆಡೆಯಲ್ಲಿ ನೋಡುವಳೋ, ಆವಾಗ್ಗೆ ಭಕ್ತನಾವನು ಮತ್ತು ದೇವನಾವನು ಎಂಬುದನ್ನು ಅವಳು ಕೂಡ ಕಂಡು ಹಿಡಿಯುವದಿಲ್ಲ! ಮಹಾದೇವನಿಗೆ, ಕೂಡ, ನಮಸ್ಕರಿಸುವಾಗ್ಗೆ ಎಡಚಿಡಚಾಗುತ್ತದೆ ನಿಜವಾದ ದೇವರು ಯಾವನು ಎಂಬುದು ಅವನಿಗೂ ತಿಳಿಯುವದಿಲ್ಲ ಶುದ್ಧವಾದ ಹರಿ-ಕೀರ್ತನೆಯಿಂದ ಜನಾರ್ಧನನು ಸಂತುಷ್ಟನಾಗುತ್ತಾನೆ ದೇವನನ್ನು ಭಕ್ತನು ಅಪ್ಪಿಕೊಂಡು ಏಕ ರೂಪನಾಗುತ್ತಾನೆ ಮತ್ತು ಈ ಐಕ್ಯದಿಂದ ಅವನು ಮತ್ತೆ ಎಂದಿಗೂ ಬೇರೆಯಾಗುವದಿಲ್ಲ ಆವಾಗ್ಗೆ ಎಲ್ಲ ಚರಾಚರ ಸೃಷ್ಟಿಯಲ್ಲಿ ಅಂತರ್ಬಾಹ್ಯ ದೇವರು ಪ್ರಕಟನಾಗುತ್ತಾನೆ ಅವನಿಗೆ ಸಂಸಾರದಲ್ಲಿ ಬೇರೆ ಏನೂ ಕಾಣುವದು ಉಳಿಯುವದಿಲ್ಲ ಈ ಪ್ರಕಾರವಾಗಿ ಸ್ವಾನಂದದಲ್ಲಿ ತಲ್ಲೀನವಾದ ವೃತ್ತಿಯು ಪುನಃ ಎಂದಿಗೂ ಬೇರೆಯಾಗದಂತೆ ಆಯಿತೆಂದರೆ, ಅದಕ್ಕೆ 'ಸಾಯುಜ್ಯ' ಮುಕ್ತಿ ಎಂದು ಅನ್ನುತ್ತಾರೆ ಅದರಲ್ಲಿ ಭೇದಭಾವನೆಯು ಎಂತಹದೂ ಉಳಿಯುವದಿಲ್ಲ ಇಂತಹ ಪೂರ್ಣಸಾಯುಜ್ಯತೆಯನ್ನು ಪ್ರಾಪ್ತಮಾಡಿಕೊಂಡು ಭಕ್ತನು ಹರಿಕೀರ್ತನೆಯನ್ನು ಹಾಗೂ ಕಥೆಯನ್ನು ಹೇಳಿದನೆಂದರೆ, ಆವಾಗ್ಗೆ ಆ ಕಥೆಯ ತಲ್ಲೀನತೆಯು ಎಲ್ಲ ಪ್ರಾಣಿಗಳಿಗೂ ಪ್ರಿಯವಾಗುತ್ತದೆ ಈ ಪ್ರಕಾರವಾಗಿ, ಹರಿಕೀರ್ತನೆಯಿಂದ ನಾಲ್ಕೂ ಮುಕ್ತಿಗಳು ದಾಸಿಯಾಗುತ್ತವೆ, ಆದುದರಿಂದ ಭಕ್ತನು ಹರಿಭಜನೆಯಲ್ಲಿಯೇ ಮಗ್ನನಾಗುತ್ತಾನೆ ಅವನು ಮುಕ್ತಿಯನ್ನು ಸ್ವೀಕರಿಸುವದೇ ಇಲ್ಲ ಈ ರೀತಿಯಾಗಿ ಯೋಗ, ಯಾಗ, ತಪ ಮುಂತಾದ ಸಾಧನೆಗಳು, ಹರಿಕೀರ್ತನೆಯಿಂದ ಅನಾಥವಾಗಿ ಬಿಟ್ಟವೆ! ಕಲಿಯುಗದಲ್ಲಿ ನಾಮಸ್ಮರಣ ಮತ್ತು ಹರಿಕೀರ್ತನೆಯಿಂದಲೇ ಜಡಜೀವದ ಉದ್ಧಾರವಾಗುತ್ತದೆ ಕಲಿಯುಗದಲ್ಲಿ ಕೀರ್ತನ ಭಕ್ತಿಯಿಂದ ನಾಲ್ಕೂ ಮುಕ್ತಿಗಳು ಲಭಿಸುತ್ತವೆ ಆದ್ದರಿಂದ ಕಲಿಯುಗದಲ್ಲಿ ಈ ಕೀರ್ತನ ಭಕ್ತಿಯು ಶ್ರೇಷ್ಠವಾಗಿದೆ ಇದಕ್ಕೋಸ್ಕರ ಇಂದ್ರಾದಿ ದೇವ ದೇವತೆಗಳೂ ಕಲಿಯುಗದಲ್ಲಿ ಜನ್ಮತಾಳಲು ಇಷ್ಟಪಡುತ್ತಾರೆ ಸ್ವರ್ಗ ಇದೊಂದು ಭೋಗೇಚ್ಛೆಯ ಸ್ಥಾನವಾಗಿದೆಯಲ್ಲದೆ, ಅದೊಂದು ವಿಷಯಗಳ ಕಾರಾಗೃಹವೇ ಆಗಿದೆ ಆದುದರಿಂದ ಭಾಗ್ಯವಂತರು ಕಲಿಯುಗದಲ್ಲಿ ಜನಿಸಿ ಹರಿಯ ಕೀರ್ತನೆಯನ್ನು ಮಾಡುತ್ತಾರೆ ಸ್ವರ್ಗದಲ್ಲಿಯ ದೇವತೆಗಳು ಕೂಡ ಕಲಿಯುಗದಲ್ಲಿ ಜನಿಸಲು

ಇಚ್ಛೆ ಪಡುತ್ತಾರೆಂದ ಮೇಲೆ, ಕೃತಾದಿ ಯುಗದಲ್ಲಿಯ ಶ್ರೇಷ್ಠ ಜನರು ಕಿರ್ತನ ಧರ್ಮರೂಪ ಭಜನೆಗಾಗಿ ಬೇಕೆನುತಲೆ, ಜನಿಸುವ ಆಸೆ ಪಟ್ಟದುದರಲ್ಲಿ ಏನು ಆಶ್ಚರ್ಯವು? ಕೃತ ಯುಗದಲ್ಲಿಯ ಭಾಗ್ಯವಂತ ಜನರು ಯಜ್ಞಯಾಗಗಳನ್ನು ಮಾಡಿ ಸ್ವರ್ಗಲೋಕಕ್ಕೆ ಹೋದರು, ಆದರೆ ಅವರೂ ಸಹ ಕಲಿಯುಗದಲ್ಲಿ ಜನಿಸುವ ಇಚ್ಛೆ ಮಾಡುತ್ತಾರೆ ಕೃತಯುಗ, ತ್ರೇತಾಯುಗ ಮತ್ತು ದ್ವಾಪರಯುಗ, ಈ ಮೂರೂ ಯುಗದಲ್ಲಿಯ ಉತ್ತಮ ಪುರುಷನೂ ಕೂಡ, ಯಾವಾಗಲೂ ಕಲಿಯುಗದಲ್ಲಿ ಜನಿಸುವ ಇಚ್ಛೆಯನ್ನು ಮಾಡುತ್ತಾನೆ ಆ ಕಾಲದಲ್ಲಿಯ ಜನರು ಪರಸ್ಪರರಲ್ಲಿ ಈ ರೀತಿಯಾಗಿ ಮಾತನಾಡುತ್ತಿರುತ್ತಾರೆ ಅದು ಹೀಗೆ, ಕಲಿಯುಗದಲ್ಲಿ ಕೀರ್ತನದಿಂದ ನಾಲ್ಕು ಪುರುಷಾರ್ಥಗಳು ಸಾಧ್ಯವಾಗುತ್ತವೆ ಇದೇ ಕಲಿಯುಗದ ಮಹತ್ವವಾಗಿದೆ ಮತ್ತು ಇದರಿಂದಲೇ ಜಗತ್ತಿನಲ್ಲಿ ಕಲಿಯುಗವು ಬಹಳ ಧನ್ಯವಾಗಿದೆ ಯಾರು ನಿಜವಾಗಲೂ ಭಾಗ್ಯವಂತರಿರುವರೋ, ಅವರೇ ಕಲಿಯುಗದಲ್ಲಿ ಜನ್ಮತಾಳುತ್ತಾರೆ ಮತಿತಾರ್ಥ ವೇನೆಂದರೆ, ಕಲಿಯುಗದಲ್ಲಿ ಜನ್ಮತಾಳುವದರ ಸಲುವಾಗಿ, ದೇವರಿಗೆ, ಮನುಷ್ಯನಿಗೆ ಸರ್ಪ (ಶೇಷ)ನಿಗೆ ಉತ್ಸುಕತೆಯುಂಟಾಗಿರುತ್ತದೆ ದೀನ ಹೀನರ ಉದ್ಧಾರವಾಗ ಬೇಕೆಂದು, ಕಲಿಯುಗದಲ್ಲಿ ಶ್ರೀ ನಾರಾಯಣನು ಬರಿ ನಾಮಸ್ಮರಣ ಮಾತ್ರದಿಂದಲೇ ಅವರ ಸಂಸಾರಪಾಶವನ್ನು ಹರಿದು ಹಾಕುತ್ತಾನೆ ಸಾರಾಂಶವೇನೆಂದರೆ, ಹರಿಕೀರ್ತನ ದಿಂದಲೇ ಎಲ್ಲರೂ ಸಂಸಾರ ಬಂಧನದಿಂದ ಮುಕ್ತರಾಗುತ್ತಾರೆ ಆದುದರಿಂದ ಹೇ ರಾಜಾ! ಕಲಿಯುಗದಲ್ಲಿ, ಹರಿಕೀರ್ತನೆಯಲ್ಲಿ ವಿಶ್ವಾಸ ಮತ್ತು ಶ್ರದ್ಧೆಯನ್ನಿಟ್ಟರೆ, ಜನರು ಸಹಜವಾಗಿ ಉದ್ಧರಿಸುತ್ತಾರೆಂಬುದರಲ್ಲಿ ಏನೂ ಸಂದೇಹ ಪಡಬೇಡ ಕಲಿಯುಗ ದಲ್ಲಿ ಬಹಳ ಪ್ರಕಾರದ ಜನರು ನಾರಾಯಣನ ಉಪಾಸನೆಯನ್ನು ಮಾಡಬಹುದು ಮತ್ತು ಸ್ತ್ರೀ ಶೂದ್ರರೂ ಕೂಡ ಭಕ್ತಿಯ ಮಹಿಮೆಯನ್ನು ಕೊಂಡಾಡಬಹುದು

## ಪ್ರಕರಣ ೮

ನೀವು ಶ್ರೀಕೃಷ್ಣನನ್ನು ನಿಮ್ಮ ಮಗನೆಂದು ತಿಳಿಯುತ್ತೀರಿ, ಈ ನಿಮ್ಮ ಭಾವನೆಯು ಅತಿ ಕ್ಷುಲ್ಲಕವಾಗಿದೆ ಅವನು ನಿರ್ಗುಣ ಪರಿಪೂರ್ಣ ಪರಮಾತ್ಮನು ಶ್ರೀಕೃಷ್ಣ ರೂಪದಿಂದ ಅವತರಿಸಿದ್ದಾರೆ ಅವನನ್ನು ನೀವು ನಿಮ್ಮ ಬಾಲಕನೆಂದು ತಿಳಿಯಬೇಡಿರಿ, ಇವನು ಸರ್ವೇಶ್ವರನಿದ್ದಾನೆ, ಈ ಶ್ರೀಕೃಷ್ಣನು ಎಲ್ಲರಿಗಿಂತಲೂ ಶ್ರೇಷ್ಠನು, ಸರ್ವಾತ್ಮನು, ಸರ್ವೇಶ್ವರ ಮತ್ತು ಯೋಗಿಗಳಲ್ಲಿಯ ಶ್ರೇಷ್ಠಯೋಗಿ ಇದ್ದಾನೆ ಇವನು ವಿಕಾರರಹಿತ, ನಾಶರಹಿತ, ಪರಾತ್ಪರ,ಪರಮಹಂಸ, ಇಂದ್ರಿಯಗಳ ಚಾಲಕ, ಋಷಿಕೇಶನಿದ್ದು ಜಗನ್ನಿವಾಸಿ ಜಗದಾತ್ಮನಿದ್ದಾನೆ ಇವನು ಮಾಯಾವಿ ಯಾದುದರಿಂದ ಎಲ್ಲರಿಗೂ, ಮನುಷ್ಯರೂಪಧಾರಣ ಮಾಡಿದವನೆಂದು ಕಾಣುತ್ತಾನೆ

ಅವನ ಐಶ್ವರ್ಯವು ಅತೀವ ಗರ್ಭಿತವಾಗಿರುತ್ತದೆ ಅವನು ಗುಣಾತೀತನಿದ್ದು ತ್ರಿಭುವನವೆಲ್ಲ ವ್ಯಾಪಿಸಿರುವನು ಕಾಳಯವನಾದಿ ರಾಕ್ಷಸರು ಜರಾಸಂಧ ಮುಂತಾದ ಮಹಾವೀರರು ಅಲ್ಲದೆ ಅಧರ್ಮವನ್ನು ಮಾಡುವ ಇತರ ರಾಜರು, ಇವರೆಲ್ಲರೂ ಭೂಮಿಗೆ ಭಾರವಾಗಿದ್ದಾರೆಂದು ಭೂಮಿಯ ಭಾರವನ್ನಿಳಿಸುವದರ ಸಲುವಾಗಿ, ನಿರ್ವಿಕಾರ ಧರ್ಮ ಬೆಳೆಯಿಸುವದಕ್ಕಾಗಿ ಮತ್ತು ಸಜ್ಜನರ ಸಂರಕ್ಷಣೆ ಮಾಡುವದಕ್ಕಾಗಿ, ಅವತರಿಸಿದ ಶಾರ್ಙಧರ ಶ್ರೀಕೃಷ್ಣನು ಭಗವಂತನ ಪೂರ್ಣಾವತಾರನಿದ್ದಾನೆ ಭಗವಾನ್ ಶ್ರೀಕೃಷ್ಣನು ಯದುಕುಲದಲ್ಲಿ, ಭಕ್ತರ ಪಾಲನ ಪೋಷಣೆಗಾಗಿ ಮತ್ತು ಸಜ್ಜನರಿಗೆ ಸುಖವನ್ನು ಕೊಡುವದಕ್ಕಾಗಿ ಅವತರಿಸಿದ್ದಾನೆ ಅವನು ಸಂಸಾರರೂಪ ಮದೋನ್ಮತ್ತ ಆನೆಯನ್ನು ನಾಶಮಾಡುವ ಸಿಂಹ ಮತ್ತು ಸಜ್ಜನರೂಪ ತೋಟದ ಮೇಲೆ ಮಳೆಗರೆಯುವ ಮಳೆರಾಜ, ಇಂತಹ ಶ್ರೀಕೃಷ್ಣನು ನಿಮ್ಮ ಮಡಿಲಲ್ಲಿ(ಉದರದಲ್ಲಿ) ಪರಿಪೂರ್ಣತ್ವದಿಂದ ಅವತರಿಸಿದ್ದಾನೆ ಯಾವನು ಮೂರೂ ಲೋಕಗಳನ್ನು ಉದ್ಧರಿಸುವದಕ್ಕೋಸ್ಕರ ಬಹಳ ಮಹತ್ವಪೂರ್ಣವಾದ ತನ್ನ ಕೀರ್ತಿಯನ್ನು ಮಾಡಿರುವನೋ ಯಾವನ ಅವತಾರದ ಕೀರ್ತಿಯನ್ನು, ಬ್ರಹ್ಮದೇವ ಮುಂತಾದವರು ಗಾಯನ ಮಾಡುವರೋ, ಅತಿಶಯ ಕಠಿಣವಾದ ಸಂಸಾರ ಸಮುದ್ರವನ್ನು ದಾಟಿ ಹೋಗುವದರ ಸಲುವಾಗಿ ಯಾವನ ಕೀರ್ತಿಯನ್ನು ಸುರನರರು ಹಾಡುತ್ತಾರೋ ಮತ್ತು ವಿಖ್ಯಾತ ಋಷಿಗಳು ಯಾವನ ಚರಿತ್ರೆಯನ್ನು ಭಕ್ತಿ ಭಾವನೆಯಿಂದ ಯಾವಾಗಲೂ ಹಾಡುತ್ತಾರೋ, ಯಾವನ ನಾಮಸ್ಮರಣದಿಂದ ಭಕ್ತನು ಕಲಿಕಾಳನ ಭಯದಿಂದ ಪಾರಾಗುತ್ತಾನೊ, ಆ ಶ್ರೀಕೃಷ್ಣನು ಅವತಾರ ತಾಳ, ನಿಮ್ಮಲ್ಲಿ ಪ್ರಕಟನಾಗಿದ್ದಾನೆ ಶ್ರೀಕೃಷ್ಣನೆಂದರ ಏಕಮಾದ್ವಿತೀಯ ಪರಬ್ರಹ್ಮನ ಭಾಂಡಾರನಿದ್ದಾನೆ ಅವನನ್ನು ಬಾಲಕನೆಂದು ತಿಳಿಯಬೇಡಿರಿ ಇಷ್ಟು ನೀವು ಮಾಡಿದಿರೆಂದರೆ, ನೀವು ನಿಜವಾಗಲೂ ಸಂಸಾರ ಸಮುದ್ರವನ್ನು ದಾಟಿ ಪಾರಾಗುವಿರೆಂದು ತಿಳಿಯಿರಿ ಹೀಗೆ ಶ್ರೀಕೃಷ್ಣಾವತಾರದ ಕಥೆಯನ್ನು ನಾರದನು ವಸುದೇವನಿಗೆ ಹೇಳಿದನು ಶುಕಯೋಗಿ ಅಂದರು, ಹೇ ಪರೀಕ್ಷಿತಿ ರಾಜಾ! ಅದರಿಂದ ಎಲ್ಲರಿಗೂ ಬಹಳ ಆಶ್ಚರ್ಯವಾಯಿತು

## ಪ್ರಕರಣ ೯

ಈ ತನ್ನ ಸ್ವರೂಪವನ್ನು ಕಂಡುಹಿಡಿಯಬೇಕೆಂದು, ಶ್ರೀಕೃಷ್ಣನು ತನ್ನ ಮಾಯೆಯಿಂದ, ಅನೇಕ ಪ್ರಕಾರದ ಶರೀರಗಳನ್ನು ಉತ್ಪನ್ನ ಮಾಡಿದನು ಕೆಲವು ಭೂಮಿಯ ಮೇಲೆ ಚಲಿಸುವ, ಕೆಲವು ಆಕಾಶದಲ್ಲಿ ತಿರುಗುವ, ಕೆಲವು ನೀರಿನಲ್ಲಿ ವಿಹಾರ ಮಾಡುವ ಶರೀರಗಳನ್ನು ನಿರ್ಮಾಣ ಮಾಡಿದನು ಕೆಲವು ಸ್ಥಾವರ ವ ಜಂಗಮ ಇಂತಹವುಗಳನ್ನು ನಿರ್ಮಿಸಿದನು ಮರ, ಸರ್ಪ, ಪಶು, ಕಚ್ಛುವ ಪ್ರಾಣಿ,

ರಾಕ್ಷಸ, ಪಿಶಾಚಿ, ಒದಕು, ಹಂಸ, ಮೀನ, ಆಮೆ ಇತ್ಯಾದಿ ಎಲ್ಲ ಯೋನಿಗಳನ್ನು ನಿರ್ಮಾಣ ಮಾಡಿದನು ಹೀಗೆ ೮೪ ಲಕ್ಷ ಯೋನಿಗಳನ್ನು ಹುಟ್ಟಿಸಿ ಅದರ ಕಡೆಗ ಕಣ್ಣಿಟ್ಟು ನೋಡಲಾಗಿ ಅವನಿಗೆ, ಅವರಲ್ಲಿ ಆತ್ಮಪ್ರಾಪ್ತಿ ಮಾಡಿಕೊಳ್ಳುವಂತಹ ಅಧಿಕಾರಿ ಯಾರೂ ಕಂಡುಬರಲಿಲ್ಲ ಈ ತರಹದ ಜಗತ್ತನ್ನು ನೋಡಿ ಸಮಾಧಾನ ವಾಗಲಿಲ್ಲ ಆದ್ದರಿಂದ ಅವನು ಬೇಕೆನುತಲೇ ಆಸ್ಥೆಯಿಂದ ಮಾನವ ದೇಹವನ್ನು ನಿರ್ಮಿಸಿದನು ಮತ್ತು ಅವನಿಗೆ, (ಮನುಷ್ಯನಿಗೆ) ಯಾವ ಜ್ಞಾನದಿಂದ ದೇಹದಲ್ಲಿದ್ದು, ವಿದೇಹ ಸ್ಥಿತಿಯನ್ನು ಪಡಯಲು ಬರುವದೋ ಅಂತಹ ತನ್ನ ವಿಪುಲವಾದ ಜ್ಞಾನವನ್ನು ಕೊಟ್ಟನು ಆಹಾರ, ನಿದ್ರಾ, ಭಯ ಮತ್ತು ಮೈಥುನ ಇವುಗಳು ಎಲ್ಲ ಯೋನಿ ಗಳಲ್ಲಿಯೂ ಒಂದೇ ನಮುನಾಗಿರುವವು ಆದರೆ ಮಾನವ ದೇಹದಲ್ಲಿಯ ಜ್ಞಾನವು ಎಲ್ಲದರಕ್ಕಿಂತಲೂ ಶ್ರೇಷ್ಠವಾಗಿದೆ ಇಂತಹ ಮಾನವ ಶರೀರವನ್ನು ನೋಡಿ ದೇವರು ಸಂತುಷ್ಟನಾದನು ಏಕೆಂದರೆ ಈ ದೇಹದಿಂದಲೇ ಬ್ರಹ್ಮಜ್ಞಾನವನ್ನು ಗಳಿಸುವ ಯೋಗ್ಯತೆಯಿದ್ದು, ಇದೇ ದೇಹದಿಂದ ನನ್ನ ಪ್ರಾಪ್ತಿಯಾಗುವಂತಿದೆಯೆಂದು ಅವನಿಗ ಅನಿಸಿತು ಯಾವನು ಮನುಷ್ಯ ಜನ್ಮತಾಳಿ ಬ್ರಹ್ಮಜ್ಞಾನದ ಪ್ರಾಪ್ತಿಯನ್ನು ಮಾಡಿ ಕೊಳ್ಳುವದಿಲ್ಲವೋ, ಅವನು ಯಾವಾಗಲೂ ವಿಷಯವಾಸನೆಯಲ್ಲಿ ಮಗ್ನವಾಗಿರುವ ದಾಡಿಯುಳ್ಳ ಹೋತು ಎಂದು ತಿಳಿಯಬೇಕು

ಮನುಷ್ಯ ದೇಹದಲ್ಲಿಯ ಜ್ಞಾನದಿಂದ ಸಚ್ಚಿದಾನಂದ ಪದವನ್ನು ಪ್ರಾಪ್ತ ಮಾಡಿ ಕೊಳ್ಳಲು ಬರುವದು, ಇಂತಹ ಯೋಗ್ಯತೆಯನ್ನು ನಾರಾಯಣನು ಕೃಪೆ ಮಾಡಿ ಕೊಟ್ಟಿದ್ದಾನೆ ಮನುಷ್ಯ ದೇಹದಲ್ಲಿಯೇ ಬ್ರಹ್ಮಜ್ಞಾನ ಸಂಪಾದಿಸುವದಾದರೆ, ನಾನ್ನು ಮುಂದಿನ ಜನ್ಮದಲ್ಲಿ ಸಂಪಾದಿಸುವೆನೆಂದರೆ, ಅವನು ಸಂಪೂರ್ಣವಾಗಿ ಮುಳುಗಿದ ನೆಂದು ತಿಳಿಯಬೇಕು, ಅವನಲ್ಲಿದ್ದ ಮುಖ್ಯ ಅಜ್ಞಾನವೆಂದರೆ ಇದೇ ಸರಿ ೮೪ ಲಕ್ಷ ಯೋನಿಗಳಲ್ಲಿ ಕೋಟ್ಯಾನುಕೋಟಿ ಸಲ ಭ್ರಮಣವು ಯಾವಾಗ್ಗೆ ಆಗುವದೋ, ಆವಾಗ್ಗೆ ಬಹಳ ಸುದೈವದಿಂದ ಆಕಸ್ಮಿಕವಾಗಿ ಈ ಮನುಷ್ಯ ದೇಹದ ಪ್ರಾಪ್ತಿಯಾಗು ತ್ತದೆ ಯಾವನು ಮನುಷ್ಯ ದೇಹದಲ್ಲಿ ಜನಿಸುವನೋ, ಅವನು ಪರಮಾರ್ಥದ ಸಾಧನೆಯನ್ನು ಮಾಡುತ್ತಾನ ಇಷ್ಟೊಂದು ಅಲಭ್ಯವಾದ ಲಾಭವಾದದ್ದನ್ನು ಕಂಡು ಅವನ ಪಿತೃಗಳು ದೊಡ್ಡ ಸಮಾರಂಭವನ್ನು ಆರಂಭಿಸುತ್ತಾರ ಮಾನವ ದೇಹ ಲಭಿಸಿದ ಮೇಲೆ ಎಲ್ಲ ಭೋಗವಿಲಾಸಗಳನ್ನು ಮೊದಲು ಭೋಗಿಸಿ, ಆಮೇಲೆ ನಿಧಾನವಾಗಿ ಪರಮಾರ್ಥ ಸಾಧಿಸೋಣವೆಂದರೆ, ನಿಜವಾಗಲು ಇಲ್ಲಿ ನರದೇಹವು ಶಾಶ್ವತವಿರುವದಿಲ್ಲ ಕಾರಣ ಮೃತ್ಯುವಿನ ದಾಳಿಯು ಅನಿವಾರ್ಯವಾಗಿದೆ ಮೃತ್ಯುವು ಯಾರ ಗುಣ-ದೋಷಗಳನ್ನು ನೋಡುವದಿಲ್ಲ, ಅವನು ದೇಶ ಅಥವಾ ಪರದೇಶವೆನ್ನುವದಿಲ್ಲ, ಇದು ಹಗಲು ಇಲ್ಲವ ರಾತ್ರಿ ಇದೆಯೆಂದು ನೋಡುವದಿಲ್ಲ, ಆಗಿಂದಾಗಲೇ ಪ್ರಾಣವನ್ನು ತೆಗೆದುಕೊಳ್ಳುವನು ಹೀಗೆ ಹಾವು ಕಪ್ಪೆಯನ್ನು ಹಿಡಿದ ಮೇಲೆ ಬೇಗ ಬೇಗನೆ

ನುಂಗಹತ್ತುತ್ತದೆಯೋ, ಹಾಗೆಯೇ ಜನ್ಮದಾರಭ್ಯ ಮೃತ್ಯುವು ಆಯುಷ್ಯವನ್ನು ಕ್ಷೀಣ ಮಾಡುತ್ತಿರುತ್ತದೆ ಸರ್ಪವು ಕಪ್ಪೆಯನ್ನು ನುಂಗುತ್ತಾ ಇದ್ದರೆ ಕಪ್ಪೆಯು ನೊಣದ ಬೇಟೆಯನ್ನು ಹಿಡಿಯುತ್ತದೆ, ಅದರಂತೆಯೇ, ಮನುಷ್ಯ ಜನ್ಮಕ್ಕೆ ಬಂದು ಮನುಷ್ಯನು ವಿಷಯ ವಿಲಾಸಗಳಿಗೆ ಅಂಟಿಕೊಂಡಿರುತ್ತಾನೆ ಇದರಲ್ಲಿ ಯಾವನು ಆಲಸ್ಯ ಮಾಡುವನೋ ಅವನು ಸಂಪೂರ್ಣವಾಗಿ ಮುಳುಗಿದನು ಅವನ ಕೈಯಲ್ಲಿದ್ದ ಪರಮಾರ್ಥವು ಹೋಗಿ ಅವನು ಸಂಸಾರದ ಸುಳಿಗೆ ಮತ್ತು ಜನ್ಮ ಮರಣದ ಮಡುವಿನಲ್ಲಿ ಸಿಲುಕಿ ಒದ್ದಾಡುತ್ತಾನೆ ಹೇ ಯದುರಾಜಾ! ಇದೆಲ್ಲವನ್ನು ಲಕ್ಷಿಸಿ ಈ ದೇಹದಲ್ಲಿಯೇ ಪರಮಾರ್ಥ ಸಾಧಿಸಲು ಅಂದರೆ ಬ್ರಹ್ಮಪ್ರಾಪ್ತಿ ಮಾಡಿಕೊಳ್ಳಲು ಯಾವಾಗಲೂ ತ್ವರೆ ಮಾಡಲು ಸಿದ್ಧರಿರಬೇಕು. ಆಲಸ್ಯ ಮತ್ತು ನಿದ್ರೆಯನ್ನು ಒಂದೆಡೆಗೆ ಬದಿಯಲ್ಲಿ ಸರಿಸಿ, ಹಗಲಿರುಳೂ ಒಂದೇ ಸಮವಾಗಿ ಆತ್ಮ ಚಿಂತನೆಯನ್ನು ಮಾಡುತ್ತಿರಬೇಕು ಶೂರ ರಣಧೀರ ಕ್ಷತ್ರಿಯನು ಯುದ್ಧಕ್ಕೆ ಹೊರಟನೆಂದರೆ ತನ್ನ ಶತ್ರುವನ್ನು ಗೆಲ್ಲದ ವಿನಃ ಹೇಗೆ ವಿಶ್ರಾಂತಿಯನ್ನು ತೆಗೆದುಕೊಳ್ಳುವದಿಲ್ಲವೋ, ಹಾಗೆಯೇ ವೇಗದಿಂದ ಪರಮಾರ್ಥ ಸಾಧಿಸಲು ಪ್ರಯತ್ನಿಸಬೇಕು ಆತ್ಮ ಸಾಧನೆ ಮಾಡಲು ಈ ದೇಹವು ಸಾಧಕನಿರುತ್ತಾನೆ, ಆದರೆ ಅವನು ವಿಷಯ ವಿಲಾಸದಿಂದ ಬಾಧಕನಾಗುತ್ತಾನೆ ಹೀಗೆ ತಿಳಿದು ಸದ್ಗುರುವಿಗೆ ಶರಣು ಹೋಗಬೇಕು

## ಪ್ರಕರಣ ೧೦

ಇಂತಹ ಕುಶಲ ಸದ್ಗುರುವಾದ ವೈದ್ಯನು ನನ್ನನ್ನು ಉಪಚರಿಸಿ ರೋಗ (ಭವರೋಗ) ದಿಂದ ಮುಕ್ತನನ್ನಾಗಿ ಮಾಡಿದನು ಅಂತಹವನಿಗೆ, (ಸದ್ಗುರುವಿಗೆ) ಶರಣು ಹೋಗಬೇಕೆಂದರೆ ನನಗೆ ಎಲ್ಲೆಡೆಯಲ್ಲಿಯೂ ಅವನೇ (ಸದ್ಗುರುವೇ) ಪ್ರತ್ಯಕ್ಷವಾಗಿ ಕಾಣಿಸುತ್ತಿರುವನು 'ನಿನ್ನಿಂದ ನಾನು ಬೇರೆಯಾಗಿ, ನಿನಗೆ ಶರಣು ಹೋಗಬೇಕೆಂದರೆ, ನಾನು ನೀನು ಎಂಬುವ ಭೇದಭಾವನೆಯೇ ಇಲ್ಲದಂತಾಯಿತು ಹಾಗಾದರೆ ನಾನು ನಿನ್ನನ್ನು ಹೇಗೆ ಭಜಿಸಬೇಕು'' ಯಾರ ಜೀವಗ್ರಂಥಿಗಳು ಇಲ್ಲದಂತಾಗಿ ಯಾರು ಪ್ರತ್ಯಕ್ಷ ಆತ್ಮಾರಾಮನಾದರೋ, ಅವರು ಕೂಡ ನಿನ್ನ ನಿಷ್ಕಾಮ ಭಕ್ತಿಯನ್ನು ಮಾಡುತ್ತಾರೆ ಪರಿಪೂರ್ಣನಾದವನ ಸ್ಥಿತಿಯೇ ಹೀಗಿದೆ ಗುರುಭಜನಗಿಂತ ಮೋಕ್ಷವು ಹೆಚ್ಚಿಗೆ ಆಹ್ಲಾದದಾಯಕವಾಗಿದೆ ಎಂದು ಯಾರಿಗೆ ಅನಿಸುತ್ತಿದೆಯೋ, ಅವನು ಮೂರ್ಖನಿದ್ದಾನೆ ಏಕೆಂದರೆ ಮೋಕ್ಷವು ಗುರುಚರಣವನ್ನು ಸೇವಿಸುತ್ತದೆಯೆಂದು ಬಹಳ ಅಲ್ಪ ಜನರು ತಿಳಿದುಕೊಳ್ಳುತ್ತಾರೆ. ಸದ್ಗುರುವಿನ ಕೃಪಾವಲೋಕನದಿಂದಲೇ ನಾವು ನಿರೋಗಿಯಾಗುತ್ತೇವೆ ನಾವು ಸದ್ಗುರುವಿನ ಸ್ತುತಿಸ್ತೋತ್ರದಿಂದಲೇ ಜಗತ್ತಿನಲ್ಲಿ ಪೂಜ್ಯರಾಗಿದ್ದೇವೆ ಗುರುಸೇವೆಯಿಂದಲೇ ನಾವು ಭಾಗ್ಯವಂತರಾಗಿದ್ದೇವ

ಮತ್ತು ನಮ್ಮಲ್ಲಿರುವ ಯೋಗ್ಯತೆಯು ಗುರುಸ್ತುತಿಯಿಂದಲೇ ನಮಗೆ ಲಭಿಸಿದೆ ಸದ್ಗುರುವಿನ ನಾಮವೇ ನಮಗೆ ವೇದಶಾಸ್ತ್ರವು, ಎಲ್ಲೆಡೆಯಲ್ಲಿಯೂ, ಎಲ್ಲ ಮಂತ್ರಗಳಿಗಿಂತಲೂ ಸದ್ಗುರುವಿನ ನಾಮವೇ ನಮಗೆ ಶ್ರೇಷ್ಠವಾಗಿದೆ ಬರೀ ಸದ್ಗುರುವಿನ ಚರಣ ತೀರ್ಥ ಎಲ್ಲ ತೀರ್ಥಗಳನ್ನು ಪವಿತ್ರ ಮಾಡುತ್ತದೆ ಮತ್ತು ಸದ್ಗುರು ಚರಣವು ನಮ್ಮ ಕ್ಷೇತ್ರ (ಹೊಲ) ವಿದ್ದು, ಅದರ ಸಂಪೂರ್ಣ ಯಜಮಾನತ್ವ ನಮ್ಮ ಕಡೆಗೇ ಇರುವದು 'ಈ ಸ್ತುತಿಯು' ಬಹಳವಾಯಿತು 'ಅನ್ನುವಿ', ಆದರೆ ನಿಜವಾಗಲೂ ನಿನ್ನ ಆಣೆ ಮಾಡಿ ಹೇಳುತ್ತೇನೆಂದರೆ, ನಿನ್ನ ಉದಾರ ಗುಣ ಕೀರ್ತಿಯ ವರ್ಣನೆಯನ್ನು ಮಾಡುವಾಗ ನನ್ನ ಮನಸ್ಸಿಗೆ ತೃಪ್ತಿಯೇ ಆಗುವದಿಲ್ಲ

## ಪ್ರಕರಣ ೧೧

ಕನಸು ಮತ್ತು ಮನೋರಥ ಇವೆರಡೂ ಮನಸ್ಸಿನ ಆಟವೇ ಆಗಿದೆ ಮಲಗಿದವನಿಗೆ ಅದು ನಿಜವೆಂದೆನಿಸುತ್ತದೆ, ಆದರೆ ಎಚ್ಚರಾದ ಮೇಲೆ ಅದೇ ಸುಳ್ಳೆಂದೆನಿಸುತ್ತದೆ ಅದರಂತೆ ವಿಷಯ ವಾಸನೆಯ ಉಲ್ಲಾಸ ಮತ್ತು ಇಂದ್ರಿಯಗಳ ಆಸಕ್ತಿಯ ಮೂಲಕ ಇಹಲೋಕ ಮತ್ತು ಪರಲೋಕದ ಭೋಗದ ಸುಳ್ಳು ಅಭಿಲಾಷವೂ ಬುದ್ಧಿಯಲ್ಲಿ ದೃಢವಾಗಿದೆ ಶಿಂಪು ಶಿಂಪಿನಂತೆಯೇ ಇರುತ್ತದೆ ಆದರೆ ಅದು ಧನ ಲೋಭಿಗೆ ಬೆಳ್ಳಿಯಂತೆ ಕಾಣುತ್ತದೆ ವಿಷಯೇಚ್ಛೆಯಿಂದ ಇವನಿಗೆ ಇಲ್ಲದ ಭೇದ ಭಾವದ ಭೂತವು ಹತ್ತುತ್ತದೆ ಕನಸಿನಲ್ಲಿ ನಾವೇ ಸತ್ತದ್ದನ್ನು ನೋಡುತ್ತೇವೆ ಮತ್ತು ಎಚ್ಚರಾದ ಮೇಲೆ ಅದು ಸುಳ್ಳೆದೆಯೆಂದು ನಾವೇ (ತಿಳಿಯುತ್ತೇವೆ) ಅನ್ನುತ್ತೇವೆ, ಆ ಪ್ರಕಾರವಾಗಿ ಆತ್ಮಜಾಗೃತಿಯೊದ ಮೇಲೆ ಅವನಿಗೆ ಜನ್ಮ ಮರಣವು ಕಣ್ಣಿಗೆ ಕಾಣುವದೇ ಇಲ್ಲ ಜೀವ ಮತ್ತು ಶಿವ ಇವರಲ್ಲಿ ಎಲ್ಲಿಯವರೆಗೆ ಭೇದವು ದೃಢವಾಗಿರುತ್ತದೆಯೋ, ಅಲ್ಲಿಯವರೆಗೆ ಜನ್ಮಮರಣದ ಬಾಧೆಯು ಇರುತ್ತದೆ ಆ ಬಾಧೆಯೇ ನಿಶ್ಚಿತವಾಗಿ ಸುಳ್ಳಾದ ಮೇಲೆ ಅದ್ವೈತದಲ್ಲಿ ಅದರ ಬಾಧೆಯು ಇರುವದಿಲ್ಲ ಆ ಭೇದವು ಹೇಗೆ ಇಲ್ಲದಂತಾಗುವದೋ, ಸ್ವಸ್ವರೂಪ ದರ್ಶನವು ಏತರಿಂದ ಆಗುವದೋ, ಅದಕ್ಕೆ ಒಂದು ಉತ್ತಮ ಶ್ರೇಷ್ಠವಾದ ಸಾಧನವಿದೆ ಅದನ್ನು ಹೇಳುವೆನು ನೀನು ಚೆನ್ನಾಗಿ ಲಕ್ಷ್ಯಕೊಟ್ಟು ಕೇಳು

ಚಿತ್ತದಲ್ಲಿ ವಾಸನೆಯ ಮಲವಿರುತ್ತದೆ ಆದ್ದರಿಂದ ಈ ಭೇದವು (ಜೀವ ಮತ್ತು ಶಿವ ಇವರಲ್ಲಿಯ ಶುದ್ಧವೆನಿಸುತ್ತದೆ ಆ ಚಿತ್ತದಲ್ಲಿಯ ಮಲವನ್ನು ದೂರ ಮಾಡ್ಡುವದಕ್ಕಾಗಿ ಶುದ್ಧ ಮತ್ತು ಸ್ವಚ್ಛ ಕರ್ಮವನ್ನು ಮಾಡುತ್ತಿರಬೇಕು ಹಿಂದಕ್ಕೆ ಯಾವದು ನಿತ್ಯನೈಮಿತ್ತಕ ಕರ್ಮವೆಂದು ನಿಶ್ಚಯವಾಗಿ ಹೇಳಲಾಗಿದೆಯೋ, ಅದಕ್ಕೆ 'ನಿವೃತ್ತ' ಕರ್ಮವೆಂದು ಅನ್ನುತ್ತಾರೆ ಅಂತಹ ಕರ್ಮವನ್ನು ಸಾಧಕನು ಮಾಡ

ಬೇಕು ಯಾವನು ನನ್ನ ಭಜನೆಯನ್ನು ಮಾಡುವನೋ, ಅವನು ಸಕಾಮ ಕರ್ಮವನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು ಮನಸ್ಸಿನಲ್ಲಿ ಯಾವ ತರಹದ ಇಚ್ಛೆಯನ್ನೂ ಇಡಬಾರದು ಇದನ್ನು ಇದಕ್ಕಿಂತ ಮುಂಚಿತವಾಗಿಯೇ ವಿಸ್ತರಿಸಿ ಹೇಳಲಾಗಿದೆ ಪ್ರತಿಯೊಂದು ಕರ್ಮವನ್ನು ನನಗೆ ಅರ್ಪಣ ಮಾಡುವ ಬೆಂಬಲದಿಂದ, ಮಾಡಿದ ಶುದ್ಧ ಕರ್ಮದಿಂದ, ಚಿತ್ತದ ಮಲವು ಕೂಡಲೇ ನಾಶ ಹೊಂದುತ್ತದೆ ಒಕ್ಕಲಿಗನು ಹೊಲವನ್ನು ಬಿತ್ತುತ್ತಾನೆ ಮತ್ತು ಸರಕಾರಕ್ಕೆ ಕೊಡಬೇಕಾದ ಯೋಗ್ಯ ಕಂದಾಯವನ್ನು ಕೊಟ್ಟುಬಿಡುತ್ತಾನೆ. ಊರಿನಲ್ಲಿಯ ಗುಂಡರಿಗೆ ಸ್ವಲ್ಪೂ ಸಹ ಹೆದರುವದಿಲ್ಲ ಕೃಷ್ಣಾರ್ಪಣದಿಂದಲೂ ಹೀಗೆಯೇ ಆಗುತ್ತದೆ ಚಿತ್ತದಲ್ಲಿಯ ಎಲ್ಲ ಮಲವು ತೊಳೆದು ಹೋಯಿತೆಂದರೆ 'ನಿತ್ಯದ' (ಆತ್ಮ) ವಸ್ತುವಿನ ವಿಚಾರವನ್ನು ಮನಸ್ಸು ಮಾಡುತ್ತದೆ ಮತ್ತು ಇಹಪರ ಲೋಕದ ಸುಖವನ್ನು ಒದ್ದು ವೈರಾಗ್ಯದಿಂದ ಅವನು 'ಅನಿತ್ಯದ' ತ್ಯಾಗವನ್ನು ಮಾಡುತ್ತಾನೆ ಈ ಪ್ರಕಾರವಾಗಿ ವೈರಾಗ್ಯವು ದೃಢವಾಯಿತೆಂದರೆ, ಅದರಿಂದ ಸತ್ವಗುಣದ ವೃದ್ಧಿಯಾಗುತ್ತದೆ ಆವಾಗಲೇ 'ನನ್ನನ್ನು' ತಿಳಿದು ಗುರುತಿಸುವಷ್ಟು, ವೃತ್ತಿ ನಿರ್ಮಲವಾಗುತ್ತದೆ ನನ್ನ ಚಿಂತನೆಯಿಂದ ಚಿತ್ತಕ್ಕೆ ಕಾಮಕ್ರೋಧಗಳ ನೆನವು ಕೂಡ ಆಗುವದಿಲ್ಲ ಅವನಿಗೆ ಯಾವಾಗಲೂ ನನ್ನದೇ ಧ್ಯಾನವಿರುತ್ತದೆ ಅವನು ಒಂದು ನಿಮಿಷ ಕೂಡ ನನ್ನ ಚಿಂತನೆಯನ್ನು ಬಿಟ್ಟಿರುವದಿಲ್ಲ ಚಿತ್ತದ ಅವಸ್ಥೆಯು ಹೀಗಾಯಿತೆಂದರೆ ಅವನಿಗೆ ಕ್ರಿಯಾ ಕರ್ಮಗಳಲ್ಲಿ ರುಚಿಯೆನಿಸುವದಿಲ್ಲ ಆವಾಗ್ಗೆ ಅವನು ಎಲ್ಲ ಕರ್ಮಗಳನ್ನು ಸುಟ್ಟು (ಹೋಳಿ ಮಾಡಿ) ಬ್ರಹ್ಮಜ್ಞಾನದಲ್ಲಿ ತಲ್ಲೀನನಾಗಬೇಕು ಅವನು ಶ್ರವಣ ಮನನದಲ್ಲಿರುವಾಗ ಕರ್ಮದಲ್ಲಿ ಏನಾದರೂ ಅಪರಾತಪರವಾದರೆ, ಅದು ನನ್ನ ಭಕ್ತನಿಗೆ ಬಾಧಿಸುವದಿಲ್ಲ. ಏಕೆಂದರೆ ಅವನು ಕರ್ಮಠನಿರುವದಿಲ್ಲ ಸ್ವಧರ್ಮವನ್ನಾಚರಿಸುವದರ ಫಲವೇನು? ಅಂದರೆ ಅದರಿಂದ ಚಿತ್ತಶುದ್ಧವಾಗುವದು ಆದರೆ ನನ್ನ ಭಕ್ತನು ಭಜನದಿಂದಲೇ ನಿರ್ಮಲನಾಗುವದರಿಂದ ಅವನಿಗೆ ಸ್ವಕರ್ಮದ ಬಾಧೆಯೂ ಆಗುವದಿಲ್ಲ ತಾತ್ಪರ್ಯವೇನೆಂದರೆ, ನನ್ನ ಭಕ್ತನು ಕರ್ಮದ ಕಾಯಿದೆಯಂತೆ ನಡೆಯಬೇಕಾಗಿಲ್ಲ ಏಕೆಂದರೆ ಅವನು ಶ್ರವಣ ಕೀರ್ತನ ಮಾಡುತ್ತಿರುವದರಿಂದ, ಅವನು ಕರ್ಮ ಬಂಧನದಲ್ಲಿ ಸಿಗುವದಿಲ್ಲ ಹೀಗೆ ಜಿಜ್ಞಾಸಾವಸ್ಥೆಯಲ್ಲಿರುವವರಿಗೆ ಕರ್ಮವು ಬಾಧಿಸುವದಿಲ್ಲ ಮುಖ್ಯ ಮತಿತಾರ್ಥವೇನೆಂದರೆ, ಅವನ ಲಕ್ಷವು ಬ್ರಹ್ಮಜ್ಞಾನಾರ್ಜನೆಗಾಗಿ ಕೇಂದ್ರಿತವಾಗಿರುತ್ತದೆ ಇದನ್ನೇ ಭಗವಂತನು ಉದ್ಧವನಿಗೆ ಹೇಳುತ್ತಾನೆ

ವೃತ್ತಿಯ ಉಪರಮವಾಗುವದರ ಸಲುವಾಗಿ ಅಹಿಂಸಾ, ಸತ್ಯ ಮುಂತಾದವುಗಳನ್ನು ಧರ್ಮದ ನಿಯಮಕ್ಕೆ ಅಡ್ಡಿಯಾಗದಂತೆ, ವಿಶ್ರಾಂತಿಯನ್ನು ತೆಗೆದುಕೊಳ್ಳದಲೇ ಆಚರಿಸಬೇಕು ಅಹಿಂಸಾ ಸತ್ಯಾದಿಕಗಳನ್ನು ಆಚರಿಸುತ್ತಿರುವಾಗ, ಅವನ ಸ್ಥಿತಿಯು

ಅತ್ಯಂತ ಪ್ರಕಾಶಮಾನವಾಗಿ, ಗುರುಭಕ್ತಿಯ ಮೇಲೆ ಅವನಿಗೆ ವಿಶೇಷ ಪ್ರೀತಿಯುಂಟಾಗುತ್ತದೆ, ಅವನು ಹಗಲಿರುಳೂ ಗುರುವನ್ನೇ ಚಿಂತಿಸುತ್ತಾನೆ ಏಕೆಂದರೆ, ಸದ್ಗುರು ವಿನಃ ಬ್ರಹ್ಮಜ್ಞಾನವು ಎಂದಿಗೂ ಪ್ರಾಪ್ತವಾಗುವದಿಲ್ಲವೆಂಬುದಾಗಿ ಉಪನಿಷದ್‌ಗಳು ಪ್ರಮಾಣ ಮಾಡಿ ತಮ್ಮ ಕೊನೆಯ ನಿರ್ಣಯವೆಂದು ಸಾರಿದ್ದಾವೆ ಕಣ್ಣುಗಳು ಚೆನ್ನಾಗಿವೆ ಆದರೆ ಅವಕ್ಕೇ ಸೂರ್ಯಪ್ರಕಾಶದ ಅವಶ್ಯಕತೆಯಿರುತ್ತದೆ ಇಲ್ಲವಾದರೆ ಕಣ್ಣೆದುರಿಗಿನ ಪದಾರ್ಥವು ಕಣ್ಣಿಗೆ ಕಾಣಿಸುವದಿಲ್ಲ ಅಂದರೆ ಕಣ್ಣಿಗೆ ನೋಡಲು ಆಗುವದಿಲ್ಲ ಅದು ಕತ್ತಲೆಯಲ್ಲಿ ಸ್ತಬ್ಧವಾಗುತ್ತದೆ ಹಡಗವು ಭವಾಬ್ಧಿಯ ಆಚೆಯ ತಟಕ್ಕೆ ಕರೆದುಕೊಂಡು ಹೋಗುವದು ನಿಜ, ಅದರಲ್ಲಿ ಪ್ರಖ್ಯಾತರಾದ ಜನರು ಕುಳಿತಿದ್ದಾರೆ, ಆದರೆ ಆ ಜನರಿಗೆ ನಾವಿಕನ ವಿನಃ ಆಚೆಯ ದಂಡೆಗೆ ಹೋಗಲು ಬರುವದಿಲ್ಲ ಮಳೆಯಿಂದ ಭೂಮಿಯು ಹಸಿಯಾಯಿತು ಮತ್ತು ಬೀಜಗಳಿಂದ ಕಣಜ ತುಂಬಿದೆ, ಆದರೆ ತಿಳಿದವನು ಎಲ್ಲಿಯವರಿಗೆ ಬಿತ್ತುವದಿಲ್ಲವೋ, ಅಲ್ಲಿಯವರೆಗೆ ಬೆಳೆಯ ಬಗ್ಗೆ ವಿಚಾರ ಮಾಡುವದು ನಿರರ್ಥಕವಾಗಿದೆ ಆಕಸ್ಮಿಕವಾಗಿ ಒಂದು ರತ್ನವು ಸಿಗುತ್ತದೆ, ಅದು ನಿಜವೋ ಸುಳ್ಳೋ ಎಂಬ ಸಂದೇಹವು ಮನಸ್ಸಿನಲ್ಲಿ ಉತ್ಪನ್ನವಾಗುತ್ತದೆ, ಆವಾಗ್ಗೆ ರತ್ನ ಪರೀಕ್ಷಕನು ಬಂದು ಅದರ ಬೆಲೆ ಕಟ್ಟುತ್ತಾನೆ ಆ ಮೇಲೆ ಅದನ್ನು ತೆಗೆದುಕೊಳ್ಳುವದರ ಸಲುವಾಗಿ ಜನರು ಪ್ರಯತ್ನಿಸುತ್ತಾರೆ ಈ ಪ್ರಕಾರವಾಗಿ ಆತ್ಮ ಸ್ವರೂಪವು ಸ್ವತಃ ಸಿದ್ಧವಾಗಿರುತ್ತದೆ, ಅದನ್ನು ಶ್ರದ್ಧೆಯಿಂದ ಸದ್ಗುರುವಿನ ಕಡೆಯಿಂದ ನಿಜವನ್ನು ಸ್ಪಷ್ಟಮಾಡಿಕೊಂಡು, ಜ್ಞಾನವಂತರು ಆತ್ಮಸುಖಕ್ಕೆ ಪಾತ್ರರಾಗುತ್ತಾರೆ ಆತ್ಮಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವದಕ್ಕಾಗಿ ಸಂತ ಸಜ್ಜನರು ಸದ್ಗುರುವಿನ ಸೇವೆಮಾಡಿ ಶಾಂತರಾಗುತ್ತಾರೆ ಏಕೆಂದರೆ ಸದ್ಗುರುವು ಆನಂದಮಯನಿದ್ದಾನೆ ಆದರೆ 'ನೀನು, ಅನೇಕ ತರತರಹದ ಸಾಧನೆಗಳನ್ನು ಮಾಡಿದೆ, ಅದರಲ್ಲಿ ಸದ್ಗುರುವು ಒಂದು ಸಾದನೆಯಿರಬಹುದು' ಎಂದು ಅನ್ನುವಿಯಾದರೆ ಮುಮುಕ್ಷುವಾದ ನಿನ್ನಂತಹ ಮೂರ್ಖನು ಯಾರೂ ಇಲ್ಲ ಅವನ ನಿಜಾತ್ಮಸುಖವು ಲೋಪವಾಗುವುದು ಸದ್ಗುರುವು ಒಂದು ಸಾಧನವಾಗಿದೆ ಮತ್ತು ಸಾಧ್ಯವು ಅವನಿಂದ ಬೇರೆಯಿದೆ ಎಂದರೆ ಸಾಧನವೆಲ್ಲವೂ ವ್ಯರ್ಥವಾಯಿತು ಅವನು ಎಲ್ಲ ರೀತಿಯಿಂದ ವಂಚಿತನಾದನೆಂದು ತಿಳಿಯಬೇಕು ಯಾವನು ಚಿತ್ಸುಖದಿಂದ ಪರಿಪೂರ್ಣನು ಚಿತ್ಸಮಾಧಾನದಿಂದ ಸಮಾಧಾನಿಯಾಗಿರುವನೋ, ಅವನು ಚಿನ್ಮಾತ್ರದಿಂದ ಎಂದಿಗೂ ಬೇರೆಯಾಗಿರಲಾರನು ಏಕೆಂದರೆ ಉಪ್ಪು ಸಮುದ್ರವನ್ನು ಕೂಡಿತೆಂದರ ಅದು ಸಮುದ್ರದಂತೆ (ತದ್ರೂಪ) ಆಗುತ್ತದೆ ದೀಪವು ಕಾಡ್ಗಿಚ್ಚಿಗೆ ಅಪ್ಪಿತೆಂದರೆ ಅದು ಪ್ರಜ್ವಲಿತವಾಗಿ ತದ್ರೂಪ ಆಗುತ್ತದೆ ಅದರಂತೆ ಯಾವನಿಗೆ ಚಿದ್ರೂಪದ ಜ್ಞಾನವಾಗುವದೋ ಅವನು ಸಂಪೂರ್ಣ ಚಿದ್ರೂಪನಾಗುತ್ತಾನೆ ಅದರಂತೆ ಗುರು ಮತ್ತು ಬ್ರಹ್ಮ ಭಿನ್ನವಾಗಿರುವ

ದಿಲ್ಲವೆಂಬುದಕ್ಕೆ ಉಪನಿಷದ್‌ಗಳು ಸಾಕ್ಷಿಯಾಗಿವೆ ಇಲ್ಲವೆ ತುಪ್ಪದಿಂದ ಬೊಂಬೆಯನ್ನು ಮಾಡಿದರೆ ಅದು ತುಪ್ಪದಿಂದ ಬೇರೆಯಾಗಿರುವದಲ್ಲದೆ ತದ್ರೂಪವಾಗಿರುತ್ತದೆ, ಆ ಪ್ರಕಾರವಾಗಿ ಸದ್ಗುರುವಿನ ಮೂರ್ತಿಯೂ ಕೂಡ ಚಿದ್ರೂಪದಿಂದ ಆಕಾರಕ್ಕೆ ಬಂದಿರುತ್ತದೆ (ಅರ್ಥಾತ್ ಬ್ರಹ್ಮರೂಪವಿರುತ್ತದೆ) ಕೇವಲ ಚಿತ್ಸುಖದ ಬೊಂಬೆ, ಇಲ್ಲವೆ ಸಚ್ಚಿದಾನಂದದ ಉತ್ಸವವನ್ನು ಕಣ್ಣಾರೆ ನೋಡಬೇಕೆಂದು ಲೀಲಾವಿಗ್ರಹಿಯಾದ ಅವನು ದೇಹಧಾರಿಯಾಗಿದ್ದಾನೆ ಅವನ (ಸದ್ಗುರು) ಭೆಟ್ಟಿಯಾಗಬೇಕಾದರೆ, ಕೋಟಿಗಟ್ಟಲೆ ಪುಣ್ಯ ಸಂಚಯವಿರಬೇಕಾಗುತ್ತದೆಯೆಂದು ಮಾತನಾಡಿದರೆ, ಅವನು ನಮ್ಮ ಕಣ್ಣಿಗೆ ಕಾಣಿಸುವವನೆಂಬುವ ಮಾತಲ್ಲ ಸದ್ಗುರುವು ಯಾವ ಕಡೆಗೆ ನೋಡುವನೋ, ಅಲ್ಲಿ ಸುಖದ ಸಮೃದ್ಧಿಯಾಗುತ್ತವೆ ಅವನು ಎಲ್ಲಿ ನುಡಿಯುವನೋ ಅಲ್ಲಿ ಮಹಾಬೋಧವು ಸ್ವಾನಂದದಿಂದ ಇರುತ್ತದೆ ಆ ಸದ್ಗುರುವಿನ ಚರಣಗಳನ್ನು ಕಂಡಮೇಲೆ, ಹಸಿವೆ–ನೀರಡಕೆಗಳು ತಕ್ಷಣ ಮಾಯವಾಗುತ್ತವೆ ಕಲ್ಪನೆಯ ತರಂಗಗಳು ಏಳುವದೇ ಇಲ್ಲ ತಾತ್ಪರ್ಯವೇನೆಂದರೆ ಗುರುವಾದಂಗಳಲ್ಲಿ ನಿಜಸುಖವಿರುತ್ತದೆ ಆ ಸದ್ಗುರುವಿನ ಲಕ್ಷಣ ಹೇಳಬೇಕೆಂದರೆ ಶಬ್ದಗಳು ಕುಂಠಿತವಾಗುತ್ತವೆ ಯಾವನು ಆದಿ ಮೂಲ ಪೂರ್ಣ ಬ್ರಹ್ಮನಿರುವನೋ ಅವನ ಗುರುತು ಏನೆಂದು ಹೇಳಬೇಕು? ಆದರೂ ಒಂದು ಗುರುತು ಹೇಳಬೇಕೆಂದು ಸ್ಫೂರ್ತಿಯುಂಟಾಗಿದೆ ಅದೇನೆಂದರೆ ಅವನಲ್ಲಿ (ಸದ್ಗುರುವಿನಲ್ಲಿ) ಪ್ರಚಂಡ ಶಾಂತಿಯು ಕಂಡು ಬರುತ್ತದೆ ಶಾಂತಿಯ ಹೊರತು ಬೇರೆ ಯಾವ ಪ್ರಮಾಣವು ನಿಶ್ಚಿತವಾಗಿ ಯಾವದೂ ಕಾಣಿಸುವದಿಲ್ಲ ಉದ್ಧವಾ! ಶಾಂತಿಯೇ ಸಮಾಧಾನವಾಗಿರುತ್ತದೆ ಶಾಂತಿಯೆಂದರೆ ಬ್ರಹ್ಮಜ್ಞಾನವು ಮತ್ತು ಶಾಂತಿಯೆಂದರೇನೇ ಪೂರ್ಣಬ್ರಹ್ಮನೆಂದು ನೀನು ಖಾತ್ರಿಪೂರ್ವಕವಾಗಿ ತಿಳಿದುಕೊ ಸದ್ಗುರುವಿನ ಈ ಪ್ರಕಾರದ ಸ್ಥಿತಿಯನ್ನು ಕೇಳಿ ಶಿಷ್ಯನ ಮನಸ್ಸಿನಲ್ಲಿ ಗುರುಭಕ್ತಿಯ ಬಗ್ಗೆ ವಿಶೇಷ ಪ್ರೀತಿಯುಂಟಾಯಿತೆಂದು ಅವನು ಗುರುವಿನ ಶೋಧ ಮಾಡತೊಡಗಿದನು ಅವನ ಅಂತಃಕರಣವು ಅವನಿಗೆ ವಿಶ್ರಾಂತಿಕೊಡದಂತಾಯಿತು ಎಂಟೊಪ್ರಹರ ಅವನು ಗುರುಲಕ್ಷಣದ ಚಿಂತನೆಯನ್ನೇ ಮಾಡಲು ಪ್ರಾರಂಭ ಮಾಡಿದನು 'ಆ ಸರ್ವಸಮರ್ಥನನ್ನು ನಾನು ಯಾವಾಗ ಕಾಣುವೆ? ನಾನು ಈ ಬಂಧನದಿಂದ ಯಾವಾಗ ಮುಕ್ತನಾಗುವೆನು? ಮನಸ್ಸಿಗೆ ಯಾವಾಗ ಶಾಂತಿಯು ಲಭಿಸುವದು?' ಹೀಗೆ ಅವನು (ಶಿಷ್ಯನು) ಸದ್ಗುರುವಿನ ಸಲುವಾಗಿ ಹುಚ್ಚನಾದನು ಈ ಆಯುಷ್ಯವು ಹಾ, ಹಾ, ಅನ್ನುವದರಲ್ಲಿ ಮುಗಿಯುತ್ತಾ ಬಂದಿತು ನನಗೆ ಇನ್ನಾದರೂ ಸದ್ಗುರುವಿನ ಭೆಟ್ಟಿಯಾಗುವದಿಲ್ಲ, ಮಾನವ ಶರೀರವು ಬಿದ್ದು ಹೋದರೆ ಎಲ್ಲವೂ ಮುಗಿದಂತಾಯಿತು. (ಹೀಗೆ ಅವನಿಗೆ ಅನಿಸಹತ್ತಿತು) ಬರಿ ಗುರುವಿನ ಹೆಸರು ಕೇಳಿದರೂ ಕೂಡ ಅವನು ಮನಸ್ಸಿಗಿಂತ ಮುಂಚಿತವಾಗಿ ಮುಂದೋಡುತ್ತಾನೆ ಮತ್ತು ಆ ನಾಮಕ್ಕೆ ಅಂಟಿಕೊಳ್ಳುತ್ತಾನೆ ಇಷ್ಟೊಂದು ಅವನು ಅಧೀರನಾಗುತ್ತಾನೆ ಸದ್ಗುರುವು

ಪ್ರತ್ಯಕ್ಷವಾಗಿ ಭೆಟ್ಟಿಯಾಗದಿದ್ದರೆ, ಅವನು ಮನಸ್ಸಿನಲ್ಲಿಯೇ ಗುರುನಾಥನ ಪೂಜೆಯನ್ನು ಮಾಡುತ್ತಾನೆ ಮತ್ತು ಶ್ರೇಷ್ಠ ಭಕ್ತಿಯಿಂದ ಪೂಜೆಯನ್ನು ಮಾಡುವಾಗ ಅವನ ಪ್ರೀತಿಗೆ ಇಷ್ಟೊಂದು ಭರತಿ ಬರುತ್ತದೆಯಲ್ಲಾ, ಅದು ಅವನ ಹೃದಯದಲ್ಲಿ ತುಡರಿಂಬ ತುಂಬಿ ಹರಿಯುತ್ತದೆ ಸದ್ಗುರುವಿನ ಶೋಧಕ್ಕಾಗಿ (ಭೆಟ್ಟಿಗಾಗಿ) ಅವನು ತೀರ್ಥ ಮತ್ತು ತಪೋವನದಲ್ಲಿ ತಿರಗುತ್ತಿರುತ್ತಾನೆ ಅವನು ದಿನ ನಿತ್ಯದ ಕೆಲಸ ಮಾಡುವಾಗೂ ಕೂಡ ಗುರುವನ್ನು ಒಂದು ನಿಮಿಷ ಮಾತ್ರವೂ ಅವನನ್ನು (ಸದ್ಗುರುವನ್ನು) ಮನಸ್ಸಿನಿಂದ ಮರೆಯುವದಿಲ್ಲ ಸದ್ಗುರುವಿನ ಭೆಟ್ಟಿಯಾಗಬೇಕೆಂದು ಸಣ್ಣ ಮತ್ತು ದೊಡ್ಡವರ ಪೂಜೆಯನ್ನೇ ಮಾಡಲು ಪ್ರಾರಂಭಿಸುತ್ತಾನೆ, ನನ್ನ ಗುರು ನನಗೆ ಭೆಟ್ಟಿಯಾಗಬೇಕೆಂದು ಅವನು ಬ್ರಾಹ್ಮಣರ ಬಹಳ ಸನ್ಮಾನವನ್ನು ಮಾಡುತ್ತಾನ ಅವನು ಕರಡಿಯಂತೆ "ಗುರು, ಗುರು" ಎಂದು ಒಂದೇ ಸಮನಾಗಿ ಜಪವನ್ನೇ ಮಾಡುತ್ತಿರುತ್ತಾನೆ ಅವನು ಸದೈವ ಗುರುವಿನ ಮತ್ತೆ ಬೇರೆಯಾವದರ ಚಿಂತನ ಯನ್ನೂ ಮಾಡುವದಿಲ್ಲ ಅವನು ಕೂಡುವಾಗ, ಊಟ ಮಾಡುವಾಗ, ಮಲಗುವಾಗ, ಮನಸ್ಸಿನಲ್ಲಿಯು ಗುರುಸ್ಮರಣೆಯನ್ನು ಮರೆಯುವದಿಲ್ಲ ಎಚ್ಚರಿಕೆ ಮತ್ತು ಕನಸಿನಲ್ಲಿ ಕೂಡ ಅವನ ಗುರುವಿನ ನಿಧಿಧ್ಯಾನವು ಒಂದೇ ಸಮನಾಗಿ ನಡದೇ ಇರುತ್ತದ. ನೋಡಿರಿ ಗುರುವಿನ ಸ್ಮರಣಮಾತ್ರದಿಂದ ಹಸಿವೆ-ನೀರಡಿಕೆಗಳು ಹಿಂಗತ್ತವೆ ಅವನು ಮನೆ ವ ಸಂಸಾರ ಸುಖವನ್ನು ಮರೆತು, ಯಾವಾಗಲೂ ಪರಮಾರ್ಥ ಸಾಧನೆಯಲ್ಲೇ ಮಗ್ನನಾಗಿರುತ್ತಾನೆ ಹೀಗೆ ಸದ್ಗುರುವಿನಲ್ಲಿ ಯಾವನಿಗ ಪ್ರೀತಿಯಿರುವದೊ, ಅವನ ಆಸ್ಥೆಯು ಉತ್ತರೋತ್ತರ ಬೆಳೆಯುತ್ತಲೇ ಹೋಗುತ್ತದೆ ಅವನಿಗ ನಾನು (ಶ್ರೀಕೃಷ್ಣನು) ಕೂಡಲೆ ಗುರುವಿನ ರೂಪದಿಂದ ಪ್ರತ್ಯಕ್ಷ ದರ್ಶನ ಕೊಡುವನು ಆತುರತೆಯು ಎಷ್ಟು ಎಷ್ಟು ಅಧಿಕವೋ, ಅಷ್ಟೇ ಭೆಟ್ಟಿಯು ಬೇಗನ ಆಗುವದು ಸಾಧನಗಳಲ್ಲಿ ಆತುರತೆ ಇದೇ ಮುಖ್ಯ ಸಾಧನವಾಗಿದೆ ಕೋಟ್ಯಾವಧಿ ಮಹತ್ತರ ಸಾಧನೆಗಳನ್ನು ಮಾಡಿದರೂ ಕೂಡ, ಆತ್ಮಜ್ಞಾನದ ಒಂದು ಕವಡಿಯು ಕೂಡ ಕೈಗೆ ಹತ್ತುವದಿಲ್ಲ ಆದರೆ ಸದ್ಗುರುವಿನ ಭಜನಯನ್ನು ಒಂದು ಅರೆಘಳಿಗೆ ಮಾಡಿದರೂ ಸಾಕು ಆತ್ಮಜ್ಞಾನದ ರಾಶಿಯೇ ನಿಮಗೆ ಸಿಗುವದು ಸದ್ಗುರುವಿನ ಭಜನೆಯನ್ನು ಪ್ರಾರಂಭಿಸಿದ ಮೇಲೆ, ಮೋಕ್ಷವು ತಾನಾಗಿಯೇ ನಿಮ್ಮ ಕಡೆಗೆ ಬರುತ್ತದೆ ಆದರೆ ಗುರುಭಕ್ತನಿದ್ದವನು ಅದ (ಮೋಕ್ಷ)ನ್ನು ಸ್ವೀಕರಿಸುವದಿಲ್ಲ. ಏಕೆಂದರೆ ಅವನು ಚರಣ ಸೇವೆಯಲ್ಲಿಯೇ ಮಗ್ನನಾಗಿರುತ್ತಾನೆ ಶ್ರೀ ಗುರು ಚರಣದ ಅಭಿರುಚಿಯು ಹೀಗೆ ಇರುತ್ತದೆಯಲ್ಲಾ, ಅದು ಮೋಕ್ಷ ಸುಖದ ರಾಶಿಯನ್ನೂ ಮರೆಯಿಸುತ್ತದೆ ಗುರುಭಜನೆಯಲ್ಲಿ ಯಾರಿಗೆ ಆಸಕ್ತಿ ಇರುವದಿಲ್ಲವೋ, ಅವರೇ ಸಂಸಾರ ಬಂಧನದಲ್ಲಿ ಸಿಲುಕುತ್ತಾರೆ ಸಂಸಾರ ಬಂಧನವನ್ನು ಕಿತ್ತೊಗೆಯಬೇಕಾದರೆ, ಸದ್ಗುರುವಿನ ಸೇವೆಯ ಅತ್ಯಂತ ಅವಶ್ಯಕತೆಯಿದೆ ಸದ್ಗುರುವಿನ ಸೇವೆಯೇ ನನ್ನ (ಶ್ರೀಕೃಷ್ಣ) ಭಜನೆಯಿರುವದು ಏಕೆಂದರೆ

ಗುರು ಮತ್ತು ನನ್ನಲ್ಲಿ (ಶ್ರೀಕೃಷ್ಣ) ಭೇದಭಾವವಿರುವದಿಲ್ಲ ಈ ಪ್ರಕಾರವಾಗಿ ಗುರುಭಕ್ತರ ಶ್ರದ್ಧೆಯು ಅಮರ್ಯಾದಿತವಾಗಿರುತ್ತದೆ ಮತ್ತು ಅವರಿಗೆ ಗುರುಭಜನೆಯ ಅಭಿರುಚಿಯಷ್ಟೊಂದುಯಿರುವದೆಂಬುದನ್ನು ನಾನು (ಶ್ರೀಕೃಷ್ಣ) ನಿನಗೆ ಪ್ರೀತಿಯಿಂದ ಸವಿಸ್ತಾರವಾಗಿ ಹೇಳಿದೆ ಕೃಷ್ಣನು ಅನ್ನುತ್ತಾನೆ, ಉದ್ಧವಾ! ಈಗ ಅನಾಯಾಸವಾಗಿ ಸಮಯೋಚಿತವಾದ ಸಂದರ್ಭಕ್ಕನುಸರಿಸಿ ಶಿಷ್ಯನ ಲಕ್ಷಣಗಳನ್ನು ನಾನು ನಿನಗೆ ಹೇಳುತ್ತೇನೆ

ಜಾಳಿಗೆಯಲ್ಲಿ ಸಿಕ್ಕ ಮೀನವು ಹೇಗೆ ಒದ್ದಾಡುತ್ತಿದೆಯೋ, ಹಾಗೆಯೇ ಸತ್-ಶಿಷ್ಯನು ಮಾನ ಸನ್ಮಾನಗಳನ್ನು ಕಂಡು ತೊಂದರೆಗೀಡಾಗುತ್ತಾನೆ 'ಬಾವಾ' ಬಂದನೆಂಬ ಅಂಜಿಕೆಯಿಂದ ಮಗು ಹೇಗೆ ಕಕ್ಕಾವಿಕ್ಕಿಯಾಗುತ್ತದೆಯೋ, ಹಾಗೆ ಸನ್ಮಾನದ ಭಯದಿಂದ ಪ್ರಾಣಾಂತ ಸಮಯವು ಬಂದಿತೆಂದು ಅವನಿಗೆ (ಶಿಷ್ಯನಿಗೆ) ಅನಿಸುತ್ತದೆ ಬಿರುಗಾಳಿಯಿಂದ ಬಾಳೆಯಗಿಡವು ಹೇಗೆ ಬೇರುಸಹಿತ ಅಲ್ಲಾಡುವದೋ ಇಲ್ಲವೆ ತೆರೆಗಳು ಅಪ್ಪಳಿಸುವದರಿಂದ ನೀರಿನಲ್ಲಿಯ ಸೂರ್ಯ ಬಿಂಬವು ಹೇಗೆ ಅಲ್ಲಾಡುವದೋ, ಹಾಗೆಯೇ ಅವನು ಸನ್ಮಾನವನ್ನು ಕಣ್ಣಿನಿಂದ ಕೂಡ ಅವಲೋಕಿಸುವದಿಲ್ಲ ದೊಡ್ಡಿಸ್ತನವು ಒಂದು ದೊಡ್ಡ ಕುತ್ತೆಂದು ತಿಳಿದು ಅದು (ದೊಡ್ಡಿಸ್ತನವು) ತನ್ನ ಕಡೆಗೆ ಬಾರದಂತೆ ನೋದಿಕೊಳ್ಳುತ್ತಾನೆ ಪ್ರೀತಿ ಯಿಂದ ಸನ್ಮಾನವನ್ನು ತೆಗೆದುಕೊಂಡರೆ, ಅದರಿಂದ ದೇಹಾಭಿಮಾನವು ದೃಢವಾಗುವ ದೆಂದು ತಿಳಿದು ಅವನು ಮಾನಾಭಿಮಾನವನ್ನು ಬಿಟ್ಟು ಹೀನ-ದೀನನಾಗಿಯೇ ಇರುತ್ತಾನೆ ತನ್ನ ಅಸ್ತಿತ್ವವು (ನಾಮ, ರೂಪ) ಇಲ್ಲದಂತಾಗಬೇಕು ಹಾಗೂ ತನ್ನನ್ನು ಕಣ್ಣೆತ್ತಿ ಯಾರೂ ನೋಡಬಾರದಂತಹ ಸ್ಥಿತಿಯು ಏತರಿಂದ ಬರುವದೋ, ಅಂತಹ ಪ್ರಯತ್ನವನ್ನು ಅವನು ಮಾಡಲಾರಂಭಿಸುತ್ತಾನೆ ಲೋಕ ವ್ಯವಹಾರವನ್ನು ಕಂಡು ಅವನು ಉದ್ವಿಗ್ನನಾಗುತ್ತಾನೆ ಶರೀರ ಮತ್ತು ಮನಯ ಬೇಸರ ಉಂಟಾಗುತ್ತದೆ ಏಕಾಂತವಾಸವೇ ಅವನಿಗೆ ಒಳ್ಳೆಯದೆಂದೆನಿಸುತ್ತದೆ ಹೀಗಾಗಿ ಅವನು ಬೇರೆಯವರ ಸಹವಾಸವನ್ನೇ ಮಾಡುವದಿಲ್ಲ ನನ್ನನ್ನು ಯಾರು ನೋಡಬಾರದು, ನನ್ನನ್ನು ಯಾರೂ ಗುರುತಿಸಬಾರದು, ನನಗೆ ಯಾರೂ ನಾಚ ಬಾರದು ಎಂದು ಅವನು ಮನಃಪೂರ್ವಕವಾಗಿ ಇಚ್ಛಿಸುತ್ತಾನೆ ಕಳ್ಳರು ಬೆನ್ನಟ್ಟಿದ ರೆಂದರೆ ಹೇಗೆ ಧನಾಢ್ಯ ಮನುಷ್ಯನು ತೊಂದರೆಗೀಡಾಗಿ ಅಡಗಿಕೊಳ್ಳುತ್ತಾನೋ, ಹಾಗೆಯೇ ಇವನು ಮಾನವನ್ನು ಅವಲೋಕಿಸಿ ದೇಹವನ್ನು ಉಪೇಕ್ಷಿಸಿ ಅದರಲ್ಲಿ ಅಡಗಿ ಕೊಳ್ಳುತ್ತಾನೆ ಜನರಲ್ಲಿ ನನ್ನನ್ನು ಯಾರೂ ಗುರುತಿಸಬಾರದೆಂಬ ಅವಸ್ಥೆಯಲ್ಲಿ ಅವನು ಇರುತ್ತಿರುತ್ತಾನ ಎಂತಲೇ ಅವನಿಗೆ ಮಾನ-ಮರ್ಯಾದೆಯು ಸಹನವಾಗುವದಿಲ್ಲ 'ನಾನು' ಮತ್ತು 'ನನ್ನದು' ಎಂಬ ಅಹಂಭಾವವನ್ನು ಬಿಟ್ಟುಬಿಡಬೇಕೆಂದು, ಮಾನದ ಕಡೆಗೆ ನೋಡುವದಿಲ್ಲ ಏಕೆಂದರೆ ಜನರು ಸನ್ಮಾನಿಸಿದರೆಂದರೆ, ದೇಹದಲ್ಲಿಯ ಅಹಂಭಾವವು ನೆಲೆಯೂರಬಹುದೆಂದು ಅವನಿಗೆ ಅನ್ನಿಸುತ್ತದೆ ಯಾರಲ್ಲಿ ಅಹಂಭಾವವು

ಬಲಾಢ್ಯವಾಗಿರುವದೋ, ಅವರೇ ನಿರಂತರ ಸನ್ಮಾನವನ್ನಿಚ್ಛಿಸುತ್ತಾರೆ ಯಾವನು ಅಭಿಮಾನವನ್ನೇ ಬಿಟ್ಟುಬಿಡಲು ಸಿದ್ಧನಿರುವನೋ, ಅವನು ಮಾನಾಪಮಾನವನ್ನು ಲಕ್ಷಿಸುವದಿಲ್ಲ ಯಾವನು ಸನ್ಮಾನವನ್ನು ಸ್ವೀಕರಿಸಿರುವನೋ, ಅವನಿಗೆ ಅಪಮಾನವು ಸಹನವಾಗುವದಿಲ್ಲ ಆವಾಗ್ಗೆ ಅಲ್ಲಿ ಸುಲಭವಾಗಿ ದೇಹಾಭಿಮಾನವು ತಲೆಯೆತ್ತುತ್ತದೆ ಆದಕ್ಕೆ ಅವನು ಎಳ್ಳಷ್ಟೂ ಸನ್ಮಾನವನ್ನು ಅಪೇಕ್ಷಿಸುವದಿಲ್ಲ ನಿಜವಾಗಿ ನೋಡಿದಲ್ಲಿ ಜ್ಞಾನವಂತನು ತನ್ನ ಸನ್ಮಾನವಾಗಬೇಕೆಂತಲೇ, ತನ್ನ ಜ್ಞಾತೃತ್ವವನ್ನು ಮರೆಯಿಸುತ್ತಲೇ ಇರುತ್ತಾನೆ ಆ ಸಮಯದಲ್ಲಿ ಧನ ಮತ್ತು ಸ್ವಾರ್ಥದ ಮೋಹದಲ್ಲಿ ತನ್ನತನವು (ಮಮತೆಯು) ಇರುತ್ತದೆ ತಾತ್ಪರ್ಯವೇನೆಂದರೆ, ಸನ್ಮಾನವನ್ನು ಬಯಸದಿರುವದೇ ಶಿಷ್ಯನ **'ಮೊದಲನೇ'** ಲಕ್ಷಣವು ಇರುತ್ತದೆ

ಇನ್ನು 'ನಿರ್ಭರ್ತ್ಸರ'ವೆಂದರೆ ಏನು ಎಂಬುದರ ಲಕ್ಷಣವನ್ನು ಹೇಳುತ್ತೇನೆ ಕೇಳು ಜ್ಞಾತೃತ್ವದ ಮತ್ಸರದಿಂದ ಜ್ಞಾನಿಗಳಲ್ಲಿ ಕೂಡ ಪರಸ್ಪರರ ವಿಷಯವಾಗಿ ದ್ವೇಷ ಉತ್ಪನ್ನವಾಗುತ್ತದೆ ಆವಾಗ್ಗೆ ದೇಹಾಭಿಮಾನವು ಜೀವಕ್ಕೆ ಬಿಡಲಾರದಂತೆ ಮನೆ ಮಾಡಿಬಿಡುತ್ತದೆ ಜ್ಞಾನಾಭಿಮಾನದ ಕಥೆಯನ್ನು ಏನು ಹೇಳಲಿ? ವಿಶ್ವಾಮಿತ್ರನು, ಗಣಿಸಲಾರದಷ್ಟು ತಪಶ್ಚರ್ಯೆಯನ್ನು ವ್ಯಯಮಾಡಿ ಎರಡನೇ ಸೃಷ್ಟಿಯನ್ನು ರಚಿಸಲು ಉದ್ಯುಕ್ತನಾಗಿದ್ದನು, ಏಕೆಂದರೆ ಮನಸ್ಸಿನಲ್ಲಿ ಜ್ಞಾನದ ಅಭಿಮಾನವು, ದೂರ್ವಾಸನಿಗೂ ಜ್ಞಾನಾಭಿಮಾನವೇ, ಅದರಿಂದೇ ಅವನು ಅಂಬರೀಷ ರಾಜನನ್ನು ನಿರರ್ಥಕವಾಗಿ ಶಾಪಿಸಿದನು ಮತ್ತು ಜ್ಞಾನಾಭಿಮಾನಕ್ಕೆ ಅಂಜಿ ಅವನ (ಅಂಬರೀಷನ) ಶಾಪದ ಹತ್ತು ಗರ್ಭವಾಸವನ್ನು ನಾನು (ಕೃಷ್ಣನು) ಅನುಭವಿಸಿದೆನು! ಬ್ರಹ್ಮದೇವನಿಗೂ ಕೂಡ ಜ್ಞಾನಾಭಿಮಾನ ಉಂಟಾಯಿತು ಅದರಂತೆ ಅವನು ಹಸು ಮತ್ತು ಕರುಗಳನ್ನು ಒಡಿಸಿಕೊಂಡು ಹೋದನು ಮತ್ತು ಜ್ಞಾನಾಭಿಮಾನಕ್ಕೆ ಬೆದರಿ ನನಗೆ ಅವುಗಳ ರೂಪವನ್ನು ಧರಿಸಿ ಇರಬೇಕಾಯಿತು ಉದ್ಧವಾ! ಎಲ್ಲ ಅಭಿಮಾನಗಳಲ್ಲಿ ಜ್ಞಾನಾಭಿಮಾನವು ಬಹಳ ಕಠಿಣವಾಗಿದೆ ವಸಿಷ್ಠ ಮತ್ತು ವಿಶ್ವಾಮಿತ್ರರಂತೂ ಜ್ಞಾನಾಭಿಮಾನದಿಂದಲೇ ಕಲಹ ಮಾಡುತ್ತಿದ್ದರು ಇಂತಹ ಜ್ಞಾನಾಭಿಮಾನದ ಭೀತಿಯಿಂದಲೇ ನಾನು ಗೋಪಾಲಕನಾದೆನು ಯಾಜ್ಞಿಕ ಬ್ರಾಹ್ಮಣರಂತೂ ನನ್ನನ್ನು ಮೂರ್ಖನನ್ನಾಗಿ ಮಾಡಿದರು,ಏಕೆಂದರೆ ಅವರಿಗೆ ಕರ್ಮ ಮತ್ತು ಜ್ಞಾನದ ಅಭಿಮಾನವಿತ್ತು ನನ್ನದೇ (ಶ್ರೀಕೃಷ್ಣ) ಈ ರೀತಿ ಅವಸ್ಥೆ, ಆದರೆ ಇನ್ನಿತರರ ಪಾಡೇನು? ಜ್ಞಾನಾಭಿಮಾನದ ಬಲವತ್ತರವಾದ ಪಾಶವು, ಜ್ಞಾನಿಗಳನ್ನು, ಬಿಡುವದೇ ಇಲ್ಲ ಜ್ಞಾನಾಭಿಮಾನದ ಜಾತಿಯಾದರೂ ಎಂತಹದ ? ಅದು (ಜ್ಞಾನಾಭಿಮಾನವು) ಮೂರ್ಖರ ಸಮೀಪಕ್ಕೆ ಹೋಗುವದಿಲ್ಲ ಜ್ಞಾನಿಗಳಲ್ಲಿಯೇ ಕಲಹವನ್ನೆಬ್ಬಿಸಿ ಮತ್ಸರದಿಂದ ನಡೆಯಲು ಹಚ್ಚುತ್ತದೆ ತಾತ್ಪರ್ಯವೇನೆಂದರ ಯಾರಿಗೆ ನಿರ್ಭರ್ತ್ಸರವಾಗುವದಿದೆಯೋ, ಅವರು ಜ್ಞಾನಾಭಿಮಾನವನ್ನು ಬಿಟ್ಟುಬಿಡಬೇಕು ಇಲ್ಲವಾದರೆ ಅದು

(ಜ್ಞಾನಾಭಿಮಾನವು) ಜ್ಞಾನದ ಮತ್ಸರದಿಂದಲೇ ನಡೆಯಲು ಹಚ್ಚುತ್ತದೆ ಇನ್ನು ಮತ್ಸರದ ಉಪಕರಣೆಗಳನ್ನು ಕೇಳು ದೇಹದಲ್ಲಿ ದೇಹಾಭಿಮಾನವನ್ನು ಗಟ್ಟಿ ಮಾಡುತ್ತದೆ, ಅದೂ ಜ್ಞಾತೃತ್ವದ ಬಲದ ಮೇಲೆ ಅದರಲ್ಲಿಯೂ ಧನದ ಲಾಲನೆಯಿಂದ ಲೋಭದ ಸಮಾವೇಶವಾಗುತ್ತದೆ ಈ ಎಲ್ಲ ಸಲಕರಣೆಗಳು ಯಾವನಲ್ಲಿ ಇರುವವೋ ಅವನೇ ಸಮತ್ಸರ ದ್ವೇಷಿ ಇರುವನು ಶುದ್ಧ ಶಿಷ್ಯನಿಗೆ ಇದು ಸಹನವಾಗುವದಿಲ್ಲ ಅವನು ಮತ್ಸರವನ್ನೇ ಬಿಟ್ಟುಬಿಡುವನು ಮತ್ಸರದ ಜಾತಿಯು ಹೇಗಿದೆ ನೋಡಿರಿ! ಅದು ನಿಶ್ಚಿತವಾಗಿ ಜ್ಞಾನಿಗಳ ಹತ್ತಿರವೇ ಇರುತ್ತದೆ ಪಂಡಿತರಲ್ಲಿಯ ಮತ್ಸರವು ಬಹಳ ಬಲವತ್ತರವಾಗಿರುತ್ತದೆ ಅದು (ಮತ್ಸರ) ಅವರನ್ನು ಯಾವ ಜನ್ಮ ಬಿಡುವದಿಲ್ಲ ಪಂಡಿತರೆಂಬುವರೆಲ್ಲರೂ ಮತ್ಸರಿಯಾಗಿರುತ್ತಾರೆ ಅವರು ತೋರಿಕೆಗಾಗಿ ನಮ್ರತೆಯಿಂದಿರುತ್ತಾರೆ ಮತ್ತು ಬೆಲ್ಲದಂತೆ ಮಾತನಾಡುತ್ತಾರೆ ಆದರೆ ಅವರ ನುಡಿಗಳಲ್ಲಿ ಎಲ್ಲ ಮತ್ಸರವಿದ್ದು, ಅದು ಇನ್ನೊಬ್ಬರಿಗೆ ಪೀಡೆಯನ್ನುಂಟು ಮಾಡುವದಿರುತ್ತದೆ ಮತ್ಸರದಿಂದ ಪಂಡಿತರು ಸಿಟ್ಟಿಗೇಳುತ್ತಾರೆ ಮತ್ತು ಒಬ್ಬರ ಮೇಲೊಬ್ಬರು ತಪ್ಪು ಹೊರಿಸಿ ನಿಂದೆ ಮಾಡುತ್ತಾರ ಹೀಗೆ ಮತ್ಸರದ ಹಿಂಸೆಯು ಸತ್ ಶಿಷ್ಯನಿಗೆ ಎಂದಿಗೂ ಆಗುವದಿಲ್ಲ ಜ್ಞಾನಿಗಳಿಗೆ ಸಹ ಮತ್ಸರವು ಬಿಡುವದಿಲ್ಲವಾದರೆ, ಮತ್ತಿನ್ನಿತರ ಜನರ ಅವಸ್ಥೆಯೇನು? ಆದರೆ ಶಿಷ್ಯನಿದ್ದವನು ದ್ವೇಷದ ಮಾತನ್ನೇ ಬಿಟ್ಟು ಬಿಡುವನು ಮತ್ತು ಮತ್ಸರವನ್ನಂತೂ ಸಂಪೂರ್ಣವಾಗಿ ಕಡಿದು ಹಾಕುವನು, ಶಿಷ್ಯನು ನಿಜವಾಗಿಯೂ ಮತ್ಸರವನ್ನು ಬಿಟ್ಟೆ ಇರಬೇಕು ಆ ನಿರ್ಭತ್ಸರದ ರೀತಿಯನ್ನು ಹೇಳುವೆನು ಕೇಳು. ತನಗಾಗುವ ಲಾಭವನ್ನು ಯಾರಾದರೂ ಅಪಹರಿಸಿದರೂ, ಅವನು ತನ್ನ ಚಿತ್ತದಲ್ಲಿ ದ್ವೇಷಭಾವನೆಯನ್ನು ತರುವದಿಲ್ಲ ಎಲ್ಲ ಪ್ರಾಣಿ ಮಾತ್ರಗಳಲ್ಲಿ ಭಗವಂತನೇ ನೆಲೆಸಿರುವನೆಂಬ ಭಾವನೆಯಿಂದ ಇರುವದರಿಂದ, ಅವನಿಗೆ ದ್ವೇಷವು ಬರುವದೇ ಇಲ್ಲ ದುಷ್ಟ ಜನರು ಎಷ್ಟು ಬೇಕಾದಷ್ಟು ವಾಕ್ಪ್ರಹಾರದಿಂದ ಅವನನ್ನು ನೋಯಿಸಿದರೂ ಕೂಡ, ಅವನ ಮನಸ್ಸಿನಲ್ಲಿ ದ್ವೇಷವು ತಲೆಯೆತ್ತುವದಿಲ್ಲ ನಿಂದೆಯಲ್ಲಿ ತನ್ನ ಕಲ್ಯಾಣವನ್ನೇ ಕಾಣುತ್ತಾನೆ ಯಾರು ಯಾರು ಅವನ ನಿಂದೆ ಮಾಡುವರೋ ಅವರೆಲ್ಲರೂ ತನ್ನ ಹಿತವನ್ನು ಬಯಸುವ ಮಾತೆಯರೆಂದೇ ತಿಳಿಯುತ್ತಾನೆ 'ಅವರು ನನ್ನಲ್ಲಿಯ ಹೊಲಸೆಲ್ಲವನ್ನು ತೊಳೆದು ನನ್ನ ವೃತ್ತಿಯನ್ನು ಸ್ವಚ್ಛ ಮಾಡಿದರೆ'ಂಬುವ ತಿಳುವಳಿಕೆಯು ಅವನಿಗಿರುತ್ತದೆ ಇಂತಿಂತಹ ವಿಚಾರದಿಂದ ಅವನು ತನ್ನ ಮನಸ್ಸಿಗೆ ದ್ವೇಷದ ಸ್ಪರ್ಶವನ್ನೇ ಮಾಡಿಗೊಡುವದಿಲ್ಲ 'ನಿರ್ಭತ್ಸರ'ವೆಂದರೆ ಇದೇ ಎಂದು ಲಕ್ಷ್ಯದಲ್ಲಿಡು ಮತ್ತು ಇದೇ ಶಿಷ್ಯನ **'ಎರಡನೇ'** ಲಕ್ಷಣವಿರುತ್ತದೆ ಇದಾದ ನಂತರ ಮೂರನೆ ಲಕ್ಷಣವೇನೆಂದರೆ 'ದಕ್ಷತೆ' ಅದನ್ನೂ ಈಗ ನಿನಗೆ ಹೇಳುತ್ತೇನೆ ಅಂದರೆ ತನ್ನ ಹಿತವನ್ನು ಸಾಧ್ಯಮಾಡಿಕೊಳ್ಳುವದಕ್ಕಾಗಿ ಶಿಷ್ಯನು ಎಷ್ಟು ದಕ್ಷತೆ ವಹಿಸಬೇಕಾಗುವದೆಂಬುದು ನಿನ್ನ ಲಕ್ಷ್ಯದಲ್ಲಿ ಬರುವದು ಎಚ್ಚರ ಇಲ್ಲವೆ ಸಾವಧಾನತೆ ಅಂದರೆ

ಜಾಗ್ರತೆರೂಪ ಸೂರ್ಯನು ಉದಯಿಸಿದನೆಂದರೆ, ನಿದ್ರಾ ಮತ್ತು ತಂದ್ರಿಯ ಅಂಧಃಕಾರಗಳೆಲ್ಲವೂ ಇಲ್ಲದಂತಾಗಿ ಧಾರಣೆಯ ದಿವಸವು ಪ್ರಾರಂಭವಾಗುತ್ತದೆ (ಧಾರಣೆಯೆಂದರೆ ಗುರೂಪದಿಷ್ಟ ಮಾರ್ಗದ ಸಾಧನದ ಅಭ್ಯಾಸವನ್ನೂ ಏಕೋಪ್ರಕಾರವಾಗಿ ನಡೆಯಿಸುವದು ) ಮತ್ತು ಧೃತಿಯ ಮಧ್ಯಾನ್ಹವಾಗುತ್ತದೆ. ಇಂತಹ ದಿವಸವು ಉದಯವಾದ ಕೂಡಲೇ ಶಮದಮಾದಿಗಳು ತ್ವರೆಯಿಂದ ಭಕ್ತಿಯ ಮಾರ್ಗವನ್ನವಲಂಬಿಸುತ್ತವೆ ಎಲ್ಲಿಯೂ ಒಂದು ಕ್ಷಣ ಕೂಡ ನಿಲ್ಲುವದಿಲ್ಲ ಅಲ್ಲಿ ಹೆಜ್ಜೆ ಹೆಜ್ಜೆಗೂ ನಿಜಬೋಧದ ಅರವಟ್ಟಿಗೆಗಳನ್ನಿಟ್ಟಿರುತ್ತಾರೆ ಅಲ್ಲಿ ಶಾಂತಸ್ವರ ನೀರಡಿಕೆಯಷ್ಟೇ ಹಿಂಗುತ್ತದೆಯೆಂತಲ್ಲಾ, ಆದರೆ ನೀರಿನ ನೀರಡಿಕೆಯೇ ಇಲ್ಲದಂತಾಗುತ್ತದೆ. ಈ ಮಾರ್ಗವನ್ನು ಕ್ರಮಿಸುತ್ತಿರುವಾಗ್ಗೆ, ಆ ಊರಿನ ಸಂತರು ಭೆಟ್ಟಿಯಾಗಿ ಅವರು 'ಸೋಽಹಂ' (ಬ್ರಹ್ಮನು ನಾನೇ) ಎಂಬ ಭಾವನೆಯಿಂದ ಒಂದುಗೂಡಿದರೆಂದರೆ, ಮುಂದೆ ಹಾದಿಯನ್ನು ತಪ್ಪಿಸಿಕೊಳ್ಳುವ ಭಯವೇ ಉಳಿಯುವದಿಲ್ಲ ಅವರು ನೇರವಾಗಿ ನಿಜವಾದ ದಾರಿಯನ್ನು ಹಿಡಿಯುತ್ತಾರೆ ಹೇ ಸುಜಾಣ ಉದ್ಧವಾ! ಕೇಳು ಆಲಸ್ಯ ಇಲ್ಲವೆ ವಿಲಂಬ ಇವೆರಡೂ ಮನಸ್ಸಿಗೆ ಸ್ಪರ್ಶ ಮಾಡದಿರುವದೇ 'ದಕ್ಷತೆ' ಎಂಬುವ ಶಿಷ್ಯನ **'ಮೂರನೇ'** ಲಕ್ಷಣವಿರುತ್ತದೆ ಅವನು, ಮುಂಚಿತವಾಗಿದ್ದ ತನ್ನ ಹತ್ತಿರವಿದ್ದ ಹಳೆಯ ಸಂಗ್ರಹದ ಮೇಲಿನ ಮಮತ್ವವನ್ನು ಬಿಟ್ಟುಬಿಡುತ್ತಾನೆ ಮತ್ತು ಆತ್ಮಜ್ಞಾನದ ಅನುಭವವಿದ್ದ ಕಾರಣ, ಅದನ್ನು ಬಿಟ್ಟ ಬಗ್ಗೆ ಪುನಃ ಎಂದಿಗೂ ದುಃಖಪಡುವದಿಲ್ಲ ದೇಹದಲ್ಲಿಯ ಅಹಂತೆಯನ್ನು ದೃಢ ಮಾಡಿದರೆ, ದೇಹಕ್ಕೆ ಸಂಬಂಧಿಸಿದವರ ಬಗ್ಗೆ ಮಮತೆಯುಂಟಾಗುತ್ತದ ದೇಹಾಭಿಮಾನವೇ ಚಿತ್ತಕ್ಕೆ ಸ್ಪರ್ಶ ಮಾಡದಿದ್ದರೆ, ಮಮತೆಯು ಕೂಡಲೇ ಇಲ್ಲದಂತಾಗುತ್ತದೆ ದೇಹವು ಇದೊಂದು ಮಲಮೂತ್ರದ ಮೂಟೆ ಅಥವಾ ಗುಂಡಿ ಇದ್ದು ನಾಶಹೊಂದುವದಿದೆಯೆಂಬುದು ಕಣ್ಣಿಗೆ ಕಾಣಿಸುತ್ತಲೇ ಇದೆ, ಅದಕ್ಕಾಗಿ ಅದರ ಮೇಲಿನ ದೇಹಬುದ್ಧಿ ಅಂದರೆ ಅಹಂಕಾರವು ಲೋಪವಾಗಿ ಆ ಜಾಗೆಯಲ್ಲಿ 'ಸೋಽಹಂ ಬುದ್ಧಿ ಅಂದರೆ ನಾನೇ ಬ್ರಹ್ಮ' ಎಂಬುವ ಭಾವನೆಯು ದೃಢವಾಗಿ ಹೋಗುತ್ತದೆ ಸೋಽಹಂ ಭಾವನೆಯು ದೃಢವಾಗಿ ಬೆಳೆದುದರಿಂದ ಅಹಂಕಾರ ಮತ್ತು ಮಮತ್ವ ಭಾವನೆಯನ್ನು ಅವನು ಬಿಟ್ಟಿರುತ್ತಾನೆ ಇದೇ ಶಿಷ್ಯನ ಅಂಗಭೂತವಾದ 'ನಿರ್ಮಮತೆ' ಎಂಬ ಶಿಷ್ಯನ **'ನಾಲ್ಕನೇ'** ಗುಣವಿರುತ್ತದೆ ಶಿಷ್ಯನ ಕಲ್ಯಾಣವನ್ನು ಬಯಸುವ ಕರ್ಮದಲ್ಲಿ, ಗುರುವೇ ತಾಯಿ, ಗುರುವೇ ತಂದೆ, ಗುರುವೆ ನಿಜವಾಗಿಯೂ ಬಂಧು-ಬಳಗ ಮತ್ತು ಗುರುವೇ ಬಂಧು ಪ ಹೃದಯಸ್ಥನು ಇರುವನು ಗುರುವಿನ ಸೇವೆಯೇ ಅವನ ನಿತ್ಯಕರ್ಮ, ಗುರು ಸೇವೆಯೇ ಅವನ (ಶಿಷ್ಯನ) ಧರ್ಮ, ಗುರುವೇ ಆತ್ಮಾರಾಮನು, ಈ ಪ್ರಕಾರವಾಗಿ ಎಲ್ಲ ಆತ್ಮೀಯತೆಯ ಸನ್ಮಾನವು ಗುರುವಿಗೆ ಇರುತ್ತದೆ ಇದರಂತೆ ಸದ್ಗುರುವಿನಲ್ಲಿಯೇ ಎಲ್ಲ ಆಪ್ತೇಷ್ಟರಿರುವರೆಂದು ತಿಳಿಯಬೇಕು ಉದ್ಧವಾ! ಇದೇ ಸತ್-ಶಿಷ್ಯನ **'ಐದನೇ'** ಲಕ್ಷಣವಿರುತ್ತದೆ

ಚಿತ್ತ ಚಾಂಚಲ್ಯವು ಎಂದಿಗೂ ಆಗುವದಿಲ್ಲ ಎಲ್ಲ ರೀತಿಯಿಂದಲೂ ಯಾವಾಗಲೂ ಆತ್ಮನಲ್ಲಿಯೇ ನಿಶ್ಚಲತ್ವವನ್ನು ಸಾಧಿಸುತ್ತಾನೆ ಅಂಗ ಅಂದರೆ, ದೇಹವು ಚಂಚಲವಾದರೂ, ಅವನ ಚಿತ್ತವು ಗುರುಚರಣದಲ್ಲಿ ಪೂರ್ಣ ನಿಶ್ಚಲವಾಗಿರುತ್ತದೆ ವಿಕ್ಷೇಪದ ಪ್ರಸಂಗಗಳೆಷ್ಟೇ ಬಂದು ದೇಹದ ಮೇಲೆ ಅಪ್ಪಳಿಸಿದರೂ ಕೂಡ ಅವನ ವೃತ್ತಿಯು ಗುರುಚರಣದಲ್ಲಿ ಗಾಢವಾಗಿರುತ್ತದೆ ದೇಹದ ವ್ಯವಹಾರವು ನಡೆದಿದ್ದರೂ ಅವನ ಹೃದಯದಲ್ಲಿ ಕೋಲಾಹಲವೆಂಬುವದಿರುವದಿಲ್ಲ ಗುರುಚರಣದಲ್ಲಿ ಯಾವನು ದೃಢವಾಗಿ ಅಂಟಿಕೊಂಡಿರುವನೋ, ಅವನೇ ನಿಜವಾದ ಪರಮಾರ್ಥವನ್ನು ಸಾಧಿಸುವ ಶಿಷ್ಯನಿರುವನು ಯಾವನ ಹೃದಯದಲ್ಲಿ ಚಂಚಲತೆಯು ಇರುವದೋ ಅವನು ಸ್ವತಃ ಕಲ್ಯಾಣವನ್ನು ಸಾಧ್ಯಮಾಡುವ ಶಿಷ್ಯನೇ ಅಲ್ಲ ಯಾವನ ಹೃದಯ ನಿಶ್ಚಲತೆಯಿರುವದೋ, ಅವನೇ ಪರಮಾರ್ಥದ ಸಾಧಕನಿರುವನು ಈ ಪ್ರಕಾರವಾಗಿ ನಿಶ್ಚಲತೆಯನ್ನು ಅವಗತ ಮಾಡಿಕೊಂಡು ಯಾವನು ತನ್ನ ಸ್ವತಃ ಕಲ್ಯಾಣವನ್ನು ಬಯಸುವನೋ, ಅವನೇ ಗುರೂಪದೇಶದಿಂದ ಅರ್ಧಕ್ಷಣದಲ್ಲಿ ಪರಮಾರ್ಥಕ್ಕೆ ಯೋಗ್ಯನಾಗುತ್ತಾನೆ ಯಾವ ಪ್ರಕಾರವಾಗಿ ಒಂದು ಜ್ಯೋತಿಯಿಂದ ಇನ್ನೊಂದು ಜ್ಯೋತಿಯನ್ನು ಹಚ್ಚಿದಾಗ್ಗ, ಅದು ಹಚ್ಚಿದ ತಕ್ಷಣ ಅದರಂತೆ (ಮೊದಲಿನ ಜ್ಯೋತಿಯಂತೆ) ಆಗಿ ಬಿಡುತ್ತದೆ ಅದರಂತೆ ನಿಶ್ಚಲ ವೃತ್ತಿಯ ಸಾಧಕನಿಗ ಗುರುವಿನ ಭೆಟ್ಟಿಯಾದಾಗಲೇ ತತ್ಕಾಲ ಅವನು ತದ್ರೂಪನಾಗುತ್ತಾನೆ ತಾತ್ಪರ್ಯವೇನೆಂದರೆ ಅಂತಃಕರಣದಲ್ಲಿಯ ನಿಶ್ಚಲತನವೇ ಶಿಷ್ಯನ ಶ್ರೇಷ್ಠ ಲಕ್ಷಣವಿರುತ್ತದೆ ಮತ್ತು ಇದೇ ಶಿಷ್ಯನ ಆರನೇ ಗುಣವೆಂಬುದು ಲಕ್ಷ್ಯದಲ್ಲಿಡು ಇದರಿಂದಲೇ ಷಡ್ವಿಕಾರಗಳು ನಾಶವಾಗುತ್ತವೆ ಷಡ್ವಿಕಾರಗಳು ದೇಹದಲ್ಲಿರುತ್ತವೆ ಆದರೆ ಶಿಷ್ಯನು ದೇಹಬುದ್ಧಿಯನ್ನು ಸ್ಪರ್ಶಿಸುವದಿಲ್ಲ ಗುರೂಪದೇಶದಂತೆ ಮಾರ್ಗಕ್ರಮಣ ಮಾಡುತ್ತಿರುವದರಿಂದ ಅವನಲ್ಲಿಯ ವಿಕಾರಗಳೂ ಇಲ್ಲದಂತಾಗುತ್ತವೆ

ಈ ಪ್ರಕಾರವಾಗಿ ನಿಶ್ಚಲತೆಯನ್ನು ಸಾಧ್ಯ ಮಾಡಿಕೊಂಡು, ಅರ್ಥಜಿಜ್ಞಾಸೆಯುಳ್ಳವನು, ಯಾವನು ಪರಮಾರ್ಥವನ್ನು ಸಾಧಿಸಲು ಸಿದ್ಧನಾಗುವನೋ, ಅವನು ಗುರುಚರಣದ ಭಜನಯನ್ನು ಮಾಡಲಾರಂಭಿಸುತ್ತಾನ ಯಾವನಿಗೆ ಅರ್ಥದ ಪಿಪಾಸಿಯೇಯಿಲ್ಲವೋ ಅವನು ಗುರುವಿನ ಭಜನೆಗೆ ಸಿದ್ಧನಾಗಲಾರನು ಮತ್ತು ಒಂದು ವೇಳೆ ಭಜನೆಯನ್ನು ಮಾಡಿದರೆ ಅವನು ಅದುತನ್ನ ವಿಷಯೇಚ್ಛೆಯ ಅಭಿಲಾಷದಿಂದಲೇ ಮಾಡುವನು ವಿಷಯದ ಸ್ವಾರ್ಥವನ್ನು ಬಿಟ್ಟು, ಸಂಪೂರ್ಣವಾಗಿ ತತ್ವದ ಅರ್ಥವನ್ನು ತಿಳಿದುಕೊಳ್ಳುವದರ ಸಲುವಾಗಿ ಪರಮಾರ್ಥದ ಭಜನೆಯನ್ನು ಮಾಡುವದಕ್ಕೇನೇ 'ಜಿಜ್ಞಾಸತಾ' ಎಂಬ ಹೆಸರಿದೆ ಹೀಗೆ ತತ್ವವನ್ನು ತಿಳಿದುಕೊಳ್ಳುವದಕ್ಕೋಸ್ಕರ ಪರಮಾರ್ಥದ ಅಭಿರುಚಿಯನ್ನು ಅವನು ಬೆಳೆಯಿಸುತ್ತಲೇ ಇರುತ್ತಾನೆ ಇದರಂತೆ ಸ್ವತಃ ಕಲ್ಯಾಣದ ಅಭಿಲಾಷಯಿಂದ ಅವನ ಚಿತ್ತಕ್ಕೇ ಒಂದು

ನಿಮಿಷ ಕೂಡ ವಿಶ್ರಾಂತಿಯಿರುವದಿಲ್ಲ ಪರಮಾರ್ಥದ ವಿಷಯವಾಗಿ ಅತೀವ ಪ್ರೀತಿ ಮತ್ತು 'ಉತ್ತರೋತ್ತರ ಬೆಳೆಯುವ ಆಸ್ಥೆ' ಇವು ಶಿಷ್ಯನ 'ಏಳನೇ' ಲಕ್ಷಣವಿರುತ್ತದೆ ಈ ಏಳನೇ ಲಕ್ಷಣವಾದ ಜಿಜ್ಞಾಸತೆಯ ಬಲದಿಂದಲೇ ಪರಮಾರ್ಥದ ಅಂಗಳದಲ್ಲಿ ಕಾಲಿಡಲು ಯೋಗ್ಯರಾದೆವು ಇರಲಿ ಸದ್ಗುರುವು ಅನೇಕ ಜನರ ನೆರಳಾಗಿದ್ದಾನೆ, ಶಿಷ್ಯರಿಗಂತೂ ತಾಯಿಯೇ ಆಗಿದ್ದಾನೆ ಅವನನ್ನು ಯಾರು ದ್ವೇಷಿಸುವರೋ ಅವರ ಆತ್ಮಪ್ರಾಪ್ತಿಯು ದೂರಾಯಿತೆಂದು ತಿಳಿಯಬೇಕು ಆದ್ದರಿಂದ ಯಾರು ಯಾರು ಗುರುವಿನ ಅಂಕಿತ ಅಂದರೆ ಅನುಗ್ರಹ ಪಡೆದವರಿರುವರೋ ಅವರೆಲ್ಲರನ್ನೂ ಅವನು ಗುರುಗಳಂತೆಯೇ ತಿಳಿಯುತ್ತಾನೆ ಅವನ ಚಿತ್ತವು ದ್ವೇಷವನ್ನು ನೆನೆಯುವದೇ ಇಲ್ಲ ಅವನು ಎಲ್ಲರ ಜತೆಗೆ ಅತಿಶಯ ನಮ್ರತೆಯಿಂದಲೇ ನಡೆದುಕೊಳ್ಳುತ್ತಾನೆ ಇದರ ವಿರುದ್ಧವಾಗಿ ಯಾವನಾದರೊಬ್ಬ ಗುರುಬಂಧು ಕನಿಷ್ಠ ಹಾಗೂ ಬಡವನಾಗಿದ್ದು, ಅವನಲ್ಲಿ ಒಳ್ಳೆಯ ಗುಣಗಳಿದ್ದರೂ ಕೂಡ ಅವುಗಳನ್ನು ತಿಳಿದು ತಿಳಿದೂ ಮನ್ನಿಸುವದಿಲ್ಲ ಅವನ ಮೇಲೆ ಸುಳ್ಳು ಆರೋಪವನ್ನು ಮಾಡುವದು (ಇದು ಕುಶಿಷ್ಯನ ಲಕ್ಷಣವು) ಬೇರೆಯವರ ಒಳ್ಳೆಯ ಗುಣಕ್ಕೆ ಸುಳ್ಳು ಆರೋಪವನ್ನು ಹೊರಿಸಿ, ಅವನ ಜ್ಞಾನವು ಸುಳ್ಳಿದೆಯೆಂಬುವದಕ್ಕೆ 'ಅಸೂಯೆ' ಅನ್ನುತ್ತಾರೆ ಪ್ರತ್ಯಕ್ಷ ಭೆಟ್ಟಿಯಾದಾಗ್ಗೆ (ಅವನ) ಮೋರೆಯ ಮುಂದೆ ಅವನ ಗುಣಗಾನವನ್ನು ಮಾಡುವದು, ಹೊಗಳುವದು ಹಾಗೂ ನಮ್ರತೆಯಿಂದ ಅವನಿಗೆ ನಮಸ್ಕರಿಸುವದು ಆದರೆ ಹಿಂದಿನಿಂದ ಅವನನ್ನು ಹೀಯಾಳಿಸುವದು ಅಂದರೆ ನಿಂದೆ ಮಾಡುವದು ಇವುಗಳೆಲ್ಲವಕ್ಕೆ 'ಅಸೂಯೆ' ಎಂಬ ಹೆಸರಿದೆ ಸತ್‌ಶಿಷ್ಯನ ನಡುವಳಿಕೆಯು ಈ ವಿಷಯಗಳಲ್ಲಿ ಅತ್ಯಂತ ಶುದ್ಧವಿರುತ್ತದ ಅವನು ತನಗೆ ಅಸೂಯೆಯ ಮಲೀನತೆಯ ಸ್ಪರ್ಶವಾಗಲು ಕೊಡುವದಿಲ್ಲ ಉತ್ತಮನಿರಲಿ, ಮಧ್ಯಮನಿರಲಿ ಇಲ್ಲವೆ ಅತೀವ ಪ್ರಾಕೃತ ಅಂದರೆ ಸಾಮಾನ್ಯನಿರಲಿ ಅವರೆಲ್ಲರಿಗೂ ಅವನು ನಮಸ್ಕರಿಸುತ್ತಾನೆ ಪೀಡಿಸುವದು ಅವನಿಗೆ ಗೊತ್ತೇ ಇರುವದಿಲ್ಲ ಗುರುವು ಎಲ್ಲೆಡೆಯಲ್ಲಿಯೂ ಬ್ರಹ್ಮಭಾವನೆಯನ್ನಿಡಬೇಕೆಂದು ಕಲಿಸಿರುತ್ತಾನೆ ಅದರ ಮೇಲೆ ಸತತವಾಗಿ ಗಮನವಿಟ್ಟು ಅವನು ಎಲ್ಲರಿಗೂ ಸಮತ್ವ ಭಾವನೆಯಿಂದ ನಮಸ್ಕರಿಸುತ್ತಾನೆ ಪೀಡಿಸುವದು ಅವನಿಗೆ ಯಾವಾಗಲೂ ಗೊತ್ತೇ ಇರುವದಿಲ್ಲ ಇದರಂತೆ ಹೇ ಉದ್ಧವಾ! ಯಾವ ಬೇಕಾದ ಪ್ರಾಣಿಮಾತ್ರಗಳಿಗೆ, ಪೀಡೆಯನ್ನುಂಟುಮಾಡದಿರುವದೇ ಶಿಷ್ಯನ 'ಅನಸೂಯೆ' ಎಂಬ ಹೆಸರಿನ 'ಎಂಟನೆ' ಗುಣವಿರುತ್ತದೆ ಈ ಎಂಟು ಶ್ರೇಷ್ಠ ಮಣಿಯ ಮಾಲೆಯು ಯಾವನ ಹೃದಯದಲ್ಲಿ ಸತತವಾಗಿ ಶೋಭಿಸುವದೋ ಅವನೆ ಸದ್ಗುರುವಿನ ಸಾನ್ನಿಧ್ಯಕ್ಕೆ ಮುಟ್ಟುತ್ತಾನೆ ಆ ಭೆಟ್ಟಿಯ ವೈಭವವನ್ನೇನು ಹೇಳಲಿ! ಇನ್ನು ಮುಂದೆ ಒಂಬತ್ತನೆ ಲಕ್ಷಣವು ಒಂದು ಹೊಸ ಪ್ರಕಾರವೇ ಆಗಿದೆ ಅವನು

ಅವಶ್ಯಕತೆಯಿಲ್ಲದ ಮಾತುಗಳನ್ನಾಡುವದನ್ನು ಬಿಟ್ಟು, ನಿಜ ಮತ್ತು ಪವಿತ್ರ ವಾದ ಭಾಷಣವನ್ನು ಮಾಡುತ್ತಾನೆ ಅವನು ಸದ್ಗುರುವಿಗೆ ನಮ್ರತೆಯಿಂದ ಮೃದು ಶಬ್ದಗಳಿಂದ ಪ್ರಶ್ನೆ ಮಾಡುತ್ತಾನೆ ಮತ್ತು ಗುರುವಚನವು ಸತ್ಯದಲ್ಲಿಯ ಸತ್ಯವಿದೆ ಯೆಂದು ಭಕ್ತಿಪೂರ್ವಕವಾಗಿ ತಿಳಿಯುತ್ತಾನೆ ಅನೇಕ ತರಹದ ಯುಕ್ತಿ ಪ್ರಯುಕ್ತಿ ಗಳನ್ನು ಮಾಡುವದು, ಇನ್ನಿತರ ಪ್ರಕಾರದ ಮತ ಮತಾಂತರವನ್ನು ಮಂಡಿಸಿ ಹುಚ್ಚುಚ್ಚಾಗಿ ಕುಣಿದಾಡುವದು, ಪಾಖಂಡಿ ಮತದ ಸಹಾಯದಿಂದ ವಾದವಿವಾದದ ಬಂಡನ್ನೆಬ್ಬಿಸುವದು, ಸಾಧಕ ಬಾಧಕ ಯುಕ್ತಿಯ ಸಲಹೆಯಿಂದ ಶಬ್ದಪ್ರಯೋಗ ಮಾಡುವದು ಮತ್ತು ತನ್ನ ಶ್ರೇಷ್ಠತ್ವದ ಬಡಿವಾರ ಮಾಡುವದು ಈ ಎಲ್ಲ ವಿಷಯ ಗಳು ಶಿಷ್ಯನ ಮನಸ್ಸಿನಲ್ಲಿ ಕೂಡ ಬರುವದಿಲ್ಲ ಸದ್ಗುರುವಿನ ಮುಂದೆ ಮಾತನಾಡುವ ದೆಂದರೆ ದೊಡ್ಡ ಪಾಪವನ್ನೇ ಮಾಡಿದ ಹಾಗಾಗುತ್ತದೆಂದು ತಿಳಿದು ಅವನು ನಿರರ್ಥಕವಾಗಿ ಬಡಬಡಿಸುವದಿಲ್ಲ ಮತ್ತು ಸುಳ್ಳು ವಾದವನ್ನೂ ಹಾಕುವದಿಲ್ಲ ಶಿಷ್ಯನ ವಾಣಿಯು ಹೇಗಿರುತ್ತದೆ? ಅಂದರೆ ಪರಿಪಕ್ವವಾದ ವಾಣಿಯಲ್ಲಿಯ ಅಮೃತಮಯ ವಾಣಿ ಇರುತ್ತದೆ ಅವನು ಪ್ರೇಮರಸದಿಂದ ಯುಕ್ತವಾದ ಶಬ್ದಗಳಿಂದ ಪ್ರಶ್ನೆಗಳನ್ನು ಏಕಾಂತದಲ್ಲಿ ಮಾಡುತ್ತಿರುತ್ತಾನೆ ಬಾಷ್ಕಳ ವ ತುಂಟು ವಾದದ ಹುಳಿ ಮತ್ತು ಜಿಗಿಯಾದ ಹಣ್ಣುಗಳು ದೇಟು ಸಹಿತವಾಗಿ ಮುಂಚೆಯೇ ಉದರಿ ಬಿದ್ದಿರುತ್ತವೆ ಅವನು ನಿರ್ಮಲ ಮತ್ತು ಪರಿಪಕ್ವವಾದ ಭಾಷಣವನ್ನೇ ಮಾಡುತ್ತಾನೆ. ಕಪಟ ಮತ್ತು ಹೃದಯಭೇದಕ ಭಾಷಣ ಮಾಡುವದು ಅವನಿಗೆ ಗೊತ್ತಿರುವದಿಲ್ಲ ಇನ್ನೊಬ್ಬರ ಹೃದಯಕ್ಕೆ ನೋವನ್ನುಂಟು ಮಾಡುವದು ಅವನಿಗೆ ಹಿಡಿಸುವದಿಲ್ಲ ಮತ್ತು ಮಾತನಾಡುವದರಲ್ಲಿ ಇನ್ನೊಬ್ಬರ ಮನಸ್ಸು ನೋಯಿಸುವಂತೆ ಮತ್ತು ಅಧರ್ಮವಾಗುವಂತಹ ಮಾತುಗಳನ್ನು ಎಂದಿಗೂ ನುಡಿಯುವದಿಲ್ಲ ನಿರರ್ಥಕ ವಾಗಿ ಸಂಶಯವನ್ನು ಎಂದಿಗೂ ತೆಗೆದುಕೊಳ್ಳುವದಿಲ್ಲ ನಿಂದೆ ಮಾಡುವದರಲ್ಲಿ ಅವನು ಮೂಕನೇ ಆಗುತ್ತಾನೆ ಮಗು ಇರಲಿ, ಅಶಿಕ್ಷಿತನಿರಲಿ, ಇಲ್ಲವೆ ಪಂಡಿತ ನಿರಲಿ, ಅವರಲ್ಲಿ ಯಾರಿಗೂ ಮೋಸ ಮಾಡುವದು ಅವನಿಗೆ ತಿಳಿಯುತ್ತಿರುವ ದಿಲ್ಲ, ಅವನಿಗೆ ಕಠೋರವಾಗಿ ಮಾತನಾಡಲು ಬರುವದಿಲ್ಲ, ಇನ್ನೊಬ್ಬರನ್ನು ನಗೆಗೀಡು ಮಾಡುವದು ಗೊತ್ತಿಲ್ಲ, ಇಲ್ಲವೆ ಮಾತನಾಡುವಾಗ ಯಾವ ತರಹದ ಇಚ್ಛೆಯನ್ನು ಮಾಡುವದಿಲ್ಲ ಕೇವಲ ನಿರಿಚ್ಛ ಮತ್ತು ವೈರಾಗ್ಯದಿಂದ ಅವನು ಮಾತ ನಾಡುತ್ತಿರುತ್ತಾನೆ ಅವನಿಗೆ ಗಮಜಿನ ಮಾತುಗಳು ಗೊತ್ತಿರುವದಿಲ್ಲ, ಶಬ್ದ ಪ್ರಯೋಗದಿಂದ ಕುಚುಕತನವನ್ನು ಮಾಡಲು ಬರುವದಿಲ್ಲ ಹೆಚ್ಚಿಗೆ ಮಾತನಾಡು ವದು ಅವನಿಗೆ ಬೇಸರವಾಗುತ್ತದೆ, ಬಹಳವಾಗಿ ಅವನು ಮೌನವನ್ನೇ ಧರಿಸು ತ್ತಾನೆ ಅವನಿಗೆ ವಾದ–ವಿವಾದ ಇಲ್ಲವೆ ವಿತಂಡ ವಾದ ಸೇರುವದಿಲ್ಲ, ಸುಮ್ಮನೆ ಯಾರ ಹತ್ತಿರವೂ ಮಾತನಾಡುವದು ಸೇರುವದಿಲ್ಲ ಚೇಷ್ಟೆ ನಗೆಯಾಡುವದೂ

ಯಾರ ಸಂಗಡವೂ ಮಾಡುವದಿಲ್ಲ ಇಲ್ಲವೆ ಲೋಕವ್ಯವಹಾರದ ಶಬ್ದವನ್ನು ಮಾತನಾಡುವದಿಲ್ಲ ಅವನಿಗೆ ಡೊಂಕು ಮಾತನಾಡುವದು ಗೊತ್ತಿರುವದಿಲ್ಲ ಅವನ ಭಾಷಣದಲ್ಲಿ ಎಂದಿಗೂ ಮೋಸವಿರುವದಿಲ್ಲ ಅವನು ಯಾರಿಗೂ ಏನೂ ಬೇಡುವದಿಲ್ಲ ಮತ್ತು ಅವನು ಎಂದಿಗೂ ಸುಳ್ಳಾಡುವದಿಲ್ಲ ಮನಸ್ಸಿನಲ್ಲಿ ಯಾವನೊಬ್ಬನ ಕೆಲಸವನ್ನು ಅವನಿಗೆ ಮಾಡುವದಿರುವದಿಲ್ಲ ಮತ್ತು ಸುಮ್ಮನೆ ಹಾ, ಹಾ, ಮಾಡುವೆನೆಂಬ ಭರವಸೆಯನ್ನು ಕೊಟ್ಟು ಅವನಿಗೆ ಮಣ್ಣು ಮುಕ್ಕಿಸುವದು, ಇಂತಹ ಮಾತುಗಳನ್ನು ಆಡಲು ಅವನಿಗ ಬರುವದಿಲ್ಲ ಅವನು ಸತತವಾಗಿ ಹರಿನಾಮವನ್ನೇ ಜಪಿಸುತ್ತಿರುತ್ತಾನ ಪಶ್ಚಿಮ ದಿಕ್ಕಿನ ಬಾಗಿಲದ ಫಡಕುಗಳನ್ನು ತೆರೆದಿಟ್ಟರೆ ಅವು ಗಾಳಿಯಿಂದ ಹೇಗೆ ಖಟ ಖಟ ಬಾರಿಸುವವ್ರೋ, ಹಾಗೆಯೇ ಅವನು ವಟ ವಟ ಮಾಡಿ ನಿರರ್ಥಕವಾಗಿ ಬಾಯಿ ಬಿಡುವದಿಲ್ಲ ಶಬ್ದಬ್ರಹ್ಮನ ವಿಷಯವಾಗಿ ಸಂವಾದ ಮಾಡುವಾಗ, ವಿರುದ್ಧ ಪಕ್ಷದವನು ಅವನು ಯುಕ್ತಿಯನ್ನು ಮುರಿದನಂದರೆ ಸಿಟ್ಟು ಬರುತ್ತದೆ ಸಾಧಕನ ಹಾದಿಯಲ್ಲಿ ಇದೊಂದು ದೊಡ್ಡ ವಿಘ್ನವಿರುತ್ತದೆಯೆಂದು ತಿಳಿದು ಅವನು ಶಬ್ದದ ವಾದವಿವಾದ ಮಾಡುತ್ತ ಕೂಡುವದಿಲ್ಲ ಶಬ್ದಜ್ಞಾನದ ಬಡಿವಾರವನ್ನು ಪ್ರದರ್ಶಿಸುವದಿಲ್ಲ ಇಲ್ಲವೆ ಮೌನವನ್ನು ತಾಳುವದಿಲ್ಲ ಅವನು ತನ್ನ ಮಾತಿನ ಅಭಿಮಾನವನ್ನು ಒಡಿಯುವದಿಲ್ಲ, ಆದರೆ ನಿರಂತರವಾಗಿ ಸದ್ಗುರುವಿನನ್ನೇ ಜ್ಞಾಪಿಸುತ್ತಿರುತ್ತಾನ ಅವನು ತನ್ನ ಶಬ್ದದಿಂದ ಯಾರಿಗೂ ಉದ್ವೇಗವನ್ನುಂಟು ಮಾಡುವದಿಲ್ಲ ಬೇಕೆಂತಲೇ ಮಾತನಾಡುವ ಪ್ರಯತ್ನವನ್ನು ಎಂದಿಗೂ ಮಾಡುವದಿಲ್ಲ, ಮಾತನಾಡುವಾಗ ಎಂದಿಗೂ ಆವೇಶ ತೋರಿಸುವದಿಲ್ಲ, ಉದ್ವೇಗವುಂಟಾಗದಂತಹ ಮಾತುಗಳನ್ನೇ ಅವನು ಮಾತನಾಡುತ್ತಾನೆ ಸತ್ಯ, ಮಾಧುರ್ಯ, ವ ಕೇಳುವಾಗ್ಗೆ ಆನಂದ ನೀಡುವ ಮತ್ತು ಎಲ್ಲರಿಗೂ ಹಿತವನ್ನುಂಟು ಮಾಡುವಂತಹ ಇಂಪಾದ ಹರಿಕಥೆಯನ್ನು ಅವನು ಹೇಳುತ್ತಾನೆ ಸದ್ಗುರುವಿನ ಪ್ರಾರ್ಥನೆಯನ್ನು ಮಾಡುವಾಗಲೂ ಅವನು ಹೆಚ್ಚಿಗೆ ಮಾತನಾಡುವದಿಲ್ಲ ಆತ್ಮಸುಖ ಪ್ರಾಪ್ತಿಯ ಸಾಧನವನ್ನು ಅವನು ಒಂದೇ ಶಬ್ದದಲ್ಲಿ ಕೇಳುತ್ತಾನೆ ಹೀಗ ಶಿಷ್ಯನು ಒಂಬತ್ತು ಲಕ್ಷಣಗಳಿರುತ್ತವೆ ಇವುಗಳು ನವಖಂಡ ವಸುಂಧರೆಯ ಆಭೂಷಣಗಳಿವೆ ಅವುಗಳನ್ನು ನಾರಾಯಣನು ಕೃಪೆ ಮಾಡಿ ಭಕ್ತರಿಗೆ ಕೊಟ್ಟಿದ್ದಾನೆ ಈ ನವರತ್ನದ ಸುಂದರವಾದ ಹಾರವನ್ನು ಯಾರು ಸದ್ಗುರುವಿನ ಕೊರಳಲ್ಲಿ ಹಾಕುವರೋ ಅವರು ತಕ್ಷಣ ಹಾಂ, ಹಾಂ, ಅನ್ನುವದರಲ್ಲಿ ಸಾಯುಜ್ಯ ಸಿಂಹಾಸನದ ಮೇಲೆ ಕೂಡಬಹುದು ಈ ನವರತ್ನದ ಪದಕವು ಯಾವ ಶಿಷ್ಯನ ಹೃದಯಕಮಲದ ಮೇಲೆ ಶೋಭಿಸುವದೋ, ಅವನೇ ಸರ್ವಪ್ರಕಾರವಾಗಿ ಸದ್ಗುರುವಿನ ನಿಜವಾದ ವಿಶ್ವಾಸಕ್ಕೆ ಪಾತ್ರನಿರುವನು ಈ ನವರತ್ನದ ಉತ್ತಮ ಗುಚ್ಛವನ್ನು ಯಾವನು

ಸದ್ಗುರುವಿನ ದರ್ಶನಕ್ಕಾಗಿ ತೆಗೆದುಕೊಂಡು ಹೋಗುವನೋ, ಅವನು ಸ್ವರಾಜ್ಯದ ಕಿರೀಟದ ಮೇಲಿನ ಮಹಾ ಮಣಿಯಾಗಿ ಲಕಲಕಿಸುವನು ಉದ್ಧವಾ! ಈಗ ನಿನಗೆ ಹೀಗೆ ಸಂಶಯವು ಬರಬಹುದು ಏನೆಂದರೆ "ಹೆಂಡರು ಮಕ್ಕಳು, ಧನಧಾನ್ಯದಿಂದ ಭರಿತನಾದ ಶಿಷ್ಯನಿಗೆ ಈ ಪ್ರಕಾರದ ನಿರ್ಲೋಭತೆಯು ಹೇಗೆ ಪ್ರಾಪ್ತವಾಗುವದು?"

## ಪ್ರಕರಣ ೧೨

ಕಟ್ಟಿಗೆಯು ಕಡಿಮೆ ಹೆಚ್ಚಿಗೆ ಇರುವದರ ಮೇಲೆ ಅದರ ಜಾಲಯು ಹೆಚ್ಚು ಕಡಿಮೆಯಾಗುತ್ತದೆ ಅದರಲ್ಲಿಯೂ ಒಂದು ಕಿಡಿಯು ಆಕಾಶದಲ್ಲಿ ಹಾರಿ ಹೋಗುತ್ತದೆ, ಆದರೆ ಆತ್ಮಸ್ವರೂಪದಲ್ಲಿ ಕಡಿಮೆ ಹೆಚ್ಚಿಗೆಯಾಗುವದಿಲ್ಲ ಆ ಮೇಲೆ ಅದರ ಅಂಶವು ಭಾಸಮಾನವಾಗುವದಕ್ಕೆ ವಿಲಂಬವೆಲ್ಲಿಯದು? ಯಾವುದರಿಂದ ಆತ್ಮಜ್ಞಾನವು ಉತ್ಪನ್ನವಾಗುವದೋ, ಅಂತಹ ಬುದ್ಧಿ ಉದ್ಧವನಲ್ಲಿತ್ತು ಆದ್ದರಿಂದಲೇ ಶ್ರೀಕೃಷ್ಣನು ವಿಶೇಷ ಪ್ರೀತಿಯಿಂದ ಅವನಿಗೆ 'ಮಹಾಮತೆ!' ಎಂದು ಸಂಬೋಧಿಸಿದನು ಹೀಗೆ ಅತಿಶಯ ಪ್ರೀತಿಯಿಂದ ಉದ್ಧವನನ್ನು ಕರೆದು (ಶ್ರೀಕೃಷ್ಣನು) ಅಂದನು 'ಕೇಳು, ನೀಟಾಗಿ ಲಕ್ಷ್ಯಕೊಡು ಈ ಶ್ಲೋಕದ ಅರ್ಥವು ಬಹಳ ಗಹನವಾಗಿದೆ ಇದರ ಧಾರಣೆಯನ್ನೇ ಹಿಡಿಯಬೇಕು ಹೀಗೆಂದು ಜಗಚೇರಿ ಶ್ರೀಕೃಷ್ಣನು ಉದ್ಧವನ ಬೆನ್ನು ಚಪ್ಪರಿಸಿದನು ಮತ್ತು ಅಂದನು ಈ ಅತೀವ ಗಹನದಲ್ಲಿಯ ಗಹನವಾದ ವಿಷಯವನ್ನು, ನಿನ್ನ ಮೇಲೆ ನನ್ನ ಕೃಪೆಯಿರುವದರಿಂದಲೇ ನಿನಗೆ ನಾನು ಹೇಳುತ್ತೇನೆ ಬೆನ್ನು ಚಪ್ಪರಿಸುವ ನೆವದಿಂದ ತನ್ನ ಶಕ್ತಿಯನ್ನು ಅವನ ದೇಹದಲ್ಲಿ ಹಾಕಿದನು ಮತ್ತು ಅದರಿಂದ ಉದ್ಧವನ ಅಂತರಂಗದಲ್ಲಿ ಅದ್ವೈತಜ್ಞಾನದ ಲಕ್ಷಣವು ಪ್ರಕಟವಾಯಿತು ಉದ್ಧವಾ! ಯಾವ ರೀತಿಯಾಗಿ ಅನೇಕ ದೀಪಗಳಿದ್ದರೂ ಅದರಲ್ಲಿಯ ಪ್ರಕಾಶವು ಒಂದೇ ಇರುವದೋ, ಅದೇ ರೀತಿಯಾಗಿ ನಿಜವಾಗಿಯೂ ಮೂರೂ ಲೋಕಗಳಲ್ಲಿ, ಜೀವವು ಅಲ್ಲಿ ಇಲ್ಲಿ ಒಂದೇ ಇರುವದು ಎರಡು ದೀಪಗಳು (ಪ್ರಕಾಶ) ಒಂದಾಗುತ್ತವೆ ಅದರಂತೆ ಎರಡು ಪಣತಿಗಳು ಒಂದಾಗಲಾರವು ಭೇದವು ಅಚೇತನ (ಜಡ) ವಸ್ತುವಿನಲ್ಲಿ ಉಂಟಾಗುತ್ತದೆ ಮತ್ತು ಚೇತನ ವಸ್ತುವಿನಲ್ಲಿ ಐಕ್ಯವಿರುತ್ತದೆ ಚಂದನದ ಕಟ್ಟಿಗಯ ತುಂಡುಗಳು ಬಹಳವಿರುತ್ತವೆ ಆದರೆ ಅವುಗಳಲ್ಲಿಯ ಸುಗಂಧವು ಒಂದೇ ಇರುತ್ತದೆ ಅದರಂತೆ ಜೀವರೂಪದಿಂದ ನಾನು (ಶ್ರೀಕೃಷ್ಣ) ಅವಿನಾಶ ಪರಮಾತ್ಮಾ ಭಾಸಮಾನವಾಗುತ್ತೇನೆ 'ಈಗ ಜೀವರೂಪದಿಂದ, ನೀನು ಶ್ರೀಕೃಷ್ಣನೇ ಇರುವನೆಂಬ ಮಾತನ್ನು ನಿಜವೆಂದು ತಿಳಿದರೆ, ಸಂಸಾರ

ಪಾಶದ ಬಂಧನವು ನಿನಗೇ ಅನ್ವಯಿಸುತ್ತದೆ ' ಎಂದು ಅನ್ನಬೇಕಾಗುತ್ತದೆ ಹೀಗೆ ನೀನು ಒಂದು ವೇಳೆ ಕಲ್ಪಿಸಿದರೆ ಆ ಮಾತು ಎಂದಿಗೂ ಸಾಧ್ಯವಾಗಲಾರದು ಎಲ್ಲ ಪ್ರಕಾರದಿಂದ ಶರೀರವನ್ನು ಪ್ರಾಣವು ನಡಸುತ್ತದೆ ಆದರೆ ಅದಕ್ಕೆ ದೇಹದ ಯಾವ ಅವಸ್ಥೆಗಳು ತಗಲುವದಿಲ್ಲ ಸೂಕ್ಷ್ಮದೇಹದಲ್ಲಿ ಸ್ವತಃ ಸಿದ್ಧನಿರುವ ಜೀವವು, ನನ್ನ ಅಂಶದಿಂದ ಪ್ರತಿಬಿಂಬಿತವಾಗಿರುತ್ತದೆ ಅದಕ್ಕೆ ಬಂಧನವನ್ನು ಕಲ್ಪಿಸುವದು ಶುದ್ಧ ಭ್ರಮೆಯಾಗಿರುತ್ತದೆ ಗಡಿಗೆಯಲ್ಲಿಯ ಆಕಾಶವು ಅದರ ಆಕಾರದಂತೆ ವ್ಯಾಪಿಸಿರುತ್ತದೆ ಆದುದರಿಂದ ಅದಕ್ಕೆ 'ಘಟಾಕಾಶ'ವೆಂದು ಅನ್ನುತ್ತಾರೆ ಆದರೆ ಆ ಗಡಿಗೆಯು ಒಡೆದು ಹೋಯಿತೆಂದರೆ, ಅದರಲ್ಲಿಯ ಆಕಾಶವೇನೂ ನಾಶ ಹೊಂದುವದಿಲ್ಲ ಅದ ರಂತೆಯೇ ನಾನೂ (ಶ್ರೀಕೃಷ್ಣನು) ಜೀವಾತ್ಮನಲ್ಲಿ ನಾಶರಹಿತನಾಗಿರುವೆನು ನೀರಿನ ಗುಂಡಿಯಲ್ಲಿ ಸೂರ್ಯನ ಪ್ರತಿಬಿಂಬವು (ನೆರಳು) ಬಿದ್ದರೂ ಕೂಡ, ಸೂರ್ಯನೇನೂ ಆಕಾಶದಿಂದಿಳಿದು ಆ ಗುಂಡಿಯಲ್ಲಿ ಬಂದು ಬೀಳುವದಿಲ್ಲ ಅದರಂತೆ ನಾನೂ ಜೀವ ನಿಂದ ಬೇರೆಯಾಗಿರುವೆನು ಸೂರ್ಯನು ಗುಂಡಿಯಲ್ಲಿ ಪ್ರತಿಬಿಂಬಿತನಾದಂತೆ ಕಾಣು ತ್ತಾನೆ ಅದರಂತೆ ಸೂಕ್ಷ್ಮ ದೇಹದಲ್ಲಿ ನನ್ನ ಭಾಸವಾಗುತ್ತದೆ ಅಲ್ಲಿಯ ಸುಳ್ಳು ವಿಲಾಸದ ಈ ಬಂಧನವು ನನಗೆ (ಕೃಷ್ಣ) ಹೇಗೆ ಆಗುವದು? ಈಗ ಹೆಚ್ಚಿಗೆ ಮಾತ ನಾಡುವದು ಬೇಡ. ಪ್ರತಿಬಿಂಬದ ಹೆಸರು 'ಜೀವ' ಮತ್ತು ಮುಖ್ಯ ಬಿಂಬ ನಾನು 'ಶಿವ' ಇದೇ ಜೀವ ಮತ್ತು ಶಿವನ ಮುಖ್ಯವಾದ ಸ್ಪಷ್ಟೀಕರಣವಾಗಿದೆ. ಕೆರೆ, ಭಾವಿ, ಗುಂಡಿ ಮುಂತಾದವುಗಳಲ್ಲಿ ಸೂರ್ಯನ ಪ್ರತಿಬಿಂಬವು ಬೀಳುತ್ತದೆ ಆದರ ಆಕಾಶ ದಲ್ಲಿ ನೋಡಿದರೆ ಸೂರ್ಯನ ಅನೇಕ ಪ್ರತಿಮೆಗಳಿರುವದಿಲ್ಲ ಅದರಂತೆ ಒಂದಕ್ಕೆ ಬಹುವಿಧ ರೂಪವನ್ನು ಧರಿಸುವ ಜೀವತ್ವವು ಸುಳ್ಳಿರುವದೆಂಬುದನ್ನು ಲಕ್ಷದಲ್ಲಿಡು ಭಾಗವತದಲ್ಲಿಯ ಮೂಲ ತತ್ವ ಮತ್ತು ಜ್ಞಾನದ ಶುದ್ಧ ತತ್ವವೆಂದರೆ ಇದೇ ಇರುತ್ತದೆ ಗುಂಡಿಯಲ್ಲಿ ಪ್ರತಿಬಿಂಬವು ಬಿದ್ದಿತೆಂದರೆ ಅದು ಅಲ್ಲಾಡುತ್ತದೆ ಅದು ನಿಶ್ಚಲವಿದೆ ಅದು ಮಲೀನವಾಗಿದೆ ಇತ್ಯಾದಿಗಳು ನಿಜವಾಗಲೂ ಗುಂಡಿಗಳಲ್ಲಿಯ ನೀರಿನ ಗುಣ ಧರ್ಮವಿರುತ್ತದೆ ಆದರೆ ಅದನ್ನೇ ಪ್ರತಿಬಿಂಬದ ತಲೆಯ ಮೇಲೆ ಹೊರೆಸುತ್ತಾರೆ, ಆ ಪ್ರಕಾರವಾಗಿ ನೋಡಲು ಹೋದರೆ ಶಿವನಿಗೆ ಎಂದಿಗೂ ಬಾಧೆಯು ಇರುವದಿಲ್ಲ ಇದು ನಿಜವಾಗಲೂ ಅವಿದ್ಯೆಯ ಕೆಲಸವಿದ್ದು ಅದನ್ನು ಜೀವದ ತಲೆಯ ಮೇಲೆಯೇ ಹೊರೆಸುತ್ತಾರೆ ಆದ್ದರಿಂದ ಜೀವಭೇದವು ಸರ್ವಥಾ ಸುಳ್ಳಿರುವದು ಅದಕ್ಕೆ ವಿದ್ಯಾ ಮತ್ತು ಅವಿದ್ಯಾ ಇವುಗಳೇ ತಮ್ಮ ಕರ್ಮದಂತೆ ಮತ್ತು ಗುಣದಂತ ಮುಕ್ತ ಮತ್ತು ಬದ್ಧತೆಯನ್ನು ತೋರಿಸಿಕೊಡುತ್ತದೆ ಆ ಜೀವಭಾವನೆಗೆಯೇ ಸದ್ಯಕ್ಕೆ ನಿತ್ಯ-ಮುಕ್ತ ಮತ್ತು ನಿತ್ಯಬದ್ಧವೆಂಬ ಎರಡು ಸ್ಥಿತಿಗಳೇ ಇಲ್ಲಿ ವಿದ್ಯಾ ಮತ್ತು ಅವಿದ್ಯೆಯನ್ನು ತೋರಿಸಿಕೊಡಲು ಪ್ರಮಾಣವಾಗಿದೆ, ಯಾವ ಪ್ರಕಾರವಾಗಿ ನೀರಿನಲ್ಲಿ ಸೂರ್ಯನ ಪ್ರತಿಬಿಂಬವು ಬಿದ್ದಿತೆಂದರೆ, ನೀರಿನ ಅಲೆದಾಟ ಮತ್ತು ಸ್ಥಿರತೆಗಳೆರಡೂ ಆ

ಪ್ರತಿಬಿಂಬಕ್ಕೆ ಇರುವವು ಸೂರ್ಯನಿಗೆ ಅದರ ಎರವೇ ಇರುವದಿಲ್ಲ ಇಲ್ಲವೆ ಯಾವ ರೀತಿಯಾಗಿ ಕತ್ತಲೆಯಲ್ಲಿದ್ದ ಮಿಂಚು ಹುಳ ಕಲ್ಪಾಂತವಾದರೂ ಕೂಡ ಸೂರ್ಯನನ್ನು ಹೇಗೆ ನೋಡುವದಿಲ್ಲವೋ ಹಾಗೆಯೇ ಜೀವದ ಬದ್ಧ ಮುಕ್ತತೆಯು ಪರಮಾತ್ಮನಿಗೆ ಅನ್ವಯಿಸುವದಿಲ್ಲ ನೀರಿನಲ್ಲಿ ಆಕಾಶವು ಮುಳುಗಿದಂತೆ ಕಾಣುತ್ತದೆ ಆದರೆ ಅದರಿಂದ ಅದು ಹಸಿಯಾಗುವದಿಲ್ಲ ಅದರಂತೆ ಆತ್ಮಸ್ವರೂಪವು ಅವಿದ್ಯೆಯಿಂದ ಬೇರೆಯಾಗಿದ್ದು, ಅದು ಇದ್ದಂತೆಯೇ ಇರುತ್ತದೆ ಒಬ್ಬನು ಬದ್ಧ ಮತ್ತು ಒಬ್ಬನು ಮುಕ್ತ ಇದು ಜೀವ ಜೀವಗಳಲ್ಲಿಯೇ ಭೇದವಿರುತ್ತದೆ ಇದನ್ನೂ ನಾನು ಸಿದ್ಧಮಾಡಿ ತೋರಿಸುವೆನು ಲಕ್ಷ್ಯಕೊಟ್ಟು ಕೇಳು ಸಾವಿರ ಗಡಿಗೆಗಳಲ್ಲಿ ನೀರು ತುಂಬಿತೆಂದರೆ, ಆ ಎಲ್ಲ ಗಡಿಗೆಗಳಲ್ಲಿ ಸೂರ್ಯನು ಸಾವಿರ ರೂಪಗಳಿಂದ ಕಾಣಿಸುತ್ತಾನೆ ಆದರೆ ಒಂದು ಗಡಿಗೆಯ ಅವಸ್ಥೆಯು ಇನ್ನೊಂದಕ್ಕ ಇರುವದಿಲ್ಲ ಅದರಲ್ಲಿಯ ಒಂದು ಗಡಿಗೆಯು ಅಲ್ಲಾಡಹತ್ತಿತೆಂದರೆ,ನೀರಿನಿಂದ ಅದರಲ್ಲಿಯ ಪ್ರತಿಬಿಂಬವೂ ಕೂಡ ಅಲ್ಲಾಡ ಹತ್ತುವದು, ಆದರೆ ಇನ್ನೊಂಪರಲ್ಲಿ ಸ್ಥಿರವಾಗಿದ್ದ ಪ್ರತಿಬಿಂಬವು, ಇದರ (ಚಂಚಲ ಪ್ರತಿಬಿಂಬ) ಮೂಲಕ ಅಲ್ಲಾಡಲು ಪ್ರಾರಂಭಿಸುವದಿಲ್ಲ ಅದರಲ್ಲಿಯ ಯಾವದಾದ ರೊಂದು ಗಡಿಗೆಗೆ ದುರ್ದೈವದಿಂದ ಒಂದು ಸಣ್ಣ ಛಿದ್ರ ಬಿದ್ದಿತೆಂದರೆ, ಅದರಲ್ಲಿಯ ನೀರೆಲ್ಲವೂ ಸೋರಿಹೋಗಿ ಅದರಲ್ಲಿಯ ಪ್ರತಿಬಿಂಬವು ತನ್ನ ಮೂಲ ಸ್ವರೂಪವನ್ನು ಸೇರುತ್ತದೆ ಮತ್ತು ಇನ್ನಿತರ ಪ್ರತಿಬಿಂಬಗಳು ಹೇಗೆ ಇದ್ದ ಹಾಗೆಯೇ ಇರುತ್ತದೆ (ಉಳಿಯುತ್ತವೆ) ಅದರಂತೆ ಗುರುಕೃಪೆಯ ಉದಯವಾಯಿತಂದರೆ ಯಾವನ ಸೂಕ್ಷ್ಮ ದೇಹವು ಕರಗಿಹೋಗುವದೋ, ಅವನು ಪರಮಾತ್ಮನಲ್ಲಿ ಐಕ್ಯಹೊಂದು ತ್ತಾನೆ ಮತ್ತು ಇತರ ಪಾಮರ ಜನರು ದೇಹದ ಜೇಲಿನಲ್ಲಿ ಬಿದ್ದುಕೊಂಡಿರುತ್ತಾರೆ

## ಪ್ರಕರಣ ೧೩

ಅವನು ಬಹಳ ಪ್ರೀತಿಯಿಂದ ರಸಭರಿತವಾದ ಕಥೆಯನ್ನು ಹೇಳಹತ್ತಿದನೆಂದರೆ, ಇಲ್ಲವೆ ಲೋಕವ್ಯವಹಾರದ ಬಗ್ಗೆ ಏನಾದರೂ ಮಾತನಾಡುತ್ತಿದ್ದರೂ, ಅವನ ಸಮಾಧಿಸ್ಥಿತಿಯಲ್ಲಿ ಏನೂ ಅಂತರ ಬೀಳುವದಿಲ್ಲ, ಅವನು ಮಾತನಾಡುತ್ತಿದ್ದರೂ ಅವನ ಮೌನವು ಮುರಿಯುವದಿಲ್ಲ ಮೌನವನ್ನು ಮುರಿಯದೇ ಮಾತನಾಡುವದು ಇದು ಅಂತರಂಗದಲ್ಲಿಯ ಅನುಭವದ ಚಿಹ್ನವಾಗಿದೆ ಶಬ್ದದಲ್ಲಿಯ ನಿಃಶಬ್ದಗುಣವು ಜ್ಞಾನಿಗಳಿಗಷ್ಟೇ ತಿಳಿಯುತ್ತಿರುತ್ತದೆ ಗಂಡಹೆಂಡಿರು. ಜನರೆದುರಿನಲ್ಲಿ ಮಾತನಾಡದೆ ಮನೆಯಲ್ಲಿಯ ವ್ಯವಹಾರವನ್ನು ಮಾಡುತ್ತಿರುತ್ತಾರೆ ಆದರೆ ಅದೇನು ಅವರ ನಿಜ ವಾದ ಮೌನವಿರುತ್ತದೆಯೋ ಇಲ್ಲವೆ ಅತಿಶಯ ಪ್ರೇಮವಿರುತ್ತದೆಯೋ? ಅದರಂತೆ ಮುಕ್ತನು ಮಾತನಾಡುವ ರೀತಿಯಿರುತ್ತದೆ ಶಬ್ದಾರ್ಥದಲ್ಲಿಯೇ ಶಬ್ದದ ನಿಃಶಬ್ದತೆ

ಯುಂಟಾಗುತ್ತದೆ ಅವನು ಯಾವ ಅಕ್ಷರಗಳನ್ನು ಮುಖದಿಂದ ಉಚ್ಚರಿಸುವನೋ, ಅವುಗಳು ನಿಜವಾಗಲೂ ಅಕ್ಷರರೂಪವೇ ಇರುತ್ತವೆ ಅವನ ಸ್ವರವನ್ನು ಕೇಳಿದ ಕೂಡಲೆ ಮನಸ್ಸು ಆಶ್ಚರ್ಯಚಕಿತವಾಗುತ್ತದೆ ನಾನೊಬ್ಬ ಉತ್ತಮ ವಕ್ತಾ ಎಂಬುವ ಅಭಿಮಾನವೂ ಅವನಿಗಿರುವದಿಲ್ಲ, ಇಲ್ಲವೆ ಜನರ ಮನೋರಂಜನೆ ಮಾಡ ಬೇಕೆಂಬುವ ನೆನಪು ಕೂಡ ಅವನಿಗಿರುವದಿಲ್ಲ ನಿಃಶಬ್ದದಿಂದ ಶಬ್ದಗಳು ಹೊರಡುತ್ತಿ ರುತ್ತವೆ, ಆ ಶಬ್ದಗಳಲ್ಲಿಯೂ ನಿಃಶಬ್ದಸ್ವರೂಪವೇ ಇರುತ್ತದೆ. ಈ ಪ್ರಕಾರವಾಗಿ ಅವನ ನುಡಿಗಳಾಗುತ್ತಿರುವದರಿಂದ, ಅವನು ಮಾತನಾಡುತ್ತಿದ್ದರೂ ನಿಜವಾಗಲೂ ಮೌನಿಯಾಗಿರುತ್ತಾನೆ ನೀರಿನಲ್ಲಿ ತೆರೆಗಳು ಉದ್ಭವಿಸಿದರೂ, ನೀರೇ ಆ ತೆರೆಗಳ ಅಂಗ ಅಂದರೆ ಸ್ವರೂಪವಾಗಿರುತ್ತದೆ ಅದರಂತೆ ಎಲ್ಲ ಶಬ್ದಗಳು ನಿಃಶಬ್ದದೊಳಗಿಂದಲೇ ಇರುವದರಿಂದ ಶಬ್ದಗಳ ಎಲ್ಲ ಅಂಗವು ನಿಃಶಬ್ದವೇ ಇರುತ್ತದೆ ವಾಚ್ಯ ವಾಚಾ ವಾಚಕತಾ ಈ ತ್ರಿಪುಟಿಯನ್ನು ಬಿಟ್ಟು ಅವನು ಮಧುರ ಭಾಷಣ ಮಾಡುತ್ತಿರು ತ್ತಾನೆ ಇಲ್ಲವೆ ಅವನು ಹೇಗೆ ಬೇಕಾದ ಹಾಗೆ ಬಡಬಡಿಸಿದರೂ ಕೂಡ ಅವನ ಮೌನ ಭಂಗವಾಗುವದಿಲ್ಲ ಆಹಾ! ತಾನು ನಿಜವನ್ನೇ ನುಡಿಯಬೇಕೆಂಬುವ ನೆನಪು ಕೂಡ ಅವನಿಗಿರುವದಿಲ್ಲ, ಇಲ್ಲವೆ ಲೋಭದಿಂದ ಸುಳ್ಳು ಮಾತನಾಡಬೇಕೆಂದೂ ಮುಕ್ತನಿಗೆ ಅನಿಸುವದಿಲ್ಲ ಸತ್ಯ ಇಲ್ಲವ ಸುಳ್ಳು ಭಾಷಣವೆರಡನ್ನೂ ಅವನು ಪ್ರಾಶನ ಮಾಡಿರುತ್ತಾನೆ ಆದುದರಿಂದಲೇ ಬೇರೆ ಬೇರೆ ಭಾಷಣಗಳನ್ನು ಮಾಡಿದರೂ ಕೂಡ ಅವನು ಅವನ ಮೊದಲಿನ ಮೌನಸ್ವರೂಪದಿಂದ ಮೌನಿಯೇ ಆಗಿರುತ್ತಾನೆ. ಅವನು ಉಚ್ಚ ಸ್ವರದಲ್ಲಿ ಒದರಲಿ, ಇಲ್ಲವೆ ಸಿಂಹನಂತೆ ಗರ್ಜನೆ ಮಾಡಲಿ, ಅವನ ಶಬ್ದದಲ್ಲಿ ನಿಃಶಬ್ದತೆಯೇ ಇರುವದರಿಂದ, ಅವನ ಮೌನವಂತೂ ಮುರಿಯುವದೇ ಇಲ್ಲ. ಅವನು ನನ್ನನ್ನು ಸ್ತುತಿಸಲು ಪ್ರಾರಂಭಿಸಿದನೆಂದರೆ, ಅವನ ಆ ಹೊಗಳಿಕೆಯಲ್ಲಿ ನಾನೇ (ಕೃಷ್ಣ) ಇರುತ್ತೇನೆ, ಇಲ್ಲವೆ ಅವನು ಬಾಯಿಗೆ ಬಂದ ಹಾಗೆ ಬಡಬಡಿಸಿದರೂ ಅದರಲ್ಲಿಯೂ ಅವನಿಗೆ ನಾನೇ (ಕೃಷ್ಣ) ಕಾಣಿಸುತ್ತೇನ ಅವನಿಗೆ ಕಲಹ ಮಾಡುವ ವೇಳೆ ಬಂದರೆ, ಅವನು ಕಲಹವನ್ನು ಮಾಡುತ್ತಾನ, ಆದರ ಆ ಕಲಹದಲ್ಲಿಯೂ ಕೂಡ, ಹಿಂದು ಮುಂದು ಮತ್ತು ಎಲ್ಲೆಡೆಯಲ್ಲಿಯೂ ಅವನಿಗೆ ನಾನೇ (ಕೃಷ್ಣ) ಕಾಣಿಸುತ್ತಿರುವೆನು ಅವನ ಹುಚ್ಚು ಹುಚ್ಚಾದ ಇಲ್ಲವೆ ವ್ಯಂಗ್ಯಭಾಷಣವೂ ಕೂಡ ಶುದ್ಧ ಪರಬ್ರಹ್ಮವೇ ಇರುತ್ತದೆ ಅವನಿಗೂ ನನಗೂ ಇಬ್ಬರಿಗೂ ಭೇದವೇ ಇಲ್ಲದಿರು ವದರಿಂದ, ನಾವಿಬ್ಬರೂ ಯಾವಾಗಲೂ ಒಂದೇ ಸ್ಥಾನದಲ್ಲಿ ವಾಸ ಮಾಡುತ್ತೇವೆ ಅವನು ಯಾರಿಗಾದರೂ ಆಕಸ್ಮಿಕವಾಗಿ "ನಿನ್ನನ್ನು ದೇವರು ಉದ್ಧರಿಸುವನು ಅಂದರೆ ಪಾರುಮಾಡುವನು" ಎಂದರೆ ನಾನು (ಕೃಷ್ಣ) ಅವನನ್ನು ಹೆಗಲ ಮೇಲೆ ಕುಳ್ಳಿರಿಸಿ ಕೊಂಡು ಬ್ರಹ್ಮಸಾಕ್ಷಾತ್ಕಾರದವರೆಗೆ, ಒಯ್ದು ಮುಟ್ಟಿಸುವೆನು ಆದ ಕಾರಣ ನಾನು ಯಾವಾಗಲೂ ಅವನ ಆಜ್ಞೆಯಲ್ಲಿರುವೆನೆಂದು ತಿಳಿ. ನಾನು ಅವನ ನುಡಿಯನ್ನು

ಎಲ್ಲ ಕಾಲದಲ್ಲಿಯೂ ಎಲ್ಲ ರೀತಿಯಿಂದಲೂ ಪ್ರಮಾಣವೆಂದು ತಿಳಿಯುತ್ತೇನೆ ಈಗ 'ಅವನು' ಮತ್ತು 'ನಾನು' ಎಂಬುವ ಸಂಜ್ಞೆ ಬಾಹ್ಯಾಕಾರವಾಗಿ ಮಾತನಾಡುವ ರೂಢಿಯಾಗಿದೆಯಷ್ಟೆ, ಮತ್ತೇನಿಲ್ಲ ನಾನು ಅವನೇ, ಅವನು, ಈ ಗುರುತಿಲ್ಲಿಯ ನನ್ನ ಭಕ್ತನಿಗೆ, ಪೂರ್ಣ ತಿಳಿದಿರುತ್ತದೆ, ಅದಕ್ಕಾಗಿ ಅವನು ನನ್ನ ಜೀವದ ಜೀವ ಮತ್ತು ಪ್ರಾಣನಾಗಿರುವನು ಮತ್ತು ನಾನು ಕೂಡ ಅವನ ಆತ್ಮಜೀವನವಿರುವೆನು ನನಗೂ ಅವನಿಗೂ ಕಲ್ಪಾಂತದಲ್ಲಿಯೂ ಭೇದವಿಲ್ಲವೆಂಬುದನ್ನು ನೀನು (ಉದ್ಧವಾ) ಲಕ್ಷ್ಯದಲ್ಲಿಡು ತಾತ್ಪರ್ಯವೇನೆಂದರೆ, ಅವನು ಸರ್ವಸ್ವಿಯಾಗಿ ನನ್ನಲ್ಲಿರುತ್ತಾನೆ ಮತ್ತು ನಾನು ಅವನ ಒಳ ಹೊರಗೆ ಇರುವೆನು ಹೀಗೆ ಅಭಿನ್ನತೆಯಿಂದ ಅವನು ಸಂಸಾರದಲ್ಲಿ ಸುಖದಿಂದ ಇರುತ್ತಾನೆ ಅವನು ಮಾತನಾಡುವ ಮಾತನ್ನು ನಾನೇ ಆಡುತ್ತಿರುವೆನು ಈ ಎಲ್ಲ ಮುಕ್ತನ ಮಾತಿನ ಲಕ್ಷಣಗಳನ್ನು ನಾನು ವಿಸ್ತರಿಸಿದೆನು (ಇನ್ನೂ ಅವನ ಕೈಗಳ ಕ್ರಿಯೆಯನ್ನು ಹೇಳುತ್ತೇನೆ ) ಅವನು ಕೈಯಲ್ಲಿ ಏನಾದರೂ ತೆಗೆದುಕೊಳ್ಳಲು ಹೋದರೆ, ಆ ತೆಗೆದುಕೊಳ್ಳುವ ಕ್ರಿಯೆಯೇ ದೇವನಾಗುತ್ತಾನೆ ಇಲ್ಲವೆ ಯಾವುದಾದರೊಂದು ಸಾಮಾನು ಕೊಡಲು ಹೋದರೆ, ಆ ವಸ್ತು ಕೂಡ ತದ್ರೂಪವಾಗುತ್ತದೆ ಆವಾಗ್ಗೆ ದಾನ ಮತ್ತು ದಾನ ಮಾಡುವವನು ಹಾಗೂ ದಾನ ತೆಗೆದುಕೊಳ್ಳುವವನು, ಈ ಮೂರು ಕೃತಿಗಳನ್ನು ಅವನು ಭಿನ್ನ ಭಿನ್ನವಾಗಿ ನೋಡುವದಿಲ್ಲ ಈ ಪ್ರಕಾರವಾಗಿ ಕೈಗಳಿಂದ ಎಲ್ಲ ಕ್ರಿಯೆಗಳನ್ನು ಮಾಡಿ, ಏನೂ ಮಾಡದಿದ್ದವರ ಹಾಗೆ ಇರುತ್ತಾನೆ ಅವನ ಕೈಗಳು ಅವನ ಸ್ವತಃದ ಅನುಭವಕ್ಕನುಸರಿಸಿ ಏನೇನು ಕೆಲಸಗಳನ್ನು ಮಾಡುತ್ತವೆಯೋ ಅವೆಲ್ಲದರಲ್ಲಿ ಏನೂ ಮಾಡದೆ ಇದ್ದ ಸೂತ್ರದ ಮುದ್ರೆಯು ಸುಲಭವಾಗಿ ಮೂಡಿರುತ್ತದೆ ಅವನ ಕೈಯಲ್ಲಿ ಶಸ್ತ್ರಾಸ್ತ್ರ ಕೊಟ್ಟರೆ ಅದರ ವಿನಿಯೋಗ ಹೇಗೆ ಮಾಡುವದೆಂಬುವದು ಅವನಿಗೆ ತಿಳಿದಿರುತ್ತದೆ ಆದರೆ 'ನಾನು ಕರ್ತಾ ಪುರುಷನಿರುವೆನು' ಎಂಬುವ ಅಭಿಮಾನವು ಸ್ವಲ್ಪ ಕೂಡ ಅವನ ಮನಸ್ಸಿನಲ್ಲಿ ಬರುವದಿಲ್ಲ ಇಲ್ಲವೆ ಆಕಸ್ಮಿಕವಾಗಿ ವೇಳೆ ಬಂದರೆ ಅವನಿಗೆ ದ್ಯೂತ (ಪಗಡಿ) ಕೂಡ ಆಡಲು ಬರುತ್ತದೆ ಆದರೆ ಅದರಲ್ಲಿಯ ಸೋಲು ಇಲ್ಲವೆ ಗೆಲವು ಅವನ ಮನಸ್ಸಿಗೆ ನೆನಪು ಸಹಿತ ಆಗುವದಿಲ್ಲ ಬರೀ ಆಡಬೇಕೆಂದು ಆಡುತ್ತಾನೆ ಇಲ್ಲವೆ ಬ್ರಾಹ್ಮಣರ ಪೂಜ ಮಾಡುವ ಸಮಯ ಬಂದರೆ, ಅವನಿಗೆ ಅದನ್ನು ಭಕ್ತಿ ಭಾವನೆಯಿಂದ ಮಾಡುವದು ಗೊತ್ತಿರುತ್ತದೆ, ಆದರೆ ಬ್ರಾಹ್ಮಣನು ಪೂಜ ಮಾಡಿಸಿಕೊಳ್ಳುವವನು ಮತ್ತು ನಾನು ಪೂಜೆ ಮಾಡುವವನು ಎಂಬ ಭಿನ್ನ ಭಾವನೆಯನ್ನು ಮನಸ್ಸಿನಲ್ಲಿ ತಾರದೆ ಬ್ರಾಹ್ಮಣರ ಪೂಜೆಯನ್ನು ಮಾಡುತ್ತಾನೆ ಅವನಿಗೆ ಬಿಲ್ಲಿನ ದಾರವನ್ನು ಎಳೆದು ಬಾಣವನ್ನೂ ಬಿಡಲು ಬರುತ್ತದೆ, ಅವನು ಲಕ್ಷವನ್ನು ಲಕ್ಷಿಸಿ ಲಕ್ಷಭೇದವನ್ನು ಮಾಡುತ್ತಾನೆ ಆದರೆ ಅದರಿಂದ ತನ್ನ ಕೀರ್ತಿಯು ಬೆಳೆಯಲಿ ಎಂದು ಇಚ್ಛಿಸುವದಿಲ್ಲ ಅವನ ಕೈಯಿಂದ ಕರ್ಮವು ಹೇಗೆ ಹುಟ್ಟುತ್ತದೆ? ಅಂದರೆ

ಸಮುದ್ರದಲ್ಲಿ ತೆರೆಗಳು ಹೇಗೆ ಲೀಲೆಯಿಂದ ಅಲೆದಾಡುತ್ತವೆಯೋ ಹಾಗೆಯೇ ಅವನ ಕೈಯಿಂದ ತರತರಹದ ಕರ್ಮಗಳು ಆಗುತ್ತವೆ ಅದೂ ಅಲ್ಲದೆ ಅವನು ತನ್ನ ನಿಜ ರೂಪದಲ್ಲಿ ನಿಶ್ಚಲವಾಗಿಯೇ ಇರುತ್ತಾನೆ ಸೂರ್ಯನು ಹೇಗೆ ಮೃಗ ಜಲವನ್ನು ತುಂಬುವನೋ, ಹಾಗೆಯೇ ಅವನು ನಿರ್ವಿಕಾರದಲ್ಲಿಯೇ ತನ್ನ ವ್ಯವಹಾರವನ್ನು ಮಾಡುತ್ತಿರುವನು, ಆದರೆ ಅದರ ಬಗ್ಗೆ ಎಳ್ಳಷ್ಟೂ ಅಭಿಮಾನವನ್ನು ತಾಳುವದಿಲ್ಲ ಸೂರ್ಯಕಾಂತಮಣಿಯಿಂದ ಅಗ್ನಿಯು ಪ್ರದೀಪ್ತನಾಗುತ್ತದೆ ಆದರೆ ಆ ಕಾರ್ಯವನ್ನೇನು ಸೂರ್ಯನು ಮಾಡಿದನೆಂದು ಅನ್ನುತ್ತಾರೆಯೇ? ಅದರಂತೆ ಅವನ ಕೈಗಳಿಂದ ಏನೇನು ವ್ಯಾಪಾರಗಳು ಸಂಭವಿಸುವವೋ, ಅವೆಲ್ಲವನ್ನೂ ಅವನು ಮಾಡಿರುವದೇ ಇಲ್ಲ ಸೂರ್ಯಕಾಂತ ಮಣಿಯಿಂದ ಅಗ್ನಿಯನ್ನು ಉತ್ಪನ್ನ ಮಾಡಬೇಕೆಂಬುವದು ಸೂರ್ಯನ ಕನಸುಮನಸ್ಸಿನಲ್ಲಿ ಕೂಡ ಇರುವದಿಲ್ಲ, ಅದರಂತೆ ಮುಕ್ತನು ಎಲ್ಲ ಕಾರ್ಯಗಳನ್ನು ಮಾಡುವಾಗ ನಿರಭಿಮಾನಿಯಾಗಿರುವನು

## ಪ್ರಕರಣ ೧೪

ವೇದವನ್ನೋದಿ, ವೇದಶಾಸ್ತ್ರದ ಅರ್ಥವನ್ನು ಕಲಿತು ಬಹಳ ಪಂಡಿತನಾಗುವನು, ನಾಲಿಗೆಯ ಮೇಲೆ ಯಾವತ್ಕಾಲವೂ ನಾಲ್ಕೂ ವೇದಗಳು ಮೂರ್ತಿಮಂತ ವಾಗಿರುತ್ತವೆ ಸ್ವರಯುಕ್ತ ಸಂಹಿತಾ, ಪದಗಳು, ಕ್ರಮ, ಅರಣ, ಬ್ರಾಹ್ಮಣ, ಸೂತ್ರ, ನಿರುಕ್ತ, ಜಟಾಪಾಠ, ಧ್ವಜರಥ ಮುಂತಾದವುಗಳನ್ನು ಅನ್ನಲು ಬರುವದು. ಆಯುರ್ವೇದ, ಧನುರ್ವೇದ, ಗಾಯನಶಾಸ್ತ್ರದಲ್ಲಿಯ ಎಲ್ಲ ಭೇದಗಳನ್ನು ತಿಳಿಯು ವವನೂ, ಕವಿತ್ವ ನಾಟಕದಲ್ಲಿಯ ಶ್ರೇಷ್ಠ ಇಂಗಿತಜ್ಞ, ವೇದ ಹಾಗೂ ಉಪವೇದವನ್ನು ತಿಳಿಯುವವನೂ, ವ್ಯಾಕರಣದಲ್ಲಿ ಅತೀವ ಪ್ರವೀಣ, ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ತರ್ಕಶಾಸ್ತ್ರಗಳಲ್ಲಿ ಪಾರಂಗತನೂ, ವೈಶೇಷಿಕಶಾಸ್ತ್ರವೂ ಗೊತ್ತಿರುವದು, ಯಜ್ಞ ಮಾಡುವತನಕ ವಿಶೇಷ ಕರ್ಮಮೀಮಾಂಸಯನ್ನು ತಿಳಿಯುವವನೂ, ವೇದಾಂತ ಅರ್ಥ ವನ್ನು ಹೇಳುವದರಲ್ಲಿ ಎರಡನೇ ಬೃಹಸ್ಪತಿ ವಾರ್ತಿಕಾತನಕ ಶಾಸ್ತ್ರವೂ ತಿಳಿದಿರು ವದು ಪ್ರಸ್ಥಾನತ್ರಯಗಳು ಕೈಜೋಡಿಸಿಕೊಂಡು ಮುಂದೆ ನಿಂತಿವೆ ಶಿಲ್ಪಶಾಸ್ತ್ರದಲ್ಲಿ ಅತಿಶಯ ನಿಪುಣ, ಪಾಕಶಾಸ್ತ್ರದಲ್ಲಿ ಎತ್ತಿದಕೈ, ಉತ್ತಮ ರತ್ನಪರೀಕ್ಷಕ, ಹಾಗಯೇ ಅಶ್ವಪರೀಕ್ಷಕನೂ, ಆಗಮೋಕ್ತ ಮಂತ್ರದಲ್ಲ ಅವನ ಕೈ ಹಿಡಿಯುವವರು ಯಾರೂ ಇಲ್ಲ, ಶೈವದೀಕ್ಷಯಲ್ಲಿಯ, ವೈಷ್ಣವ ದೀಕ್ಷಯಲ್ಲಿಯ ಮರ್ಮವನ್ನು ತಿಳಿದವನು, ಸೌರ, ಶಾಕ್ತ, ಜಾರಣ ಮಾರಣ ಮಂತ್ರ–ತಂತ್ರಗಳಲ್ಲಿ ಅವನ ಸರಿಗಟ್ಟುವವರು ಯಾರು ಇಲ್ಲ, ಕಾಮಶಾಸ್ತ್ರದಲ್ಲಿ ನಿಷ್ಣಾತ, ಸಂಗೀತ ಶಾಸ್ತ್ರದಲ್ಲಿಯೂ ಪ್ರವೀಣ, ಕವಿತ್ವ

ಮಾಡುವದರಲ್ಲಿ ಅತಿಶಯ ಹುಷಾರ, ರಾಜಕಾರಣದಲ್ಲಿಯೂ ಅಗ್ರಗಣಿ, ನಿಘಂಟುಗಳೆಲ್ಲವೂ ಮುಖೋದ್ಗತ, ಹಾವಾಡಿಗನ ಚಮತ್ಕಾರಗಳಂತೂ ಮಾಡಲು ಬಂದೇ ಬರುತ್ತದೆ, ಬಹಳ ಪ್ರಸಿದ್ಧಿ ಹೊಂದಿದ ಪಂಚಾಕ್ಷರೀ, ಹೆಸರಾದ ವೈದ್ಯ ಮತ್ತು ರಸಾಯನಶಾಸ್ತ್ರಜ್ಞ, ಔಷಧಿ ತಯಾರಿಸಿ ಕೊಡುವವನು ಅವನೇ, ಭೂತ ಭವಿಷ್ಯವನ್ನು ತಿಳಿಯುವವನು, ಅಮರಕೋಶಾದಿ ಶಬ್ದಕೋಶ ಮತ್ತು ೧೮ ಪುರಾಣಗಳು ಮುಖೋದ್ಗತ, ಗರ್ಭ ಲಕ್ಷಣಗಳನ್ನು ತಪ್ಪುವದೇ ಇಲ್ಲ, ಶಬ್ದೋತ್ಪತ್ತಿಯ ವಿಲಕ್ಷಣ ಜ್ಞಾನ, ಸಾಧಕ ಬಾಧಕ ರೀತಿಗಳೆಲ್ಲವೂ ಗೊತ್ತಿದೆ, ಸಮಯೋಚಿತ ಕಾರ್ಯ ಮಾಡುವ ಬೆಂಬಲವಿದೆ, ಮಾತನಾಡುವದರಲ್ಲಿಯಂತೂ ಎರಡನೇ ಬೃಹಸ್ಪತಿಯ ಅವತಾರವೇ, ಬ್ರಹ್ಮಜ್ಞಾನವನ್ನಂತೂ, ಅವನ ಅಂಗೈಯಲ್ಲಿದ್ದ ನೆಲ್ಲಿಕಾಯಿಯಂತೆ ಸ್ಪಷ್ಟವಾಗಿ ಮಾತನಾಡುವನು, ಆದರೆ ಆತ್ಮಾನುಭವದಲ್ಲಿ ಮಾತ್ರ ಕುರುಡನಾಗಿರುವನು! ಅದರಲ್ಲಿಯ ವರ್ಮವು ಅವನಿಗೆ ಗೂತ್ತಿರುವದಿಲ್ಲ ಯಾವ ಪ್ರಕಾರವಾಗಿ ನವಿಲಿನ ಮೈತುಂಬ ಅಗದೀ ಕಣ್ಣಿನಂತೆಯೇ ನವಿಲುಗರಗಳು, ಕಣ್ಣಿನಿಂದ ತುಂಬಿರುತ್ತವೆ, ಆದರೆ ಅವುಗಳಿಗೆ ದೃಷ್ಟಿ ಇಲ್ಲದಿರುವದರಿಂದ ಅವು ಹೇಗ ಕುರುಡಾಗಿರುತ್ತವೆಯೋ ಹಾಗೆಯೇ ವಿದ್ವಜ್ಜನರ ಸ್ಥಿತಿಯಾಗಿರುತ್ತದೆ ಯಾವ ಕೆಚ್ಚಲದಿಂದ ಹಾಲು ಬರುತ್ತದೆಯೋ, ಅದೇ ಕೆಚ್ಚಲಿಕ್ಕೆ ಅಂಟಿಕೊಂಡಿದ್ದ ಉಣ್ಣಿಗಳು ಮೂರ್ಖತನದಿಂದ ಅಶುದ್ಧ ರಕ್ತವನ್ನೇ ಕುಡಿಯುತ್ತವ ಅದರಂತೆಯೇ ಇಂತಹ ವಿದ್ವಾನರು ವಿಷಯ ಲೋಲುಪರಾಗಿರುತ್ತಾರೆ, ಉಣ್ಣಿಗಳ ಬಾಯಿಯಲ್ಲಿ ಹಾಲು ಹೋಗ ಹತ್ತಿದರೆ, ಅದು ಹಾಲನ್ನು ಬಿಟ್ಟು ರಕ್ತವನ್ನೇ ಕುಡಿಯುತ್ತದೆ, ಅದರಂತೆ ಪಂಡಿತರು ವಿಷಯಕ್ಕಾಗಿ ಜ್ಞಾನವನ್ನು ಬೋಧಿಸುತ್ತಾರೆ ನೊಣವು ಸುವಾಸಿಕವಾದ ಚಂದನವನ್ನು ಬಿಟ್ಟು ಬಿಟ್ಟು ಬಹಳ ಪ್ರೀತಿಯಿಂದ ಹೇಸಿಗೆಯ ಮೇಲೆ ಹೋಗಿ ಕೂಡ್ರುತ್ತದೆ, ಅದರಂತೆ ಪಂಡಿತರು ಆತ್ಮಜ್ಞಾನವನ್ನು ಬಿಟ್ಟುಕೊಟ್ಟು ವಿಷಯ ಸೇವನೆಗೆಯೇ ಮರುಳಾಗುತ್ತಾರೆ ಕಪ್ಪೆಯು ಕಮಲದ ಸುಗಂಧದ ಹತ್ತಿರವಿದ್ದರೂ ರಾಡಿ ಇಲ್ಲವೆ ರೊಜ್ಜನ್ನು ಸೇವಿಸುತ್ತದೆ ಅದರಂತೆ ವಿದ್ವಜ್ಜನರು ಆತ್ಮಜ್ಞಾನವನ್ನು ಬಿಟ್ಟು ವಿಷಯಾಧೀನರಾಗುತ್ತಾರೆ ಅದ್ವೈತಮತವನ್ನು ಪ್ರಾಪ್ತಮಾಡಿಕೊಂಡು ಅವರು ಜ್ಞಾನವನ್ನು ಕ್ರಯಿಸಲು ದೇಶಾಂತರಕ್ಕೆ ಹೋಗುತ್ತಾರೆ, ಮೂರ್ಖಜನರು ಅವರನ್ನು ನಗೆಗೀಡು ಮಾಡುತ್ತಾರೆ ಆದರೂ ಅವರು ಸನ್ಮಾನವನ್ನು ಬಯಸುತ್ತಾರ ಜ್ಞಾನವಂತನು ಬ್ರಹ್ಮನಿರೂಪಣೆಯನ್ನು ಹೇಳ ಹತ್ತಿದನೆಂದರೆ, ಸತ್ವಸ್ಥತರ ಮನಸ್ಸು ಪರಮಾರ್ಥದ ಕಡೆಗೆ ಒಲಿಯುತ್ತದೆ ಆದರೆ ಭಾಷ್ಯಕಾರನು ಧನದ ಇಚ್ಛೆಯನ್ನೇ ಮಾಡುತ್ತಾನ ಈ ಪ್ರಕಾರವಾಗಿ ವಿದ್ಯಾವಂತರ ಜ್ಞಾನವು ವಿಪರೀತವಾಗಿರುತ್ತದೆ ನುಡಿಯುವದು ಬೇರೆ ಮತ್ತು ನಡೆಯುವದು ಬೇರೆ, ಅಲ್ಲಿ ಬ್ರಹ್ಮಜ್ಞಾನವೆಂತಹದು? ಎಲ್ಲಿ ದ್ರವ್ಯ ಮತ್ತು ಸನ್ಮಾನವು ನೆಲೆಸಿರುವವೋ ಅಲ್ಲಿ ಆತ್ಮಜ್ಞಾನವು ಇರುವದಿಲ್ಲ ಧನ ಮತ್ತು ಸನ್ಮಾನವನ್ನು

ಅಪೇಕ್ಷಿಸಿ ಬ್ರಹ್ಮಜ್ಞಾನವನ್ನು ಹೇಳುತ್ತ ಕುಳಿತರ, ಕೋಟಿ ಕಲ್ಪಗಳುರುಳಿದರೂ ಅವನಿಗೆ ಆತ್ಮಸಾಕ್ಷಾತ್ಕಾರವಾಗಲಾರದು ಒಂದೊಂದೇ ಪದಗಳನ್ನು ಬೇರೆ ಬೇ೦ ತರಹದಿಂದ ಬಿಡಿಸಿ ಹೇಳಲಿ, ಇಲ್ಲವೆ ಒಂದೊಂದೇ ಶ್ಲೋಕದ ಹತ್ತು ಹತ್ತು ಪ್ರಕಾರ ವಾಗಿ ಅರ್ಥ ವಿಶದ ಮಾಡಿ ಹೇಳಲಿ, ಆದರೆ ಎಲ್ಲಿಯವರೆಗೆ ಮಾನಾಭಿಮಾನವು ಹೊಟ್ಟೆಯಲ್ಲಿ ದೃಢವಾಗಿರುವದೋ, ಅಲ್ಲಿಯ ವರೆಗೆ ಬ್ರಹ್ಮಜ್ಞಾನವು ಹೇಗೆ ಆಗುವದು? ನಾನೊಬ್ಬ ದೊಡ್ಡ ಪಂಡಿತ, ನಾನೊಬ್ಬ ಬಹಳ ಜ್ಞಾನಿ, ಇಂತಹ ಅಹಂಕಾರದಿಂದಲೇ ಅವರು ವಂಚಿತರಾಗುತ್ತಾರೆ ಕಣ್ಣಿಲ್ಲದ ಕುರಡು ಮಗು ದಿನನಿತ್ಯವೂ ತಂದೆಯ ಹತ್ತಿರವಿದ್ದರೂ, ತಂದೆಯನ್ನು ಹೇಗೆ ಗುರುತಿಸುವದಿಲ್ಲವೋ, ಹಾಗಯೇ ವಿದ್ಯಾವಂತರ ಸ್ಥಿತಿಯಾಗುತ್ತದೆ ಅವರು ಸದೋದಿತ ಆತ್ಮಸ್ವರೂಪದಲ್ಲಿ ಐಕ್ಯವಾಗಿಯೇ ಇರುತ್ತಾರೆ, ಹಗಲಿರುಳು ಅದನ್ನೇ ವರ್ಣಿಸುತ್ತಾರೆ, ಆದರೆ ಆ ಸ್ವರೂಪವನ್ನು ಕಂಡುಹಿಡಿಯುವದಿಲ್ಲ ವಿಷಯ ಪೋಷಣೆಗಾಗಿ ಯಾರು ಶಾಸ್ತ್ರ-ಉತ್ಪತ್ತಿಯ ಭಾಷಣವನ್ನು ಮಾಡುವರೋ, ಅವರ ಪರಿಶ್ರಮವು ಬರಡು ಆಕಳವನ್ನು ಪಾಲನೆ ಮಾಡಿದಂತೆ ವ್ಯರ್ಥವಾಗಿರುವದು' ಬರಡು ಆಕಳವು ಹೈನವನ್ನು ಎಂದಿಗೂ ಕೊಡುವದಿಲ್ಲ ಇಲ್ಲವೆ ಕರುವನ್ನೂ ಹಾಕು ವದಿಲ್ಲ, ಒಡಿತೆಂದರೆ ದಿಕ್ಕು ತಪ್ಪಿ ಒಡುತ್ತದೆ ನಿತ್ಯವೂ ತುಂಟುತನ ಮಾಡಿ ಸರಕಾರದ ತೋಟದಲ್ಲಿ ಹೋಗುತ್ತದೆ ಮತ್ತು ಅದರ ಶಿಕ್ಷೆಯನ್ನು ಯಜಮಾನನು ಅನುಭವಿಸ ಬೇಕಾಗುತ್ತದೆ ಪಂಡಿತರ ಸ್ಥಿತಿಯು ಕೂಡ ಹೀಗೆಯೇ ಆಗುತ್ತದೆ ಅವರೂ ಕೂಡ ವಾಕ್ಚಾತುರ್ಯವನ್ನು ವಿದ್ವತ್ತೆಯಿಂದ ಬೆಳೆಸಿರುತ್ತಾರೆ ಈ ನುಡಿಯು ಗೂಳಿಯಂತಾಗಿ ವಿಷಯಗಳಿಗೆ ಗುರಿಯಾಗುತ್ತದೆ ಮತ್ತು ಅದನ್ನು ಅವನಿಗೆ ತಡೆಯಲಾಗುವದಿಲ್ಲ ಯಾವ ಪ್ರಕಾರವಾಗಿ ದುರ್ದೈವಿಯ ಕೈಯಲ್ಲಿ ಕನಕವು ಬಿದ್ದರೂ, ಅದು ಮಣ್ಣಾಗು ತ್ತದೆಯೋ, ಹಾಗೆಯೇ ಪಂಡಿತರ ಪಾಂಡಿತ್ಯವು ವಿಷಯೇಚ್ಛೆಯಿಂದ ಮಣ್ಣು ಪಾಲಾಗುವದು ಬ್ರಾಹ್ಮಣನಿಗ ಆಸಯನ್ನು ದಾನ ಮಾಡಿದರೆ, ಅದನ್ನು ಅವನಿಗೆ ಸಾಕುವದಾಗುವದಿಲ್ಲ ಆಮೇಲೆ ಅವನು ಅದನ್ನು ದೀಡ ದಮ್ಮಡಿ (ಕವಡಿ ಕಿಮ್ಮತ್ತಿಗೆ)ಗ ಮಾರಿ ಬಿಡುತ್ತಾನೆ ಅದರಂತೆ ವಿದ್ವಜ್ಜನರ ವಿದ್ಯೆಯು ಆಗುತ್ತದೆ ಅದ್ವೈತ ಶಾಸ್ತ್ರ ದಲ್ಲಿಯ ಸಿದ್ಧಾಂತಗಳು ಅವರಿಗೆ ತಿಳಿಯುತ್ತವೆ ಇದು ಅವರಿಗ ಪ್ರಾಪ್ತವಾಗದಂತಹ ಲಾಭವಿದೆ, ಆದರೆ ವಿಷಯ ಸುಖಕ್ಕಾಗಿ ಅವರು ಅದನ್ನು ಮಾರಿ ಬಿಡುತ್ತಾರೆ ಇಂತಹ ಪಂಡಿತರು ನಿಜವಾಗಲೂ ಮೂರ್ಖರಿರುತ್ತಾರೆ ಕಬ್ಬಿನ ಗಾಣದಲ್ಲಿ ಕಬ್ಬನ್ನು ಹಾಕಿದರೆ ಅದು (ಗಾಣವು) ಅದರ (ಕಬ್ಬಿನ) ರಸ ತೆಗೆದು ಪಾತ್ರೆಯನ್ನು ತುಂಬುತ್ತದೆ ಮತ್ತು ಅದು ಮಾತ್ರ ಒಣಗಿದ (ಹಿಂಡಿದ) ಕಬ್ಬಿನ ದಂಟುಗಳನ್ನು 'ಕರಕರ' ಶಬ್ದ ಮಾಡುತ್ತ ಅಗಿಯುತ್ತ ತಿರಗುತ್ತದೆ ಹೀಗೆಯೇ ವಿದ್ವಜ್ಜನರ ಸ್ಥಿತಿಯಾಗುತ್ತದೆ ವಿದ್ವಾನ್‌ರು ಜ್ಞಾನವನ್ನು ಹೇಳ ಹತ್ತಿದರೆಂದರ, ಅದರಲ್ಲಿಯ ಇಂಗಿತವನ್ನು ಸಾತ್ವಿಕ ಜನರು ಗ್ರಹಿಸುತ್ತಾರೆ ಮತ್ತು ಸತ್ವವಿಲ್ಲದ ಶಬ್ದಪ್ರಯೋಗದಿಂದ ಅವರ ಮುಖವು

ಬಡಬಡಿಸುತ್ತಿರುತ್ತದೆ ಅಲ್ಲಿ ರುಚಿ (ಸಿಹಿ) ಎಂತಹದು? ಯಾವ ಪ್ರಕಾರವಾಗಿ ಸುಂದರ ಯುವತಿಯನ್ನು (ಪದ್ಮಿನಿ) ಷಂಢನಿಗೆ ಮದುವೆ ಮಾಡಿ ಕೊಟ್ಟರೆ, ಅವಳು ಆಜನ್ಮ ಅಳುತ್ತ ಕೂಡ್ರುತ್ತಾಳೆಯೋ ಅದರಂತೆ ಪಂಡಿತರ ಮನೆಯಲ್ಲಿ ಪಾಂಡಿತ್ಯವು ಅಳುತ್ತಲೇ ಇರುತ್ತದೆ ಅದೋ ಹೀಗೆ ನೋಡಿರಿ! ಬ್ರಹ್ಮಜ್ಞಾನವಿಲ್ಲದೆಯೇ ಬರೀ ಶಬ್ದಜ್ಞಾನದಿಂದ ಸನ್ಯಾಸಿಯಾಗಿ ಮತ್ತು ಧ್ಯಾನ ಧಾರಣೆಯನ್ನು ಮಾಡದಿದ್ದರೆ, ಅವನ ಸನ್ಯಾಸವು ನಿರರ್ಥಕವೆಂದಾಯಿತು ಶಬ್ದಜ್ಞಾನವನ್ನು ಹೇಗೆ ಹೇಗೆ ನುಡಿಯುವನೋ ಹಾಗೇ ನಡೆಯದೆಯೇ, ವಿಷಯಲೋಲುಪತೆಯಲ್ಲಿ ಕಾಲ ಕಳೆದರೆ, ಅವನು ಮಣ್ಣು ಮುಕ್ಕಿದನೆಂದು ತಿಳಿಯಬೇಕು, ವೇದಶಾಸ್ತ್ರ ಸಂಪನ್ನನಾಗಿ, ಅದರಿಂದ ಉದರ ನಿರ್ವಾಹವನ್ನು ಮಾಡಹತ್ತಿದನೆಂದರೆ ಅವನೊಬ್ಬ ದೊಡ್ಡ ವ್ಯಾಪಾರಿಯಾದನು ನಿಜ, ಆದರೆ ಅವನು ತನ್ನಲ್ಲಿದ್ದ ನಿಜವಾದ ಮುಖ್ಯ ಅಸಲನ್ನು (ಸಂಪತ್ತನ್ನು) ಕಳೆದುಕೊಂಡು ಬಿಟ್ಟನು ರತ್ನವನ್ನು ಕೊಟ್ಟು ತೌಡು ತೆಗೆದುಕೊಳ್ಳುವದು, ಇಲ್ಲವೆ ಅಮೃತವನ್ನು ಕೊಟ್ಟು ಗಂಜಿಯನ್ನು ಕುಡಿಯುವಂತೆಯೇ ಪಂಡಿತರ ಕೊನೆಯಾಗುತ್ತದೆ ಮತಿತಾರ್ಥವೇನೆಂದರೆ ಅವರು ಆತ್ಮಜ್ಞಾನದಿಂದ ವಂಚಿತರಾಗುತ್ತಾರೆ ಬಹಳ ಶ್ರಮ ದಿಂದ ಶಬ್ದಜ್ಞಾನವನ್ನು ಸಂಪಾದಿಸಿರುತ್ತಾರೆ ಆದರೆ ಅಷ್ಟೇ ಪರಿಶ್ರಮದ ಸಾಧನೆಯಿಂದ ಪರಬ್ರಹ್ಮನ ದರ್ಶನವೂ ಆಗಬಹುದಾಗಿತ್ತು ಇಟ್ಟಂಗಿಯನ್ನು ತಗದುಕೊಂಡು, ಅದರ ಬದಲಾಗಿ ಸ್ಪರ್ಶಮಣಿಯನ್ನು ಕೊಟ್ಟರೆ, ಮೂರ್ಖ ಜನರಿಗ ವಿಷಾದವೆನಿಸುತ್ತದೆ ಉದರ ನಿರ್ವಾಹವನ್ನು ಮಾಡುವ ಮಾರ್ಗವೆಂದೂ ಮತ್ತು ತಮ್ಮ ವಿದ್ವತ್ತೆಯ ಮೆರವಣಿಗೆಯಾಗಬೇಕೆಂದು, ಪ್ರಶಸ್ತಿಪತ್ರಗಳನ್ನು ತೆಗೆದುಕೊಂಡು ಧನಿಕರ ಬಾಗಿಲಿಗೆ ಹೋಗುತ್ತಾರೆ ಹೊಟ್ಟೆ ಹೊರೆಯುವದರ ಸಲುವಾಗಿ ಸೆರೆಕುಡುಕನು ಯಾವ ಪ್ರಕಾರವಾಗಿ ಬಾಯಿಗೆ ಬಂದ ಹಾಗೆ ಬಡಬಡಿಸುತ್ತಿರುತ್ತಾನೋ, ಹಾಗೆಯೇ ವಿದ್ಯಾ ವಂತರೂ ಹೊಟ್ಟೆಗಾಗಿ ತಮ್ಮ ವಿದ್ಯೆಯ ಪ್ರಚಾರ ಮಾಡುತ್ತ ಬೇರೆ ಬೇರ ತರಹದಿಂದ ವಿತಂಡ ವಾದವನ್ನು ಹಾಕುತ್ತಾರೆ ವೇದದ ಅರ್ಥವನ್ನು ಉತ್ಪತ್ತಿಯ ಬಲದಿಂದ ಮಾಡಿ ಕೊಂಡು ಪರಬ್ರಹ್ಮನನ್ನು ಸಾಧ್ಯಮಾಡಿಕೊಳ್ಳದಿದ್ದರ, ಅವನ ಪರಿಶ್ರಮದ ಫಲವು ಶ್ರಮವೇ ಸರಿ ಯಾವ ಪ್ರಕಾರವಾಗಿ ಉತ್ತಮ ರತ್ನಗಳನ್ನು ಗಾಣದಲ್ಲಿ ಹಾಕಿ ಎಣ್ಣೆ ತೆಗೆಯಲು ಹೋದರೆ ಅದರಲ್ಲಿ ಎಣ್ಣೆಯೂ ಬರುವದಿಲ್ಲ ಮತ್ತು ಹಿಂಡಿಯೂ ಬರುವದಿಲ್ಲ, ಆದರೆ ರತ್ನಗಳು ಮಾತ್ರ ಚೂರುಚೂರಾಗುತ್ತವ ಅದರಂತೆಯೇ ಪಂಡಿತರು ಹುಚ್ಚರಾಗಿರುತ್ತಾರೆ, ಅವರು ಪರಿಶ್ರಮ ಮಾಡಿ ಕಷ್ಟದ ರಾಶಿಯನ್ನೇ ಅನುಭವಿಸು ತ್ತಾರೆ ಅವರು ಕಷ್ಟದಿಂದ ಕಷ್ಟವನ್ನೇ ಗಳಿಸುತ್ತಾರೆ, ದುಃಖದಿಂದ ದುಃಖಿಯಾಗು ತ್ತಾರೆ ಇದೇ ಸಂಗತಿಯನ್ನು ಶ್ರೀಕೃಷ್ಣನು ಉದ್ಧವನಿಗೆ ಅನೇಕ ದೃಷ್ಟಾಂತಗಳಿಂದ ಹೇಳುತ್ತಾನೆ ಹಾಲಿನ ಆಸೆಯಿಂದ, ಶುದ್ಧ ಬರಡು ಆಕಳ ಹಾಲನ್ನು ಹಿಂಡಹತ್ತಿದರೆ, ಒಂದು ಚಿಪ್ಪಿನಷ್ಟು ಹಾಲು ಕೂಡ ಕೈಗೆ ಸಿಗುವದಿಲ್ಲವೇ ಇಲ್ಲ ಆದರೆ ಪುಕ್ಕಟೆಯಾಗಿ

ಅದರ ಒದಿಕೆಯನ್ನು ತಿನ್ನಬೇಕಾಗುತ್ತದೆ ಸುಷ್ಟ, ವೈಗಳ್ಳ, ಇರಕಲು, ಅತೀವ ತಿನಸುಬಕ್ಕ ಒದೆಯುವ ಮತ್ತು ನೈರಾವೈರಾ ಒಡುವ, ಸಡಿಲು ಬಿಟ್ಟರ ರಾಜ ಬಂಗಲಿಯಲ್ಲಿ ನುಗ್ಗುವ, ಕಟ್ಟಿಗೆಯಿಂದ ಹೊಡದರೆ ಓಂಜರಿಯುವದಿಲ್ಲ ಚೆನ್ನಾದ ನಡತೆ ಅದಕ್ಕೆ ಗೊತ್ತೇ ಇರುವದಿಲ್ಲ ಎಲ್ಲಿಯಾದರೂ ಮೇಯುತ್ತಿರುವದು, ಅದರ ಕಡೆಯಿಂದ ಎಂದಿಗೂ ಹಾಲೂ ಸಿಗುವ ಹಾಗಿಲ್ಲ, ಅದು ಎಂದಿಗೂ ಗಬ್ಬಾಗುವದಂತೂ ಇಲ್ಲವೇ ಇಲ್ಲ, ಇಂತಹ ಆಕಳನ್ನು ಸಾಕಿದರೆ, ಸಾಕುವವನಿಗೆ ದುಃಖದ ಹೊರತಾಗಿ ಬೇರೇನೂ ಸಿಗುವದಿಲ್ಲ ಹಾಗೆಯೇ ಮನೆಯಲ್ಲಿಯ ಎಲ್ಲ ವ್ಯವಸ್ಥೆಯನ್ನು ಸರಿಯಾಗಿ ಚೆನ್ನಾಗಿ, ಅಚ್ಚುಕಟ್ಟಾಗಿ ಇಡುವದು ಇದು ಗೃಹಿಣಿಯ ಕೆಲಸವಿರುತ್ತದೆ, ಆದರೆ ಆ ಗೃಹಿಣಿಯು ಪುರುಷನಿಗ ಅನುಕೂಲವಿಲ್ಲದಿದ್ದರೆ, ಅವಳಿಂದ ಅವನಿಗೆ ಬಹಳ ದುಃಖವಾಗುತ್ತದೆ ಮತ್ತು ಎಲ್ಲ ಕಾಲದಲ್ಲಿಯೂ ಅವನು ಅಸಮಾಧಾನಿಯಾಗುತ್ತಾನೆ ನಿಂದಿಸುವದು, ಆಜ್ಞೆಯನ್ನು ಪಾಲಿಸದಿರುವದು, ಗಂಡನಿಗೆ ಹೀಯಾಳಿಸಿ ಮಾತನಾಡುವದು, ಸ್ವತಃ ರುಚಿ ರುಚಿಯಾದ (ಸಿಹಿ) ಪದಾರ್ಥ ತಿನ್ನುವದು ಇವುಗಳೆಲ್ಲವೂ ಸ್ತ್ರೀಯರ ಕೆಟ್ಟ ಗುಣಗಳಿರುತ್ತವ ಊಟ ತಿಂಡಿಗಳನ್ನು ಸರಿಯಾಗಿ ಕೊಟ್ಟು, ಮೇಲೆ ಹಣವನ್ನೂ ಕೊಟ್ಟರೆ, ಬೆಲ್ಲದಂತಹ ಮಾತುಗಳನ್ನು ಆಡುವಳು, ಆದರೆ ಧಾರ್ಮಿಕ ಕೃತ್ಯಗಳನ್ನು ಮಾಡುವದನ್ನು ನೋಡಿದರೆ, ತಲೆ ಒಡದುಕೊಳ್ಳುವಳು ಇಂತಹ ಹೆಂಗಸು ನಿಜವಾಗಲೂ 'ಅಸಾಧ್ವಿ' ಇರುವಳು ಯಾವಳಿಗೆ ಪಾಪ ಪುಣ್ಯದ ಅರಿವೇ ಇರುವದಿಲ್ಲವೋ, ಕಾಮಾಂಧಳಾಗಿ ಧರ್ಮವನ್ನು ದೂರುವಳೋ ಅವಳಲ್ಲಿ ನಿಜವಾಗಿಯೂ ಕೆಟ್ಟ ನಡತೆಯುಳ್ಳ ಹೆಂಗಸಿನ ಲಕ್ಷಣಗಳಿವೆಯೆಂಬುದನ್ನು ಲಕ್ಷದಲ್ಲಿಡು ಇಂತಹ 'ಅಸಾಧ್ವಿ' ಹಂಗಸಿನ ಕೂಡ ಸುಖಪ್ರಾಪ್ತಿಯು ಹೇಗೆ ಆಗುವದು? ಆ ಪುರುಷನು ಬಹಳ ದುಃಖಕ್ಕೀಡಾಗುತ್ತಾನ

ಯಾವನ ದೇಹವು 'ಪರಾಧೀನ'ವಾಗಿರುತ್ತದೆಯೋ, ಅವನು ಜೀವಂತ ನಿರುವಾಗಲೇ ಹೀನ ದೀನನಾಗುತ್ತಾನ ಪರಾಧೀನನಿಗೆ ಕಲ್ಪಾಂತದಲ್ಲಿ ಕೂಡ ಸಮಾಧಾನವು ಪ್ರಾಪ್ತವಾಗಲಾರದು ತನ್ನ ಪರ್ಚಸ್ಸನ್ನು ಕಳೆದುಕೊಂಡು ಯಾವನು ಪರಾಧೀನನಾದನೋ ಅವನಿಗ ನಿಜವಾಗಲೂ ಎಂದಿಗೂ ಕನಸಿನಲ್ಲಿ ಕೂಡ ಸುಖವು ಸಿಗಲಾರದು 'ಪರ' ಅಂದರೆ ಮಾಯಾ, 'ಆಧೀನ' ಅಂದರೆ ಅಂಕಿತ ಯಾವನು ಮಾಯೆಯ ಅಂಕಿತನಾಗನೋ ಅವನು ಸುಖಮಯವಾದ ಕನಸನ್ನು ಕೂಡ ಕಾಣುವದಿಲ್ಲ ಅವನು ಸದಾನುಕಾಲ ದುಃಖದಲ್ಲಿಯೇ ಮುಳುಗಿರುತ್ತಾನೆಂಬುದನ್ನು ಲಕ್ಷದಲ್ಲಿಡು ಪರಾಧೀನನಿಗ ಸುಖವಿದೆಯೆಂಬುವನು ಮೂರ್ಖನಿರುತ್ತಾನೆ ದುಃಖದಲ್ಲಿಯ ಅತಿಶಯ ದುಃಖವನ್ನು ಅವನು ಅನುಭವಿಸಬೇಕಾಗುತ್ತದೆ ಇನ್ನು ಮಕ್ಕಳ ಬಗ್ಗೆ ಹೇಳುವನು ಕೇಳು ಒಬ್ಬನಿಗೆ ಒಳ್ಳೇ ಪುತ್ರನಿರುತ್ತಾನ ಇಲ್ಲವ

ಕುಪುತ್ರನಿರುತ್ತಾನೆ ಕೆಲವರಂತೂ (ಪುತ್ರರು) ಇಷ್ಟೊಂದು ಮೂರ್ಖರಿರುತ್ತಾರಲ್ಲಾ ಅವರಿಂದ ಅವರ ಅಮ್ಮ ಅಪ್ಪನಿಗೆ ಹಗಲಿರುಳೂ ದುಃಖವನ್ನೇ ಅನುಭವಿಸಬೇಕಾಗುತ್ತದೆ ಯಾವನು (ಮಗನು) ನರಕದಿಂದ ಪಾರು ಮಾಡುವನೋ ಮತ್ತು ಯಾವನು ಪೂರ್ವಜರನ್ನು ಉದ್ಧರಿಸುವನೋ, ಯಾವನು ತಾಯಿ-ತಂದೆಗಳು ಪರಮೇಶ್ವರ ಸ್ವರೂಪವಿದ್ದಾರೆಂದು ತಿಳಿಯುತ್ತಾನೆಯೋ ಮತ್ತು ಅವರ ಏಕನಿಷ್ಠ ಭಕ್ತಿಯನ್ನು ಮಾಡುತ್ತಾನೆಯೋ ಅವನು ತಾಯಿ ತಂದೆಗಳನ್ನು ಬಿಟ್ಟು ಬೇರೆ ತೀರ್ಥಗಳಿಗೆ ಹೋಗಲು ಇಚ್ಛಿಸುವದಿಲ್ಲ ಅವರ (ತಾಯಿ–ತಂದೆ) ಚರಣ ತೀರ್ಥದಿಂದಲೇ ನಾಕಷ್ಟು ಪವಿತ್ರತೆಯುಂಟಾಗುತ್ತದೆಂದು ಅವನು ತಿಳಿಯುತ್ತಾನೆ ಯಾವ ಪ್ರಕಾರವಾಗಿ ಲಕ್ಷ್ಮಿ ಮತ್ತು ನಾರಾಯಣನಿರುವನೋ, ಅದರಂತೆಯೇ ತನ್ನ ತಾಯಿ–ತಂದೆಯೆಂದು ತಿಳಿದು ವಿಶೇಷ ಭಕ್ತಿಯಿಂದ ಅವರ ಭಜನೆಯನ್ನು ಮಾಡುತ್ತಾನೆ ಅವನ ಸೇವೆಗೆ ಮನಸ್ಸು ಎಂದಿಗೂ ಬೇಸರಿಯುವದಿಲ್ಲ ಯಾವನು ಅತಿಶಯ ಸಾತ್ವಿಕನು, ತಂದೆಯ ಆಜ್ಞೆಯನ್ನು ಪಾಲಿಸುವವನು ಧರ್ಮಾಧರ್ಮದ ಬಗ್ಗೆ ವಿಚಾರ ಮಾಡುವದೇ ಅವನ ಸ್ವಾಭಾವಿಕ ಗುಣ, ಯಾವನು ತಾಯಿ–ತಂದೆಯ ಸೇವೆ ಮಾಡಿಯೇ, ತನ್ನ ಉದ್ಧಾರ ಮಾಡಿಕೊಳ್ಳುತ್ತಾನೆಯೋ ಮತ್ತು ತನ್ನ ಪೂರ್ವಜರನ್ನು ಮುಕ್ತ ಮಾಡುತ್ತಾನೆಯೋ, ಅವನೇ ಸಂಸಾರದಲ್ಲಿ 'ಸತ್ಪುತ್ರ' ನೆಂದೆನಿಸುತ್ತಾನೆ ಇಂತಹ ಮಗನ ಪಾಲನ-ಪೋಷಣೆಯನ್ನು ಮಾಡುವಾಗ್ಗ ತಾಯಿ-ತಂದೆಗೆ ಆನಂದವಾಗುತ್ತದೆ ಅವನು ಪಿತೃಭಕ್ತಿಯನ್ನು ಮಾಡಿ ಸ್ವತಃದ ಉದ್ಧಾರವನ್ನು ಮಾಡಿಕೊಳ್ಳುತ್ತಾನೆ ಮತ್ತು ಪೂರ್ವಜರ ಉದ್ಧಾರವನ್ನೂ ಮಾಡುತ್ತಾನ ಸತ್ಪುತ್ರನು ಜನಿಸಿದನೆಂದರೆ ಇಷ್ಟು ಸುಖವಾಗುತ್ತದೆ ಇನ್ನು ಖೊಟ್ಟಿ ಮಕ್ಕಳು (ಅಸತ್ಪ್ರಜಾ) ಗುಣಗಳನ್ನು ಹೇಳುತ್ತೇನೆ ಕೇಳು ಮೂಲದಲ್ಲಿ 'ಅಸತ್ಪ್ರಜಾ' ಎಂಬ ಶಬ್ದವಿದೆ ಅವನ ನಡುವಳಿಕೆಯ ರೀತಿಯನ್ನು ಹೇಳುವದೆಂದರೆ ಬಹಳ ನಾಚಿಕೆಗೀಡಾಗಿರುತ್ತದೆ ಆದರೆ ಅದನ್ನೂ ನಿನಗೆ ಹೇಳುತ್ತೇನೆ ಕೇಳು ಹೀಗೆ ಈ ಮಕ್ಕಳು ಹುಟ್ಟುತ್ತಾರಲ್ಲಾ, ಅವರ ನಡುವಳಿಕೆಯು ಹೇಗೆ ಇರುತ್ತದೆ ಎಂದರೆ ಅವನಿಗೆ ಇಷ್ಟವಾದವರೆಂದರೆ ಅವರ ಹೆಂಡರು ಮತ್ತು ದ್ರವ್ಯ ತಾಯಿ–ತಂದೆಯನ್ನು ಅತ್ಯಂತ ತುಚ್ಛತೆಯಿಂದ ನೋಡುವವನು, ಬಹಳ ಖೊಟ್ಟಿ, ಮೈಗಳ್ಳ, ವ್ಯಭಿಚಾರಿ, ಅತೀವ ಹಟವಾದಿ, ಕೆಟ್ಟವನು, ಅನಾಚಾರಿ, ಕರ್ಮಭ್ರಷ್ಟ, ಅತಿಶಯ ದುಷ್ಟ, ದುರ್ಜನ, ಅವನ ಗಂಟು ಏನೆಂದರೆ ಸುಳ್ಳಾಡುವದು, ಸುಳ್ಳು ಆಣ ತೆಗೆದುಕೊಳ್ಳುವದು, ತಾಯಿ–ತಂದೆಗೆ ಮೋಸ ಮಾಡುವದು, ಸಾತ್ವಿಕ ಜನರನ್ನು ತೊಂದರೆಗೀಡು ಮಾಡುವದು, ಇದೇ ಅವನ ಉದ್ಯೋಗವಾಗಿರುತ್ತದೆ ಅವರು ಸ್ವತಃ ನರಕಕ್ಕೆ ಹೋಗುತ್ತಾರಲ್ಲದೇ ಪೂರ್ವಜರನ್ನೂ ಕೂಡ ಅಲ್ಲಿಗೆ ಕರೆದುಕೊಂಡು ಹೋಗುತ್ತಾರೆ, ಇಂತಹ ಕುಪುತ್ರನ ಪಾಲನ ಪೋಷಣ ಮಾಡುವವರು ಅತಿಶಯ

ದುಃಖದಿಂದ ದುಃಖಿತರಾಗುತ್ತಾರೆಂಬುದನ್ನು ಹೇಳುವದು ಬೇಕಾಗಿಲ್ಲ ಹೇಗೆ ಹೊಟ್ಟೆಯಲ್ಲಿ ಹುಣ್ಣಾದರೆ ಅದನ್ನು ಒಡೆಯಲು ಬರುವದಿಲ್ಲವೋ, ಹಾಗೆಯೇ ಕುಸಂತತಿಯ ಸಂಸಾರವು ಕಹಿಯಾಗಿದ್ದು ಅದರಿಂದ ಸಹನವಾಗದಂತಹ ದುಃಖ ವನ್ನು ಭೋಗಿಸಬೇಕಾಗುತ್ತದೆ ಇಂತಹ ಮಕ್ಕಳು ಬದುಕಿರುವಾಗ ದುಃಖಕ್ಕೀಡು ಮಾಡುತ್ತಾರೆ ಮತ್ತು ಮರಣದ ನಂತರ ನರಕಕ್ಕೆ ಕರದುಕೊಂಡು ಹೋಗುತ್ತಾರೆ, ಈ ಪ್ರಕಾರವಾಗಿ ದುಷ್ಟ ಸಂತತಿಯು ಕೌತುಕವೆಂದರೆ ದುಃಖದಿಂದ ಅತಿಶಯ ಪರಿತಪಿ ಸುವ ದಾಗಿರುತ್ತದೆ ಅದರಂತೆಯೇ ಧನಾಢ್ಯನಿದ್ದು ಯೋಗ್ಯ ಯಾಚಕನಿಗೆ ದಾನ ಕೊಡದಿರುವದೇ ದುಃಖದ ಮೂಲವಾಗಿರುತ್ತದೆ ಅದಕ್ಕಾಗಿಯೇ ಹಣದ ಹುಚ್ಚಿದ್ದವ ನಿಗೆ ಬಹಳ ದುಃಖವನ್ನು ಸಹಿಸಬೇಕಾಗುತ್ತದೆ ಧನಾರ್ಜನೆಯ ಸಲುವಾಗಿ ಯುಕ್ತಿ ಪ್ರಯುಕ್ತಿ ಮತ್ತು ಕೊಲೆ ವ ಹಾನಿ ಮಾಡಬೇಕಾಗುತ್ತದೆ, ಒಳ್ಳೆಯದು ಇಷ್ಟೆಲ್ಲ ವನ್ನು ಮಾಡಿ ಅನೇಕ ತರಹದ ಕಷ್ಟವನ್ನನುಭವಿಸಿ ದುಃಖವನ್ನು ಸಹನೆ ಮಾಡಿ ದ್ರವ್ಯವನ್ನು ಗಳಿಸಿದರೆ, ಮೊಟ್ಟಮೊದಲು ಅದನ್ನು ಕೂಡಿಹಾಕಲು ದುಃಖ ಸಹಿಸ ಬೇಕಾಗುತ್ತದೆ, ಆಮೇಲೆ ಅದನ್ನು ಕಾಯುವದರ ಸಲುವಾಗಿ ದುಃಖವನ್ನನು ಭವಿಸಬೇಕಾಗುತ್ತದೆ ಆ ದುಡ್ಡಿಗಾಗಿ ಪ್ರತ್ಯಕ್ಷ ಹೆಂಡರು ಮಕ್ಕಳು ಕೂಡ ಅವನನ್ನು ವಧಿಸಲು ಸಿದ್ಧರಾಗುತ್ತಾರೆ ಆದ ಕಾರಣ ಧನಾಢ್ಯ ನಿದ್ದವನು ಯೋಗ್ಯ ಯಾಚಕನಿಗೆ ದಾನವನ್ನು ಕೊಡಬೇಕು

## ಪ್ರಕರಣ ೧೫

ಇದು ನೋಡಿರಿ, ನಿತ್ಯಮುಕ್ತ ಮತ್ತು ಅವಿನಾಶಿಯಾದ ನನ್ನ ಸ್ವರೂಪವನ್ನು ತಿಳಿದುಕೊಳ್ಳುವ ತೀವ್ರ ಇಚ್ಛೆಯು ಯಾರಿಗಿರುತ್ತದೆಯೋ ಅವರಿಗ ಅದರ (ಕೃಷ್ಣ ಸ್ವರೂಪ) ಹೊರತು ಬೇರೆ ಯಾವುದೂ ನೆನಪಾಗುವದಿಲ್ಲ ಹೀಗೆ ನನ್ನನ್ನು ತಿಳಿದು ಕೊಳ್ಳುವ ತೀವ್ರ ಇಚ್ಛೆಗೆ 'ಜಿಜ್ಞಾಸಾ' ಎಂದು ಅನ್ನುತ್ತಾರೆ ನನ್ನ ಪ್ರಾಪ್ತಿಗಾಗಿ ಅವನು ವಿದ್ವತ್ತೆ ಮತ್ತು ಮಾನ ಮರ್ಯಾದೆಯನ್ನು ಎಂದಿಗೂ ಅಂಗೀಕರಿಸುವ ದಿಲ್ಲ ಶ್ರವಣ ಮನನದಿಂದ ಅವನು ತನ್ನಲ್ಲಿಯೇ ವಿಚಾರ ಮಾಡಿ, ದೇಹವು ಮತ್ತು ಸಂಸಾರ ಚಿಂತೆಯು ಸುಳ್ಳಿದೆಯೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿರುತ್ತಾನೆ ಆದ್ದರಿಂದ ಗುರುಚರಣದಲ್ಲಿ ಅವನಿಗೆ ಪೂರ್ಣ ವಿಶ್ವಾಸವಿರುತ್ತದೆ ಮತ್ತು ಪೂರ್ಣ ಬ್ರಹ್ಮನಲ್ಲಿ ದೃಢವಾದ ನಿಶ್ಚಯವಿರುತ್ತದೆ ಅದಕ್ಕಾಗಿ ಅವನು ಮುಂದಿನ ಮಾರ್ಗ ಕ್ರಮಣ ಮಾಡುವದರ ಸಲುವಾಗಿ ಅವನು ಭಗವಂತನ ಭಜನೆಯಲ್ಲಿ ತತ್ಪರನಾಗು ತ್ತಾನೆ ಇಲ್ಲವೆ ಕರ್ಮದ ಆಗು ಹೋಗುಗಳನ್ನು ಬಿಟ್ಟು ಧ್ಯಾನನಿಷ್ಠನಾಗುತ್ತಾನೆ

ಆವಾಗ್ಗೆ ಧ್ಯೇಯ (ಧ್ಯಾನ ಮಾಡುವ ವಸ್ತು) ಧ್ಯಾತಾ (ಧ್ಯಾನ ಮಾಡುವವನು) ಧ್ಯಾನ, ಈ ತ್ರಿಪುಟಿಯ ಅರಿವೇ ಅವನಿಗೆ ಆಗುವದಿಲ್ಲ ಅಲ್ಲಿ ಇಲ್ಲಿ ಎಲ್ಲ ಕಡೆಗೂ ಚೈತನ್ಯವೇ ವ್ಯಾಪಿಸಿರುವದರಿಂದ, ಅವನೂ ಸನಾತನ ಪರಬ್ರಹ್ಮನೇ ಆಗಿರುತ್ತಾನೆ ಅಲ್ಲಿ ಕರ್ತಾ ಕರ್ಮ ಮತ್ತು ಕ್ರಿಯೆಯೆಲ್ಲಿಯದು? ಭೇದ ಭಾವನೆಯ ಭ್ರಾಂತಿಯು ತೊಲಗಿ ಹೋಗುವದು, ಒಳಗೂ, ಹೊರಗೂ ಪರಬ್ರಹ್ಮನೇ ತುಂಬಿ ತುಳುಕುತ್ತಾನೆ ಮತ್ತು ಗುರುಕೃಪೆಯಿಂದ ಮನಸ್ಸು ನಿಶ್ಚಲವಾಗುತ್ತದೆ ಎಲ್ಲೆಡೆಯಲ್ಲಿ, ಯಾವಾಗಲೂ ಸರ್ವತ್ರ ಮತ್ತು ಎಲ್ಲರಲ್ಲಿಯೂ ಬರೀ ಪರಬ್ರಹ್ಮನೇ ವ್ಯಾಪಿಸಿರುವನೋ, ಅಲ್ಲಿಯೇ ಆತ್ಮಜ್ಞಾನವು ಸ್ಥಿರವಾಗುತ್ತದೆ ಇಂತಹ ಪರಬ್ರಹ್ಮನ ಧ್ಯಾನವನ್ನು ಯಾರಿಗೆ ಮಾಡುವದಾಗುವದಿಲ್ಲವೋ ಅವರಿಗಾಗಿ, ಹೇ ಸುಜಾಣ! (ಉದ್ಧವಾ!) ಇನ್ನೊಂದು ಸುಲಭವಾದ ಉಪಾಯವನ್ನು ಹೇಳುತ್ತೇನೆ ಕೇಳು ಮನಸ್ಸಿನ ಸ್ವಭಾವವು ಚಂಚಲ ವಾಗಿದೆ ಮತ್ತು ವಿಷಯ ವಾಸನೆಯು ಅದಕ್ಕಿಂತಲೂ ಚಪಲವಾಗಿದೆ ಆದ್ದರಿಂದ ನಿರ್ಗುಣ ಬ್ರಹ್ಮನಲ್ಲಿ ಪ್ರವೇಶಿಸುವ ಶಕ್ತಿಯು ಆ ಮನಸ್ಸಿಗ ಬರುವದಿಲ್ಲ ಆ ಶಕ್ತಿಯನ್ನು ತರುವದರ ಸಲುವಾಗಿ ಸಾಂಖ್ಯ ಯೋಗ ಇಲ್ಲವೆ ಸಂನ್ಯಾಸ ಮುಂತಾದವುಗಳ ಮಾರ್ಗ ದಲ್ಲಿಯ ಕಷ್ಟವನ್ನು ತಪ್ಪಿಸಬೇಕಾಗಿದ್ದರೆ, ಅತಿಶಯ ಉಲ್ಲಾಸದಿಂದ ನನ್ನ (ಕೃಷ್ಣ) ಭಕ್ತಿಯನ್ನೇ ಬೆಳೆಯಿಸಿದರೆ ಆಯಿತು. (ಬೆಳೆಯಿಸಬೇಕು) ಹಿಂದಕ್ಕ ಬದ್ಧ ವ ಮುಕ್ತನ ಲಕ್ಷಣಗಳನ್ನು ಹೇಳುವಾಗ ಮುಕ್ತನ ಲಕ್ಷಣಗಳನ್ನು ಹೇಳಿದ್ದೆನು ಮತ್ತು ಶಬ್ದಪಾಂಡಿತ್ಯನ ಪೊಳ್ಳು ಶಬ್ದ ಜ್ಞಾನದ ಸಂಗತಿಯನ್ನು ಹೇಳಿದ್ದೆನು ಈಗ್ಗೆ ತನ್ನ (ಕೃಷ್ಣನ) ಆತ್ಮಭಕ್ತಿಯನ್ನೂ ಉದ್ಧವನಿಗೆ ಹೇಳಬೇಕೆಂದು ಅತ್ಯಂತ ಆದರ ದಿಂದ ಶ್ರೀ ಕೃಷ್ಣನು ಭಕ್ತಿಯ ಸ್ವರೂಪವನ್ನು ಹೇಳುತ್ತಿದ್ದಾನ ಉದ್ಧವಾ! ಅತಿಶಯ ಪ್ರೀತಿಯಿಂದ ನನ್ನ ಕೆಲಸ ಮಾಡುವದಿದ್ದರ, ನಿನ್ನ ಭಕ್ತಿಗ ನಿನ್ನ ಮನೋ ಧರ್ಮವನ್ನು ಮಾರಿಬಿಡಬೇಕು ಮತ್ತು ಅನೇಕ ತರಹದಿಂದ ಆನಂದವನ್ನು ಕೊಡುವ ರೀತಿಯಿಂದ ನನ್ನ ಗುಣ, ಕೀರ್ತಿ ಮತ್ತು ನಾಮದ ಸ್ಮರಣೆ ಮಾಡಬೇಕು ನನ್ನ (ಕೃಷ್ಣ) ಭಜನಯಿಂದಲೇ ನಾನು (ಶಿಷ್ಯನು ಇಲ್ಲವೆ ಭಕ್ತನು) ಕೃತಾರ್ಥನಾಗು ವೆನು ಎಂಬ ದೃಢ ವಿಶ್ವಾಸವನ್ನು ಮನಸ್ಸಿನಲ್ಲಿಟ್ಟುಕೊಂಡು, ಹಗಲಿರುಳೂ ದಣಿಯ ದಲೇ ಸದೈವ ಭಜನದಲ್ಲಿಯೇ ನಿರತನಾಗಬೇಕು ನಿನ್ನ ಭಜನೆಯ ಪ್ರೀತಿಯಿಂದ ಮನಸ್ಸಿನಲ್ಲಿ ಸಮಾಧಾನಕ್ಕೆ ಕೂಡ ಸ್ಥಳವು ಉಳಿಯುವದಿಲ್ಲ (ಅಂದರ ಭಜನೆಯು ಪೂರ್ತಿಯಾಯಿತೆಂದು ಸಮಾಧಾನ ಹೊಂದಿ ಅದನ್ನು (ಭಜನೆಯನ್ನು) ಅಲ್ಲಿಗೆ ನಿಲ್ಲಿಸ ಬೇಕೆಂದು ಅವನಿಗೆ ಅನ್ನಿಸುವದಿಲ್ಲ) ಒಂದರ್ಧ ಕ್ಷಣ ಕೂಡ ನಿರರ್ಥಕವಾಗಿ ಕಳೆಯುವ ದಿಲ್ಲ ಇದೇ ಭಜನೆಯ ಉತ್ತಮ ಸಮೃದ್ಧಿಯೆನ್ನಬೇಕು ನನ್ನ ಭಜನಯಲ್ಲಿ ಹೆಚ್ಚಿಗೆ ಪ್ರೀತಿಯಿದ್ದರೂ, ವೈದಿಕ, ಲೌಕಿಕ ಇಲ್ಲವ ದೈಹಿಕ ಮುಂತಾದವುಗಳ ನಿತ್ಯ ನೈಮಿತ್ತಿಕ ಕರ್ಮಗಳನ್ನು ಬಿಡಬಾರದು

ಏಕೆಂದರೆ ಭಕ್ತನಿಗೆ ಆ ಕರ್ಮಗಳಿಂದ ಬಾಧೆಯಾಗುವದಿಲ್ಲ ಆದರೆ ಎಲ್ಲ ಕರ್ಮ ಮಾಡುವಾಗ ಅದರ ಫಲೇಚ್ಛೆಯನ್ನು ಕನಸಿನಲ್ಲಿ ಕೂಡ ತಾರದೆ ಇರುವದೇ ಭಕ್ತನ ಗುಟ್ಟಿನ ಮರ್ಮವಿದ್ದು ಅದನ್ನು ತಿಳಿದುಕೊಳ್ಳುವದೇ ಅವನ ಅತಿ ಉತ್ತಮ ಯೋಗ್ಯತೆಯಾಗಿರುತ್ತದೆ ಯಾವನು ಅಂತರಂಗದಲ್ಲಿ ಬೇಸರಿಯದೆ, ನನ್ನಲ್ಲಿ ಭಕ್ತಿಯಿಟ್ಟು ಎಲ್ಲ ಕರ್ಮಗಳನ್ನು ಮಾಡುವನೋ ಮತ್ತು ಫಲೇಚ್ಛೆಯನ್ನು ಎಂದಿಗೂ ಮಾಡುವದಿಲ್ಲವೋ, ಅವನೇ ಭಕ್ತಿ ಮಾಡಲು ಯೋಗ್ಯನಾಗುತ್ತಾನೆಂಬುದನ್ನು ಲಕ್ಷ್ಯದಲ್ಲಿಡು ಆಲದ ಮರ (ಗಿಡ)ಗಳನ್ನೇನೂ ಅದರ ಹಣ್ಣುಗಳನ್ನು ತಿನ್ನುವದರ ಆಶೆಗಾಗಿ ಹಚ್ಚುವದಿಲ್ಲ ಅದರಂತೆ ಮನಃಪೂರ್ವಕವಾಗಿ ಇಚ್ಛೆಯಿಂದ ಕರ್ಮ ಮಾಡಿದಲ್ಲಿ, ಮುಂದೆ ಅದರ ಫಲೇಚ್ಛೆಯೂ ಉತ್ಪನ್ನವಾಗುವದಿಲ್ಲ ನನ್ನ ಭಜನೆ ಮಾಡಹತ್ತಿದನೆಂದರೆ, ಸ್ವಲ್ಪವೂ ಜ್ಞಾನದ ತುಟಾಗ್ರತೆಯಾಗುವದಿಲ್ಲ ನನ್ನ ಭಕ್ತನಿಗೆ ನನ್ನನ್ನು ಭಕ್ತಿಯಿಂದ ಭಜಿಸುವದರಿಂದಲೇ ನಿತ್ಯ ಮುಕ್ತಿಯು ಲಭಿಸುತ್ತದೆ ಜ್ಞಾನವಿಲ್ಲದೆ ಭಕ್ತಿಯಾಗುವದಿಲ್ಲ ವೆಂದು ಅನ್ನುತ್ತಾರೋ, ಅದು ಅವರ ಕೇವಲ ಶಬ್ದ ಜ್ಞಾನವಿರುತ್ತದೆ ಭಕ್ತಿಯಿಂದಲೇ ಪ್ರತ್ಯಕ್ಷ ಅಪರೋಕ್ಷಜ್ಞಾನದ ಪ್ರಾಪ್ತಿಯಾಗುತ್ತದೆಂದು ತಿಳಿ ಆದ್ದರಿಂದ ಭಜನೆ ಮಾಡುತ್ತಿರುವಾಗ ಭಕ್ತನಿಗೆ ಜ್ಞಾನದ ತುಟಾಗ್ರತೆಯಾಗುವದಿಲ್ಲ ಅವನು ಸಂಸಾರಿಯಾಗಿದ್ದರೂ ಅವನಿಗೆ ಸಂಸಾರ ಬಂಧನಕಾರಕವಾಗುವದಿಲ್ಲ

## ಪ್ರಕರಣ ೧೬

ಪ್ರಾಮುಖ್ಯವಾಗಿ ಸಜ್ಜನರ ಸೇವೆ ಮಾಡುವ ಸಾಧನವೇ ದೇವರಿಗೆ ಒಡಿಸುತ್ತದೆ ಆ ಸಾಧನವು ಸಾಧ್ಯವಾಯಿತೆಂದರೆ ಸಂತವಚನೋಕ್ತಿಯಂತೆ, ಆತ್ಮಭಾವ ಮತ್ತು ಆತ್ಮಭಕ್ತಿಯನ್ನು ಅದು (ಸಂತರ ಸೇವೆ) ಕೊಡುತ್ತದೆ ಯಾವನಿಗೆ ಸಜ್ಜನರ ಸಮೂಹದಲ್ಲಿರಲು ಸೇರುತ್ತದೆಯೋ, ಯಾವನು ಸಾಧುವಿನ ನುಡಿಗಾಗಿ ಬಹಳ ಹಸಿದಿರುವನೋ, ಸಾಧುವಿನ ಬಾಯಿಯಿಂದ ಎಂಥ ನುಡಿಗಳನ್ನು ಮನ್ನಿಸದಿರುವದು ಯಾವನಿಗೆ ಗೊತ್ತಿರುವದಿಲ್ಲವೋ, ಅವನೇ ಆತ್ಮ ಭಕ್ತಿಯ ಭಾಗ್ಯವಂತನಿರುತ್ತಾನೆ ಸಾಧುವಿನ ನುಡಿಯಲ್ಲಿ ಯಾವನ ಶ್ರದ್ಧೆಯು ನಿಶ್ಚಯವಾಗಿರುವದೋ, ಅಂತಹವನನ್ನೇ ಕಂಡು ಸದ್ಗುರು ಅವನ ಮೇಲೆ ಕೃಪ ಮಾಡುತ್ತಾನೆ ಚರಾಚರ ಸೃಷ್ಟಿಯಲ್ಲಿ ಸಾಧುವೇ ಶ್ರೇಷ್ಠ ಗುರುವಾಗಿದ್ದಾನೆ ನಿಜವಾಗಿಯೂ ಸಂಸಾರ ಬಂಧನದಿಂದ ಪಾರು ಮಾಡುವವರು ಗುರುವಿನ ಹೊರತು ಮತ್ತೆ ಬೇರಾರೂ ಇಲ್ಲ ಗುರುವಚನದಿಂದಲೇ ಭಕ್ತನಿಗೆ ಆತ್ಮಭಕ್ತಿಯನ್ನು ಕೊಡುವವನು ಸರ್ವಸ್ವೀ ನಾನೇ(ಕೃಷ್ಣ)

ಇರುತ್ತೇನೆ ಸಂಸಾರದಲ್ಲಿ ಯಾವನಿಗೆ ಸದ್ಗುರುವಿರುವನೋ, ಅವನ ಆಜ್ಞೆಯನ್ನು ನಾನು (ಕೃಷ್ಣ) ಶಿರಬಾಗಿ ವಂದಿಸುವೆನು ಅವನು ಯಾರ ಮೇಲೆ ಕೃಪೆ ಮಾಡುವನೋ ಅವನನ್ನು ನಾನು (ಕೃಷ್ಣ) ತತ್‌ಕ್ಷಣ ಉದ್ಧಾರ ಮಾಡುವೆನು ಆ ಸದ್ಗುರುವಿನಲ್ಲಿ ನನ್ನ ಸ್ವರೂಪವಿದೆಯೆಂದು ತಿಳಿದು ಯಾವನು ಭಜಿಸುವನೋ ಅವನು ನನಗೆ (ಕೃಷ್ಣ) ಎಷ್ಟು ಪ್ರಿಯನಾಗಿರುತ್ತಾನೆಂಬುದನ್ನು ನನಗೆ ಹೇಳಲು ಬರುವದಿಲ್ಲ ಅವನ ಇಹ-ಪರಲೋಕವನ್ನು ನಡೆಸುವವನು ನಾನೇ ಇರುತ್ತೇನೆ ಅವನಿಂದ ನನಗೆ ಅತಿಶಯ ಆನಂದವಾಗುತ್ತದೆ ಮತ್ತು ಅವನ ಆನಂದದಿಂದ ನನ್ನ ಆನಂದವೂ ಉಕ್ಕೇರುತ್ತದೆ ಅವನಿಗೆ ಗುರೂಪದಿಷ್ಟ ಮಾರ್ಗದ ಕ್ರಮಣ ಮಾಡುವಾಗ್ಗೆ ಸ್ವಲ್ಪವೂ ಕೂಡ ಕಷ್ಟ ಮತ್ತು ಆಯಾಸವಾಗುವದಿಲ್ಲ ಆದರೆ ಒಂದು ವೇಳೆ ಅವನಿಗೆ ಕಷ್ಟ ಬಂದರೆ, ನಾನು ಶ್ರೀಕೃಷ್ಣನು ಮುಂದಾಗಿ ಅವನ ಕಷ್ಟಗಳನ್ನು ಪರಿಹರಿಸುವೆನು, ಅವನು ಯಾವ ಸ್ಥಾನಕ್ಕೆ ಮುಟ್ಟುವವನಿರುತ್ತಾನೋ, ಆ ಸ್ಥಾನವನ್ನೇ ನಾನು (ಕೃಷ್ಣ) ಅವನ ಹತ್ತಿರ ತರುತ್ತೇನೆ ನಂತರ ಸೇವೆಯಲ್ಲಿ ಅವನಿಗೆ ಇಷ್ಟೊಂದು ಪ್ರೀತಿ ಇರುತ್ತದೆ ಎಂದು ಶ್ರೀಕೃಷ್ಣನು ಹೇಳುತ್ತಾನ

## ಪ್ರಕರಣ ೧೭

ಎಲ್ಲಿಯವರೆಗೆ ಮನಸ್ಸು ವೃತ್ತಿಶೂನ್ಯವಾಗುವದಿಲ್ಲವೋ, ಅಲ್ಲಿಯವರೆಗೆ ಜಾಣಾಕ್ಷನು ಅದರ ಮೇಲೆ ನಂಬಿಕೆಯಿಡುವದಿಲ್ಲ ವೃತ್ತಿಯ ರೂಪದಿಂದ ಮನಸ್ಸು ಮೋಸಗೊಳಿಸಬಹುದೆಂದು ತಿಳಿದು, ಅವನು ಆತ್ಮಜ್ಞಾನದಿಂದ ಎಚ್ಚರಾಗಿರುತ್ತಾನೆ ನೋಡಿರಿ! ದೂರ್ವಾಸನಂತಹ ಜ್ಞಾನಿಗೂ ಕೂಡ ಮನಸ್ಸು ಗಳಿಗೆ ಗಳಿಗೆಗೂ ಕ್ಷುಬ್ಧ ಮಾಡಿತು ಆ ಸಿಟ್ಟಿನ ಭರದಲ್ಲಿ ಗುಣಾವಗುಣವನ್ನು ಲೆಕ್ಕಿಸದೆ, ಅವನು ಕೂಡ ಉಗ್ರವಾದ ಶಾಪವನ್ನು ಕೊಡಲು ಸಿದ್ಧನಾದನು ದುರ್ಗಂಧೆಯು ಮತ್ಸ್ಯದ ಉದರದಲ್ಲಿ ಜನಿಸಿದಳು ಆದರೂ ಅವಳಿಂದ ಪರಾಶರನು ಮೋಸ ಹೊಂದಿದನು ನಾರದನು ಗಂಗಾತೀರದಲ್ಲಿ ಕಣ್ಣಿನಿಂದ ಬರೀ ತಮಾಷೆಗಾಗಿ ನೋಡಿದನು ಆದರೆ ಅದಕ್ಕಾಗಿ ಅವನನ್ನು 'ನಾರದಿ'ಯನ್ನಾಗಿ ಮಾಡಿಬಿಟ್ಟರು ಸಕಲ ಸೃಷ್ಟಿಯ ತಾತ ಬ್ರಹ್ಮದೇವನೂ ಕೂಡ ತನ್ನ ರೂಪ ಸುಂದರ ಮಗಳನ್ನು ನೋಡಿ ಅವನ ಮನಸ್ಸು ವಿಷಯಾಕಾರವಾದುದರಿಂದ ಅವಳ ಭೋಗೇಚ್ಛೆಗೆ ಉದ್ಯುಕ್ತನಾದನು ಮತ್ತು ಸರಸ್ವತಿಯ ಬೆನ್ನಟ್ಟಿದನು! ಈ ಜಗತ್ತಿನಲ್ಲಿ ಈ ಮನಸ್ಸಿನಂತಹ ಬಂಡುಖೋರನು ಬೇರೆ ಯಾವನೂ ಇರುವದಿಲ್ಲ ಅದು ಅನೇಕ ರೀತಿಯಾಗಿ ಪೀಡೆಯನ್ನುಂಟು ಮಾಡಿ ಜ್ಞಾನಿ ಜನರನ್ನೂ ಕೂಡ ಅಪಹಾಸ್ಯಕ್ಕೀಡು ಮಾಡುತ್ತದೆ ಆದರೆ ಸಾಧು ಮಾತ್ರ ಆ ಮನಸ್ಸನ್ನು ಬಗ್ಗು (ದಮನ) ಬಡಿಯುತ್ತಾನೆ ಈಗ ಒಂದು ವೇಳೆ ನೀವು, ಹೀಗೆ ಅನ್ನಬಹುದು 'ಮನಸ್ಸಿಲ್ಲದೆಯೇ ಭೋಗಿಸಲು ಬರುತ್ತದೆಯಾದರ ವೃತ್ತಿಯು

ಕ್ಷುಬ್ಧವೇಕಾಗಬೇಕು?'' ಆದರೆ ಹೀಗೆ ಭಾಷಣ ಮಾಡುವವನು ಜ್ಞಾನಿಯಿದ್ದರೂ ಸಹ ಮೂರ್ಖನಿರುತ್ತಾನೆ ಸಾಧು ಜನರಿಗೆ ಹೀಗೆ ಮಾತನಾಡುವದು ರುಚಿಸುವದಿಲ್ಲ ವೃತ್ತಿಯು ಸತ್ವಗುಣದಲ್ಲಿ ಸೂಕ್ಷ್ಮ ರೂಪದಿಂದ ಇರುತ್ತದೆ ಅದು ಮನಸ್ಸನ್ನು ಕ್ಷುಬ್ಧ ಮಾಡಿ, 'ನಾನು ಮುಕ್ತನಿರುವೆನು' ಎಂದು ತಿಳಿದು ಅವನನ್ನು ವೈಷಿಕನನ್ನಾಗಿ ಮಾಡುತ್ತದೆ 'ಮುಕ್ತನಾದೆನು' ಎಂದು ಅಭಿಮಾನವನ್ನು ತಾಳುವದು ಮತ್ತು ವಿಷಯಾಸಕ್ತಿಯಿಂದ ವರ್ತಿಸುವದು, ಇವೇ ಮನಃಕ್ಷೋಭದಿಂದ ಉಂಟಾಗುತ್ತವೆ ಆದ್ದರಿಂದ ವೃತ್ತಿಯು ಇರುವವರೆಗ, ಸಾಧು ಜನರಿಗೆ ಮುಕ್ತಿಯು ಸನ್ಮತವಿರುವದಿಲ್ಲ ಮನಸ್ಸು ಇದೊಂದು ಒಳ್ಳೇ ನಟನಿದ್ದು ನಾಟ್ಯವನ್ನು ರಚಿಸುತ್ತದೆ ಅದೇ 'ಮುಕ್ತನಾದೆನು' ಎಂದು ತಿಳಿದು ಅಭಿಮಾನವನ್ನು ತಾಳುತ್ತದ ಆದ್ದರಿಂದ ಅದನ್ನು ನಷ್ಟಗೊಳಿಸಲು ಸಾಧು ಜನರು ಆತ್ಮಜ್ಞಾನದಿಂದ ಎಚ್ಚರಿಕೆಯಿಂದ ಇರುತ್ತಾರೆ ಯಾವ ಪ್ರಕಾರವಾಗಿ, ಕೃಷ್ಣಸರ್ಪದ ಬಾಯಿಯನ್ನು ಕೈಯಿಂದ ಗಟ್ಟಿಯಾಗಿ ಹಿಡಿದ ಹೊತ್ತಿನಲ್ಲಿ ಕೈಯನ್ನು ಸ್ವಲ್ಪ ಸಡಿಲು ಮಾಡಿದರೆ ಅದು ಕೂಡಲೇ ಕಚ್ಚಿಬಿಡುತ್ತದೆ ಆದಕಾರಣ ಅದು ಸಾಯುವವರೆಗೂ ಅದರ ಬಾಯಿಯನ್ನು ಹಿಚುಕಲೇಬೇಕು ಅದರಂತೆಯೇ ಸಾಧು ಜನರು ಮನಸ್ಸಿನ ನಿಗ್ರಹ ಮಾಡುತ್ತಾರ ಎಚ್ಚರಿಕೆಯಿಂದ ಮನೋನಿಗ್ರಹವನ್ನು ಮಾಡುವದೇ ಸಾಧುವಿನ ಲಕ್ಷಣವಾಗಿದೆ ಇದು ನಿಜವಾಗಿಯೂ ಹತ್ತೊಂಬತ್ತನ ಗುಣವಾಗಿದೆ ಇನ್ನು ಇಪ್ಪತ್ತನೇ ಗುಣವನ್ನು ಕೇಳು ಮಳೆಗಾಲದಲ್ಲಿ ತುಂಬಿತುಳುಕುವ ನದಿಗಳು ಸಮುದ್ರಕ್ಕ ಕೂಡಿದವೆಂದರೆ, ಸಮುದ್ರವು ಗರ್ವದಿಂದ ಹಿಗ್ಗುವದಿಲ್ಲ ಇಲ್ಲವೆ ಬೇಸಿಗಯಲ್ಲಿ ಆ ನದಿಗಳು ತುಂಬಿ ತುಳುಕದೇ ಸಮುದ್ರಕ್ಕೆ ಕೂಡದಿದ್ದಲ್ಲಿ ಸಮುಗ್ರವೇನೂ ಸಿಟ್ಟಿನಿಂದ ಬತ್ತಿಹೋಗುವದಿಲ್ಲ, ಅದರಂತೆ ರಾಶಿ ರಾಶಿಯಾಗಿ ಧನವು ಅವನಿಗೆ ಸಿಕ್ಕಲ್ಲಿ, ಅವನ ಮನಸ್ಸು ಆಹ್ಲಾದಿತ ವಾಗುವದಿಲ್ಲ, ಇಲ್ಲವೇ ಅವನ ಎಲ್ಲ ಧನವೂ ನಷ್ಟವಾಗಿ ಬಡವನಾದರೂ ಅವನಿಗೆ ಹೀನದೀನನಾಗಿರುವದು ಗೊತ್ತಿರುವದಿಲ್ಲ ಹಗಲಿರುಳುಗಳು ಆಗಿ ಹೋದರೂ ಸೂರ್ಯನ ಪ್ರಕಾಶದಲ್ಲಿ ಏನೂ ಬದಲಾವಣೆಯಾಗುವದಿಲ್ಲವೋ, ಅದರಂತೆ ತರತರಹದ ಸ್ಥಿತಿಗತಿಗಳು ಬಂದು ಹೋದರೂ, ಸಾಧುವಿನ ಸ್ತಬ್ಧತೆಗೆ ಕ್ಷೋಭ ಉಂಟಾಗುವದಿಲ್ಲ ಸಿಡಿಲಿನ ಗರ್ಜನೆ ಇಲ್ಲವ ಗಡಗಡಾಟದಿಂದ, ಹೇಗ ಆಕಾಶವೇನೂ, ಭಯಭೀತವಾಗುವ ದಿಲ್ಲವೋ ಹಾಗೆಯೇ, ಬೇಕಾದಷ್ಟು ವಿಕಾರದ ತೆರೆಗಳು ಬಂದು ಅಪ್ಪಳಿಸಿ ದರೂ, ನಿಶ್ಚಲನಾಗಿರುವದಕ್ಕೆಯೇ ಗಾಂಭೀರ್ಯವೆಂದೆನ್ನುತ್ತಾರ ಇದೇ ಸಂತರ ಗಾಂಭೀರ್ಯವಿರುತ್ತದೆ ನಿಜವಾಗಿಯೂ ಇದೇ ಜೀವ ಮತ್ತು ಶಿವನ ವಿಶ್ರಾಂತಿ ಸ್ಥಾನವಾಗಿರುತ್ತದೆ ಇದೇ ಇಪ್ಪತ್ತನೇ ಗುಣವಿರುತ್ತದೆ, ಇನ್ನು ಧೈರ್ಯವು ಹೇಗಿರುತ್ತದೆಂಬುದನ್ನು ಕೇಳು ಯಾವನು, ಧೈರ್ಯದಿಂದ ಮನಬುದ್ಧಿ ಘುಂತಾದ ಇಂದ್ರಿಯಗಳ ಮತ್ತು ಪ್ರಾಣದ ಸಂಯಮನವನ್ನು ಮಾಡಿ ಆತ್ಮಸನ್ಮುಖ

ಮಾಡುವನೋ ಮತ್ತು ಅವುಗಳನ್ನು ಹಿಂದಕ್ಕೆ ತಿರುಗಿ ಹೋಗಲು ಬಿಡುವದಿಲ್ಲವೋ ಇಲ್ಲವೆ ಸ್ವಯಂವರದಲ್ಲಿ ಬಲವಂತನಾದ ಶತ್ರುವನ್ನು ಗೆದ್ದು ಶೌರ್ಯದಿಂದ ವಧುವನ್ನು ಕರೆದುಕೊಂಡು ಬಂದ ಮೇಲೆ ಅವಳನ್ನು ಅವನು ಬೇರೆಯವರ ಹತ್ತಿರ ಹೋಗಲು ಬಿಡುವದಿಲ್ಲವೋ, ಹಾಗೆಯೇ ಸಾಧು ಕೂಡ ತನ್ನ ವೃತ್ತಿಯಿಂದ ಧೈರ್ಯಕ್ಕೆ ನೆರಿ ಹಾಕುತ್ತಾನೆ (ಎಲ್ಲಿಯೂ ಹೋಗಲು ಬಿಡುವದಿಲ್ಲ) ಬಲೆಯಲ್ಲಿ ಸಿಲುಕಿದ ಪ್ರಾಣಿಯನ್ನು ಬೇಟಗಾರನು, ಹೇಗೆ ಅದನ್ನು ತಿರುಗಿ ಅರಣ್ಯದಲ್ಲಿ ಹೋಗಲು ಬಿಡುವದಿಲ್ಲವೋ, ಹಾಗೆಯೇ ಸಾಧುವು ಕೂಡ ಧೈರ್ಯದಿಂದ ಮನಸ್ಸನ್ನು ಬಿಗಿ ಹಿಡಿದು ಅದನ್ನು ದೇಹದತ್ತ ಹೋಗಲು ಬಿಡುವದಿಲ್ಲ ದೇಹಕ್ಕೆ ಅನೇಕ ತರಹದ ಸುಖ ಉಂಟಾಗಲಿ ಇಲ್ಲವೆ ಅದನ್ನು ಆನೆಯ ಮೇಲೆ ಕುಳ್ಳಿರಿಸಲಿ, ಇಷ್ಟು ಸುಖವು ನಿಜವಾಗಿಯೂ ಸಿಕ್ಕರೂ ಅವನು ಮನಸ್ಸಿನಲ್ಲಿ ದೇಹಾಭಿಮಾನವನ್ನು ತಾಳುವದಿಲ್ಲ ಇಲ್ಲವೆ ಪ್ರಲಯಕಾಲದ ಭಯಂಕರ ಸಮಯದಲ್ಲಿ,ಪಂಚ ಮಹಾಭೂತಗಳು ಭಯಭೀತ ವಾದರೂ,ಅವನು ಜಗತ್ ಶ್ರೇಷ್ಠನು ಧೈರ್ಯದಿಂದ ಮನಸ್ಸಿಗೆ ದೇಹದ ಭೆಟ್ಟಿಯಾಗಲು ಕೊಡುವದೇ ಇಲ್ಲ, ಕಲಿಕಾಳನ (ಯಮ) ಹಠಾತ್ತಾಗಿ ಧಾಳಿಯು ಬಂದಾಗ್ಗೆ, ಅವನು ತನ್ನ ವೃತ್ತಿಯನ್ನು ಪರಬ್ರಹ್ಮನತ್ತ ನಿಶ್ಚಯವಾಗಿ ಸ್ಥಿರಗೊಳಿಸಿ,ಚಿತ್‌ಸ್ವರೂಪದ ಪೇಟೆಯಲ್ಲಿ ಅದನ್ನು ಮಾರಿ ಬಿಟ್ಟಿರುತ್ತಾನೆ ಅಲ್ಲಿ ಅವನಿಗೆ ಸ್ವಾನಂದ ರೂಪಿ ಉತ್ತಮ ಯಜಮಾನನು ಭೆಟ್ಟಿಯಾದನು, ಆವಾಗ್ಗೆ ಅವನು ತನ್ನ ಜೀವನಸಹಿತವಾಗಿ ಮನಸ್ಸು, ಬುದ್ಧಿ, ಪ್ರಾಣ ಮುಂತಾದವುಗಳನ್ನು ಅವನ ಉಡಿಯಲ್ಲಿ ಹಾಕಿ, ಅದರ ಬದಲಾಗಿ ಸ್ವಾನಂದವನ್ನೇ ಕೊಂಡುಕೊಂಡನು (ತೆಗೆದುಕೊಂಡನು) ಇದಕ್ಕೇ ಧೈರ್ಯವೆನ್ನುತ್ತಾರೆ, ಇದೇ ಸಾಧುವಿನ ಇಪ್ಪತ್ತೊಂದನ ಗುಣವಿರುತ್ತದೆ ಇನ್ನು ಷಡ್ವಿಕಾರಗಳನ್ನು ಹೇಗೆ ಗೆಲಯುತ್ತಾನೆಂಬುದನ್ನು ಹೇಳುತ್ತೇನೆ ಅದರ ಲಕ್ಷಣಗಳನ್ನು ಕೇಳು ಸಾಧುವು ಸ್ವಾನಂದ ಭರಿತನಾಗಿರುವದರಿಂದ, ಅವನಿಗ ಹಸಿವೆಯಾಗುವದಿಲ್ಲ ಜಗತ್ತಿನಲ್ಲಿ ಜೀವಿಸಿರುವದರಿಂದಲೇ ಅವನು ತೃಪ್ತನಾಗಿರುತ್ತಾನೆ ಅವನು ನೀರಡಿಕೆ ಯನ್ನು ನಿಜವಾಗಿಯೂ ಮರೆತು ಬಿಟ್ಟಂತೆ ಆಗಿರುತ್ತದೆ ಆತ್ಮಸುಖವನ್ನು ಅನುಭವಿ ಸುತ್ತಾ ಅವನು ಶೋಕ ಮತ್ತು ದುಃಖವನ್ನು ಮರೆತು ಬಿಡುತ್ತಾನೆ ಚಿತ್‌ಸ್ವರೂಪದ ಜ್ಞಾನದಿಂದ ಸಂಶಯವನ್ನು ನಷ್ಟಗೊಳಿಸಿರುವದರಿಂದ ಮೋಹವು ಅವನಿಗೆ ಎದುರಾಗುವ ದಿಲ್ಲ ಅವನು ಜಾಗೃತಾವಸ್ಥ, ಸ್ವಪ್ನಾವಸ್ಥ ಮತ್ತು ಸುಷುಪ್ತಾವಸ್ಥೆಗಳಿಂದ ಬೇರೆಯಾಗಿದ್ದು, ಆತ್ಮಜ್ಞಾನದ ಬಂಕದಲ್ಲಿ ಇರುತ್ತಾನೆ ಅಲ್ಲಿ ಆವಾಗ್ಗೆ ಅವನಿಗೆ ಮುಪ್ಪಿನಿಂದ ಜರ್ಜರವಾದ ವಾರ್ಧಕ್ಯವು ಬಂದರೆ, ಅದೇ (ವಾರ್ಧಕ್ಯವೇ) ಗದಗದ ನಡಗುತ್ತ ಅಲ್ಲಿಂದ ಓಡಿ ಹೋಗುತ್ತದೆ ಅವನ ಕಾರ್ಯ ಹಾಗೂ ಕಾರಣಗಳೆರಡೂ ಸುಳ್ಳಾಗಿರುತ್ತವೆ ಅವನಿಗೆ ಅವನ ದೇಹದ ಅರಿವೇ ಇರುವದಿಲ್ಲ ಆದ್ದರಿಂದ ಮರಣಕ್ಕೇ ಮರಣವು ಬರುತ್ತದೆ ಏಕೆಂದರೆ ಕಲಿಕಾಳನನ್ನೇ ಅವನು ಪ್ರಾಶನ

ಮಾಡಿರುತ್ತಾನೆ ಆಹಾ! ಇದರಂತೆಯೇ ಅವರು ಷಡ್ವಿಕಾರಗಳನ್ನು ಗದ್ದು (ಜಯ ಹೊಂದಿ) ಸಾಧು ಜನರು ಈ ಜಗತ್ತಿನಲ್ಲಿ ಸುಖರೂಪವಾಗಿ ಇರುತ್ತಾರೆ ಇದು ಅವರ ೨೨ ನೇ ಲಕ್ಷಣವಿರುತ್ತದೆ ತನ್ನ ಒಡೆಯ (ಬ್ರಹ್ಮಸ್ವರೂಪ) ನು ಅವನಿಗೆ ಎಲ್ಲ ಪ್ರಾಣಿಮಾತ್ರಗಳಲ್ಲಿ ಕಾಣಿಸುತ್ತಿರುತ್ತಾನೆ ಅಂದಮೇಲೆ ಯಾರಿಂದ ಮಾನವನ್ನು ಇಚ್ಛಿಸುವದು? ಆದ್ದರಿಂದ ನಿಜವಾಗಿಯೂ ಮಾನಾಭಿಮಾನವನ್ನು ತ್ಯಜಿಸಿ ಅತ್ಯಂತ ನಮ್ರತೆಯಿಂದ ಅವನು ವರ್ತಿಸುತ್ತಾನೆ ಮೊದಲು ದೇಹಾಭಿಮಾನಿಯಾಗಬೇಕು, ಆಮೇಲೆ ಆಶ್ಯತೆಯಿಂದ ಸನ್ಮಾನದ ಇಚ್ಛೆಯನ್ನು ಮಾಡಲು ಬರುವದೆಂಬ ನಿಯಮವಿದೆ (ನಡತೆಯಿದೆ) ಆದರೆ ಇಲ್ಲಿ ದೇಹದ ಸ್ಫೂರ್ತಿಯೇ ಇಲ್ಲದಿರುವದರಿಂದ ಮಾನಾಭಿಮಾನವು ನೇರವಾಗಿ ರಸಾತಳಕ್ಕೇ ಹೋಗುತ್ತದೆ ಇದಕ್ಕೆ 'ಅಮಾನಿತಾ' (ಅಂದರೆ ನಿರಭಿಮಾನತ್ವ) ಎಂದು ಅನ್ನುತ್ತಾರೆ ಇದೇ ಸಾಧುವಿನ ಇಪ್ಪತ್ಮೂರನೆಯ ಲಕ್ಷಣವಿರುತ್ತದೆ ತದನಂತರ, ಸಾಧುವು ಸನ್ಮಾನವನ್ನು ಕೊಡುವವನು ಹೇಗಿರುತ್ತಾನೆಂಬುದನ್ನು ಕೇಳು ಅವನು ಬ್ರಹ್ಮದೇವನಿಂದ ಸೊಣದ ವರಗೂ ನತಮಸ್ತಕನಾಗಿರುತ್ತಾನೆ ಚರಾಚರ ಪ್ರಾಣಿಗಳಲ್ಲಿ, ಎಲ್ಲಿದೆಯಲ್ಲಿಯೂ ಅವನು ಏಕನಿಷ್ಠನಿರುತ್ತಾನೆ ಅವನ ಬುದ್ಧಿಗೆ ಬ್ರಹ್ಮಸ್ವರೂಪದ–ವಿನಃ ಮತ್ತೆ ಬೇರೆನೂ ತೋಚುವದಿಲ್ಲ ಅವನು ಎಲ್ಲ ಪ್ರಾಣಿ ಮಾತ್ರಗಳಲ್ಲಿ ಬ್ರಹ್ಮಸ್ವರೂಪವನ್ನೇ ಕಾಣುತ್ತಾನೆ ಮತ್ತು ಎಲ್ಲರದುರಿಗೂ ಅವನು ಆನಂದದಿಂದ ದಿಂಡುರುಳುತ್ತಾನೆ. ದೇವರು, ಮನುಷ್ಯನು ಮತ್ತು ಕತ್ತೆಯು ಎಂಬ ಭೇದಭಾವನೆಯನ್ನು ಮನಸ್ಸಿನಲ್ಲಿ ತರುವದೇ ಇಲ್ಲ, (ಅವನ ಲಕ್ಷವು ದೇಹದ ಕಡೆಗಿರುವದಿಲ್ಲ ಎಲ್ಲರಲ್ಲಿಯೂ ಆತ್ಮಸ್ವರೂಪವನ್ನೇ ಕಾಣುತ್ತಾನೆ) ಎಲ್ಲರಿಗೂ ಅವನು ಸಂತೋಷದಿಂದ ನಮಸ್ಕರಿಸುತ್ತಾನೆ ಬಹಳ ಕುಶಲತೆಯಿಂದ ಅನೇಕ ಪ್ರಕಾರದ ಆಭರಣಗಳನ್ನು ಮಾಡಿದರೂ, ಅದರಲ್ಲಿಯ ಬಂಗಾರದಲ್ಲಿ ಹೇಗ ಬದಲಾವಣೆಯಾಗುವದಿಲ್ಲವೋ, ಹಾಗೆಯೇ ಬೇರೆ ಬೇರೆ ನಾಮ ಇಲ್ಲವೆ ರೂಪಗಳಲ್ಲಿ ಬೇರೆ ಬೇರೆ ರೀತಿಯಿಂದ ಬದಲಾವಣೆ ಮಾಡಬೇಕೆಂದು ಅವನು ಮನಸ್ಸಿನಲ್ಲಿ ಕೂಡ ಎಣಿಸುವದಿಲ್ಲ ಸಕ್ಕರೆಯಿಂದ ಬೇವಿನ ಹಣ್ಣನ್ನು ತಯಾರಿಸಿದಲ್ಲಿ (ಮಾಡಿದಲ್ಲಿ) ಅದರಲ್ಲಿ ಏನೂ ಕಹಿತನ ಬರುವದಿಲ್ಲ ಅದರಂತೆ ಹಂದಿಯಂತಹ ಕೀಳು ಜಾತಿಯ ಪ್ರಾಣಿಯಿದ್ದರೂ, ಅದರಲ್ಲಿಯ ಬ್ರಹ್ಮಸ್ವರೂಪವೇನೂ ಇಲ್ಲದಂತಾಗುವದಿಲ್ಲ ಸಮುದ್ರದಲ್ಲಿ ಅನೇಕ ತರಹದ ಅಕ್ರಾಳ ವಿಕ್ರಾಳ ಹಲ ಕಲ್ಲೋಳ ಉಂಟಾದರೂ, ಅದು ಕೇವಲ ಶುದ್ಧ ನೀರೇ ಇರುತ್ತದೆ ಅದರಂತೆ ಸಮಸ್ತ ಪ್ರಾಣಿಗಳಲ್ಲಿಯೂ ಕೂಡ ಬ್ರಹ್ಮಸ್ವರೂಪವೇ ನೆಲೆಸಿರುತ್ತದೆಯೆಂಬ ಭಾವನೆಯಿಂದ ಸಾಧುವು ಎಲ್ಲರನ್ನೂ ಸನ್ಮಾನದಿಂದ ಕಾಣುತ್ತಾನೆ ಇದೇ ಅವನ ಇಪ್ಪತ್ತನಾಲ್ಕನಯ ಲಕ್ಷಣವಿರುತ್ತದೆ ಇನ್ನು ಅವನ 'ಪರಬೋಧಕತೆ' ಎಂದರೆ ಇನ್ನೊಬ್ಬರಿಗೆ ಬೋಧಿಸುವ ಸಾಮರ್ಥ್ಯವು ಹೇಗಿರುತ್ತದೆಂಬುದನ್ನು ಕೇಳು ಯಾರ ಭಾವನ ಮತ್ತು ಶ್ರದ್ಧೆಯು ಹೇಗಿರುವದೋ,

ಹಾಗೆಯೇ ಉಪದೇಶಿಸುವದು ಅವನಿಗೆ ಅವಗತವಿರುತ್ತದೆ ಜ್ಞಾನಿಯಾಗಿ ಪಂಡಿತ ನಾಗದಿದ್ದರೆ, ಅವನಿಗೆ ಸ್ವರೂಪದ ಶ್ರದ್ಧೆಯ ಬಗ್ಗೆ ಉಪದೇಶಿಸುತ್ತಾನೆ ಕೆಲವರು ಜ್ಞಾನಾರ್ಜನೆಯನ್ನು ಮಾಡಿ ಹುಚ್ಚರಂತಾದರು, ಅವರ ಅಂತಃಕರಣದಲ್ಲಿ ತಾಳ್ಮೆಯಿಲ್ಲದಂತಾಯಿತೆಂದರೆ, ಅವರಿಗೆ ಸತ್-ಶಿಷ್ಯನ ಸದ್ಯದ ಸ್ಥಿತಿಯು ತಿಳಿಯ ದಂತಾಗುತ್ತದೆ ಇಂತಹ ಗುರುವು ಉಪದೇಶಿಸಲು ಅಪಾತ್ರನಿರುತ್ತಾನೆ ಕೆಲವರು ಜ್ಞಾನದ ಆಶ್ರಯವನ್ನು ಹೊಂದಿ, ಅಚ್ಚರಿಯಿಂದ ಸ್ತಬ್ಧರಾಗುತ್ತಾರೆ ಮತ್ತು ಕಟ್ಟಿಗೆ ಯಂತೆ ನಿಶ್ಚೇಷ್ಟಿತರಾಗುತ್ತಾರೆ ಇಂತಹ ಗುರುವಿಗೆ ಯೋಗ್ಯ ಉಪದೇಶ ಕೊಡುವ ಕಾರ್ಯವೇ ಇರುವದಿಲ್ಲ ಇನ್ನಿತರರು ಜ್ಞಾನಾರ್ಜನೆಯ ನಂತರ ಜಿಪುಣರಾಗುತ್ತಾರೆ ಅವರು ಜೀವ ಪ್ರಾಣಹೋದರೂ ಮಾತನಾಡುವದಿಲ್ಲ ಭಯದಿಂದ ಮೌನವನ್ನೇ ಆಚರಿಸುತ್ತಾರೆ ಒಂದಕ್ಷರವನ್ನು ಕೂಡ ಯಾವಾಗಲೂ ಮಾತನಾಡುವದಿಲ್ಲ ಯಾವನೊಬ್ಬನು ಲಕ್ಷಗಟ್ಟಲೆ ಹಣವನ್ನು ಸಂಪಾದಿಸಿ, ಅದನ್ನು ಭೂಮಿಯಲ್ಲಿ ಹೂಳಿಟ್ಟು, ಆಮೇಲೆ ಅದರ ಮೇಲೆ ಕಲ್ಲು ಹೇರುತ್ತಾನೆ ದಾನ ಕೊಟ್ಟರೆ ನಿಃಕಾರಣ ವಾಗಿ ದುಡ್ಡಿನ ಹಾನಿಯಾಗುವದೆಂದು ತಿಳಿದು, ಅವನು ಅದನ್ನು ಭೂಮಿಯ ಸಂಗಾತಿಯನ್ನಾಗಿ ಮಾಡುತ್ತಾನೆ ಅದರಂತೆ ಬಹಳ ಕಷ್ಟದಿಂದ ಆತ್ಮಜ್ಞಾನವನ್ನು ಸಂಪಾದಿಸಿ, ಅದನ್ನು ಯೋಗ್ಯನಾದವನಿಗೆ ದಾನಕೊಡದಿರುವದೇ ಜ್ಞಾನವಂತನ ಜಿಪುಣತನದ ಲಕ್ಷಣವಿರುತ್ತದೆ ಅಂದರೆ ವಂಚನೆ ಮಾಡುವದು ಮತ್ತಿನ್ನಿತರರು ಜ್ಞಾನವನ್ನು ಸಂಪಾದಿಸಿ ಬೋಧವನ್ನೂ ಮಾಡುತ್ತಾರೆ ಆದರೆ ಅವರ ಉಪದೇಶವು ಏನೂ ತಿಳಿಯುವದಿಲ್ಲ ಅಂದರೆ ಆ ಗುರುವಿನ ಜ್ಞಾನವು ಸತ್ವಹೀನವಾಗಿದೆಯೆಂದು ತಿಳಿಯಬೇಕು ಸತ್-ಶಿಷ್ಯನಿಗೆ ಅದರ (ಒಳ್ಳೆ ಹೊಲ) ಜ್ಞಾನ ಉಪಯೋಗವಾಗು ವದಿಲ್ಲ (ಒಳ್ಳೆ ಬೆಳೆ ಕೊಡುವ ಹೊಲದಲ್ಲಿ ಕೂಡ, ಬೀಜಕ್ಕೆ ಮೊಳಕೆಯೊಡೆಯುವದಿಲ್ಲ) ಕೆಲ ಕೆಲವರಂತೂ ತಮ್ಮ ದೀಕ್ಷೆ ಮತ್ತು ಅನುಭವವು ಶ್ರೇಷ್ಠವಾಗಿದೆಯೆಂದು, ಶ್ರೀಮಂತ ಜನರನ್ನೇ ಶಿಷ್ಯರನ್ನಾಗಿ ಮಾಡಿಕೊಳ್ಳುವ ಹವ್ಯಾಸದಲ್ಲಿರುತ್ತಾರೆ ಈ ಪ್ರಕಾರವಾಗಿ ಅವರು ಜ್ಞಾನವನ್ನು ಕ್ರಯಿಸುತ್ತಾರೆ ಶಿಷ್ಯನು ತನ್ನೆಡೆಗೆ ಮೋಹಿತ ನಾಗುವಂತಹ ನಿರೂಪಣೆಯನ್ನು ಮಾಡುತ್ತಾರೆ ಹೀಗೆ ಧನಲೋಭದಿಂದ ಎಲ್ಲವನ್ನೂ ಉಪದೇಶಿಸಿದನೆಂದರೆ, ಧನಲೋಭದಿಂದಲೇ ಅವನ ಜ್ಞಾನವು ನಿಃಸತ್ವವಾಗಿ ಬಿಡುತ್ತದೆ ಧಾನ್ಯದಿಂದ ತುಂಬಿದ ಹಗೆಯಲ್ಲಿ ನೀರು ಸೇರಿತೆಂದರೆ,ಅದರಲ್ಲಿಯ ಧಾನ್ಯವೇನೂ ಬಿತ್ತಲು ಉಪಯೋಗವಾಗುವದಿಲ್ಲ ಹಾಗೆಯೇ ಉಪದೇಶದಲ್ಲಿ ಧನೇಚ್ಛೆಯ ಪ್ರವೇಶ ವಾಯಿತೆಂದರೆ, ಅದರಿಂದ ಯಾರಿಗೂ (ಗುರು ಶಿಷ್ಯರಿಬ್ಬರಿಗೂ) ಸುಖವಾಗುವದಿಲ್ಲ. ಜ್ಞಾನಪಿಪಾಸೆಯಿಂದ ಶಿಷ್ಯನು ಮನದಲ್ಲಿ ಕೊರಗುತ್ತಾನೆ ಮತ್ತು ಗುರುವು ಗುರುತ್ವದಿಂದ ಗುರು ಗುರು ಎನ್ನುತ್ತಿರುತ್ತಾನೆ ಅದೇನು ನಿಜವಾದ ಉಪದೇಶವಲ್ಲ ಇದು ಮನೆಯಲ್ಲಿಯೇ ಮನೆಯವರು ಮರೆಯಾಗಿ ತಪ್ಪಿಸಿಕೊಳ್ಳುವದು ಯಾವನು ಶಬ್ದ

ಜ್ಞಾನದಲ್ಲಿ ಪಾರಂಗತನಿದ್ದು ಸದ್ವೈವ ಬ್ರಹ್ಮಾನಂದದಿಂದ ತಲೆದೂಗುತ್ತಿರುವನೋ, ಅವನೆ ಶಿಷ್ಯನಿಗೆ ಉಪದೇಶಿಸಲು ಯೋಗ್ಯನಿರುತ್ತಾನೆ ಮತ್ತು ಅವನೇ ನನ್ನ (ಶ್ರೀಕೃಷ್ಣನ) ಪ್ರತ್ಯಕ್ಷ ಮೂರ್ತಿಮಂತ ಸ್ವರೂಪನಾಗಿರುವನು ನಾನು (ಶ್ರೀಕೃಷ್ಣನು) ಹೇಗೆ ಅವತಾರ ತಾಳಿರುವೆನೋ ಹಾಗೆಯೇ ಅವನೂ ಅವತಾರಿಯಾಗಿರುತ್ತಾನೆ ಆದುದರಿಂದಲೇ ಅವನು ಚಿತ್‌ಸ್ವರೂಪದ ಆಭರಣಗಳಿಂದ, ಸತ್-ಶಿಷ್ಯನನ್ನು ಬಹಳ ಚತುರತನದಿಂದ ಅಲಂಕರಿಸುತ್ತಾನೆ 'ಅವನು' ಮತ್ತು 'ನಾನು' ಎಂದು ಶಬ್ದಗಳನ್ನು ನುಡಿಯುವಾಗ, ಅದು ಬಾಹ್ಯಾಕಾರವಾಗಿ ಭೇದವೆನಿಸುತ್ತದೆ ಆದರೆ ಅಂತರಂಗವನ್ನು ಪರಿಶೀಲಿಸಿ ನೋಡಿದಲ್ಲಿ ಇಬ್ಬರೂ ಒಂದೆಡೆಯಲ್ಲಿಯೇ ಜತೆಯಾಗಿರುತ್ತೇವೆ ಅವನೊಬ್ಬನೇ ಇದ್ದು ಅನೇಕರಿಗೆ ಉಪದೇಶಿಸುತ್ತಾನ ಅವನೊಬ್ಬನ ಜ್ಞಾನವು ಎಷ್ಟು ಒಳ್ಳೆ ಲಕ್ಷಣವುಳ್ಳದ್ದಾಗಿದೆ? ಮತ್ತೆ ಬೇರೊಬ್ಬರು ಇದ್ದಕಿದ್ದ ಹಾಗೆ ಅಜ್ಞಾನದಲ್ಲಿಯೇ ಉಳಿಯುತ್ತಾರೆ ಇಂದಮೇಲೆ ಈ ದೋಷವನ್ನು ಯಾರಿಗ ಕೊಡಬೇಕು? ಒಕ್ಕಲಿಗನು ಹೊಲದಲ್ಲಿ ಬೀಜವನ್ನು ಬಿತ್ತುತ್ತಾನೆ, ಕಸುವುಳ್ಳ ಭೂಮಿಯಿದ್ದರೆ, ಅದರಲ್ಲಿ ಸಾಕಷ್ಟು ಬೆಳೆ ಬರುತ್ತದೆ ಮತ್ತು ಅದೇ ಪಡು ಭೂಮಿಯಲ್ಲಿ ಅದಕ್ಕೆ (ಬೀಜಕ್ಕೆ) ಮೊಳಕೆ ಕೂಡ ಒಡೆಯುವದಿಲ್ಲ ಆದರೆ ಬೀಜವು ಮಾತ್ರ ಒಳ್ಳೆಯದೇ ಇರುತ್ತದೆ ಈ ಸಂದರ್ಭದಲ್ಲಿ ಭೂಮಿಯೇ ಒಳ್ಳೆಯದು ಇಲ್ಲವೆ ಕನಿಷ್ಠವಾಗಿರುತ್ತದೆ, ನಿಜವಾಗಿಯೂ ಬೀಜವು ಒಳ್ಳೆಯದೇ ಇರುತ್ತದ ಅದರಂತೆ ಭಾವಿಕ ಜನರಿಗೆ ಉಪದೇಶಿಸಿದ ಉಪದೇಶವು ಫಲ ದ್ರೂಪವಾಗುತ್ತದೆ ವಿಕಲ್ಪವುಳ್ಳ ಜನರು ಶುದ್ಧ ಪಡು ಭೂಮಿಯೇ ಆಗಿರುತ್ತಾರೆ ಯಾವ ಶಿಷ್ಯನು ಯಾವ ಪ್ರಕಾರವಾಗಿ ಅರ್ಥವನ್ನು ಗ್ರಹಣ ಮಾಡುವನೋ ಅದೇ ಪ್ರಕಾರವಾಗಿ ಅವನಿಗೆ ಉಪದೇಶಿಸಿ, ಪರಮಾರ್ಥಮಾರ್ಗವನ್ನು ಕ್ರಮಿಸಲು ಅವನನ್ನು ಉದ್ಯುಕ್ತ ನನ್ನಾಗಿ ಮಾಡುವದೇ, ಇನ್ನೊಬ್ಬರಿಗೆ ಉಪದೇಶಿಸುವ ಪ್ರಭಾವಶಾಲಿ ಗುಣವಿರುವದೋ ಅದೇ 'ಪರಬೋಧಕತೆ' ಎಂಬ ಇಪ್ಪತ್ತೈದನೆಯ ಹೆಸರಾದ ಗುಣವಿರುತ್ತದೆ ಸಾಧುವಿನ ಮಿತ್ರತ್ವವು ಸಹ ಹೀಗೆಯೇ ಉತ್ತಮವಾಗಿರುತ್ತದೆ ಅವನು ಎಲ್ಲರ ಸಂಗಡ ಬಹಳ ಹಳೆಯ ಮಿತ್ರತ್ವವಿದ್ದಂತೆ ವರ್ತಿಸುತ್ತಾನೆ ಎಲ್ಲರನ್ನೂ ಒಂದೇ ಸಮನಾಗಿ ಕಾಣು ತ್ತಾನೆ ಅವನು ಎಲ್ಲರ ಶ್ರೇಷ್ಠ ಗೆಳೆಯನಾಗಿರುತ್ತಾನ. ಅವನೇ ಎಲ್ಲರ ಆಪ್ತ ಬಾಂಧವನು ಅವನೇ ಎಲ್ಲರ ನಿಜವಾದ ಹತ್ತಿರದ ಮಿತ್ರನಿರುತ್ತಾನೆ, ಅವನು ಎಲ್ಲರಿಗಿಂತ ಬೇರೆಯಾಗಿದ್ದು ಗೆಳೆತನವನ್ನು ಬೆಳೆಸುತ್ತಾನೆ ಅವನು ತನ್ನ ಗುಪ್ತವಾದ ಮಾತನ್ನು ಕೂಡ ಆವನ ಕಿವಿಯಲ್ಲಿ ಮೆಲ್ಲನೆ ಹೇಳಲು ಓಂದು ಮುಂದ ನೋಡುವದಿಲ್ಲ ಹಾಗೂ ಅವನನ್ನು ಬೇರಯವನಂದು ತಿಳಿಯುವದಿಲ್ಲ ಅವನು ಜಗತ್ತನ್ನು ಆತ್ಮಭಾವನೆಯ ದೃಷ್ಟಿಕೋನದಿಂದ ನೋಡುತ್ತಾನೆ ಅವನು ಎಲ್ಲರನ್ನೂ ನಿಷ್ಕಪಟ ಬುದ್ಧಿಯಿಂದಲೇ ಕಾಣುತ್ತಾನೆ ಹಾಲು ಮತ್ತು ನೀರನ್ನು ಒಂದೆಡೆ ಬೆರಸಿದಲ್ಲಿ ಅವು ಹೇಗೆ ತದ್ರೂಪ ವಾಗಿ, ಅದರಲ್ಲಿಯ ಹಾಲು ಮತ್ತು ನೀರು ಎಂಬುವ ಭೇದವು ಇಲ್ಲದಂತಾಗುವದೋ,

ಹಾಗೆಯೇ ಸಾಧುವು ಎಲ್ಲರೊಡನೆ ಐಕ್ಯಭಾವನೆಯಿಂದ ಮತ್ತು ಮಿತ್ರತ್ವದಿಂದಿದ್ದು, ಎಲ್ಲರನ್ನೂ ತನ್ನಲ್ಲಿ ಒಂದುಗೂಡಿಸಿಕೊಳ್ಳುತ್ತಾನೆ ಅತೀವ ಮಿತ್ರತ್ವದ ನಿಜವಾದ ಲಕ್ಷಣವೇನೆಂದರೆ, ಇತರರ ದುಃಖವನ್ನು ಪರಿಹರಿಸಿ ಅವರಿಗೆ ಸುಖವನ್ನುಂಟು ಮಾಡುವದು ಅದರಂತೆ ಸಾಧುವು ಜೀವದ ದುಃಖವನ್ನು ಹರಣ ಮಾಡಿ, ಅವನಿಗೆ ಅತ್ಯಂತ ಸುಖವನ್ನೇ ಕೊಡುತ್ತಾನೆ ಸಾಧುವಿನ ಮಿತ್ರತ್ವದ ಪ್ರಭಾವವು ಬಹಳ ಅಚ್ಚರಿಯುಳ್ಳದ್ದಾಗಿದೆ ಅವನು ಎಲ್ಲರ ಪುರಾತನ ಮಿತ್ರನಾಗಿರುತ್ತಾನೆ ಆದುದರಿಂದ ಅವನು ಎಲ್ಲರ ಜತೆ ಅಧಿಕಾಧಿಕ ನಮ್ರತೆಯಿಂದ ವರ್ತಿಸುತ್ತಾನೆ ಅವನು ಯಾವಾಗಲೂ ನಿಷ್ಕಪಟನಾಗಿರುತ್ತಾನೆ ಬಂಧುವಿಗಿಂತ ಮಿತ್ರನು ಶ್ರೇಷ್ಠನಿರುವನು ಪುತ್ರನಿಗಿಂತ ಮಿತ್ರನು ಹೆಚ್ಚಿಗೆ ವಿಶ್ವಾಸನೀಯನಿರುತ್ತಾನೆ ಆ ಮಿತ್ರನೇ ಒಂದು ವೇಳೆ ವಿಶ್ವಾಸಘಾತ ಮಾಡಿದರೆ, ಅವನು ವಂಚಕನಿದ್ದಾನೆಂದು ತಿಳಿಯಬೇಕು ಯಾವನ ವೃತ್ತಿಯು, ಮನಸ್ಸಿನಿಂದ, ದ್ರವ್ಯದಿಂದ ಮತ್ತು ಕರ್ತವ್ಯಕರ್ಮದಿಂದ ನಿಷ್ಕಪಟ ವಾಗಿರುವದೋ, ಆ ವೃತ್ತಿಗೇನೇ ನಿಜವಾದ ಮಿತ್ರತ್ವವನ್ನುತ್ತಾರೆ ಈ ಗುರುತನ್ನೇ ನಿಜವಾಗಲೂ ಧ್ಯಾನದಲ್ಲಿಡಬೇಕು ಇದರಂತೆ ಮಿತ್ರತ್ವದ ಎಲ್ಲ ಲಕ್ಷಣಗಳನ್ನು ವಿಸ್ತರಿಸಿದೆನು ಇದೇ ಸಾಧುವಿನ ಇಪ್ಪತ್ತಾರನೆಯ ಲಕ್ಷಣವಿರುತ್ತದೆ ಇನ್ನು ಕರುಣೆಯು ಹೇಗಿರುತ್ತದೆಂಬುದನ್ನು ಕೇಳು ಪರೋಪಕಾರದ ಆಸೆಯನ್ನು ಮಾಡದೆ ಮತ್ತು ನಾನೊಬ್ಬ ದೊಡ್ಡ ದಯಾಳು ಇರುವನೆಂಬ ಅಹಂಕೃತಿಯನ್ನು ತಾಳದೆ, ದೀನ ಜನರ ದುಃಖವನ್ನು ಪರಿಹರಿಸುವದೇ ನಿಜವಾದ ಕರುಣೆಯಿರುತ್ತದೆ ಮನದಲ್ಲಿ ಧನೇಚ್ಛೆಯನ್ನಿಟ್ಟು ಹೇಗೆ ವೈದ್ಯನು ಔಷಧವನ್ನು ಕೊಡುವನು, ಇಲ್ಲವೆ ಸಂಭಾವನೆಯ ಮೇಲೆ ಕಣ್ಣಿಟ್ಟು ಪುರಾಣಿಕನು, ಪುರಾಣವನ್ನು ಹೇಳುವನು ಈ ಪ್ರಕಾರವಾದ ವರ್ತನೆಯು ಕೇವಲ ಸ್ವತಃದ ವಿಷಯ ಸ್ವಾರ್ಥಕ್ಕಾಗಿಯೇ ನಡೆದಿರುತ್ತದೆ ಆದರೆ ಸಾಧುವು ಹೀಗಿರುವದಿಲ್ಲ ಅವನು ನಿರಿಚ್ಛನೂ ನಿರಪೇಕ್ಷನಿದ್ದು ದಯಾಳು ಇರುತ್ತಾನೆ ಅವನು ದಯೆಯ ಸಾಗರನಾಗಿದ್ದು, ತನ್ನ ದೇಹ ಮನಸ್ಸು ಮತ್ತು ದ್ರವ್ಯದ ವ್ಯಯ ಮಾಡಿಯೂ ಅನಾಥರಿಗೆ ದಯೆ ತೋರಿಸುತ್ತಾನೆ ಹೀನದೀನರಾದವರನ್ನು ಸಂಕಟ ದಿಂದ ಪಾರು ಮಾಡುತ್ತಾನೆ ಅವನಿಗೆ ತನ್ನ ಸ್ವತಃದ ವಿಷಯವಾಗಿ ಎಷ್ಟು ಕನಿಕರವಿರುವದೋ, ಅದಕ್ಕಿಂತಲೂ ಹೆಚ್ಚಿಗೆ ಕನಿಕರ ಅನಾಥರ ಬಗ್ಗೆ ಇರುತ್ತದೆ ಉದ್ಧವಾ! ಹೀಗಿರುವದೇ ನಿಜವಾದ ದಯಾಳುತನದ ಲಕ್ಷಣವಿರುವದು ಇದೇ ಸಾಧುವಿನ ಇಪ್ಪತ್ತೇಳನೆಯ ಲಕ್ಷಣವಿರುತ್ತದೆಂಬುದನ್ನು ಲಕ್ಷದಲ್ಲಿಡು ಇನ್ನು 'ಕವಿ' ಎಂಬ ಶಬ್ದದ ವ್ಯಾಖ್ಯಾನವನ್ನು, ಚೆನ್ನಾಗಿ ಕಿವಿಗೊಟ್ಟು ಕೇಳು ವೇದ ಮತ್ತು ಶಾಸ್ತ್ರದಲ್ಲಿಯ ಇಂಗಿತಾರ್ಥವು ಯಾವನಿಗೆ ಕರತಲಾಮಲಕವಾಗಿರುವದೋ ಮತ್ತು ಯಾವನು ಬ್ರಹ್ಮಾನಂದದಿಂದ ತಲೆದೂಗುತ್ತಿರುವನೋ, ಅವನೇ ನಿಜವಾಗಲೂ 'ಕವಿ' ಯಾಗಿರುತ್ತಾನೆ ಉಪನಿಷತ್ತಿನ ಮತಿತಾರ್ಥವು ಯಾವನ ಮುಖದ ಆಶ್ರಯವನ್ನು

ಬಯಸುತ್ತದೆಯೋ ಮತ್ತು ಯಾವನಿಂದ ಶಬ್ದಜ್ಞಾನಕ್ಕೆ ಪ ಅನುಭವಜ್ಞಾನಕ್ಕೆ ಸತ್ಯತ್ವವು ಬಂದಿದೆಯೋ, ಅವನೇ ಸುಪ್ರಸಿದ್ಧ 'ಕವಿ'ಯಾಗಿರುವನು 'ಕವಿ' ಈ ಶಬ್ದದ ಸ್ಪಷ್ಟೀಕರಣದಿಂದ ಇಪ್ಪತ್ತೆಂಟನೆಯ ಲಕ್ಷಣವು ಪೂರ್ಣವಾಯಿತು

## ಪ್ರಕರಣ ೧೮

ಸೂರ್ಯೋದಯವಾದ ತಕ್ಷಣ ಚಂದ್ರನನ್ನೊಳಗೊಂಡು ಎಲ್ಲ ನಕ್ಷತ್ರಗಳು ಮಾಯವಾಗುತ್ತವ ಅದರಂತೆ ನನ್ನ ಭಕ್ತಿಯು ವೃದ್ಧಿಂಗತವಾದ ತಕ್ಷಣ, ಹಾಂ ಹಾಂ ಎನ್ನುವದರಲ್ಲಿ ಅವಿದ್ಯೆಯ ನಾಶವಾಗುತ್ತದೆಯೆಂದು ತಿಳಿಯಬೇಕು ಅವಿದ್ಯೆಯ ನಾಶದೊಂದಿಗೆ ಎಲ್ಲ ಧರ್ಮಾಧರ್ಮದ ನಾಶವೂ ಕೂಡ ಆಗುತ್ತದೆ ಯಾವ ಪ್ರಕಾರವಾಗಿ ಗರ್ಭವತಿಯ ಮರಣದೊಂದಿಗೆ ಅವಳ ಗರ್ಭವೂ ಮೃತವಾಗುವದೋ, ಹಾಗೆಯೇ ನನ್ನ ಭಕ್ತಿಯು ವಿಕಸಿತವಾಯಿತೆಂದರೆ, ತತ್ಕಾಲ ಅವಿದ್ಯೆಯ ನಾಶವಾಯಿತೆಂದು ತಿಳಿಯಬೇಕು ಅವಿದ್ಯೆಯು ನಷ್ಟವಾಯಿತೆಂದರೆ, ಎಲ್ಲ ಧರ್ಮದ ನಾಶವೂ ತಾನಾಗಿಯೇ ಆಗುತ್ತದೆ ಈಗ ನೀನು, ಅಂತಹ ನಿನ್ನ ಭಕ್ತಿಯೊದರೂ ಎಂತಹದು? ಎಂದು ಅನ್ನಬಹುದು ಅದೇ ನಾನು ಹಿಂದಕ್ಕೆ ನಿನಗ ವಿಸ್ತರಿಸಿ ಹೇಳಿದ ನನ್ನ ನಾಲ್ಕನೆಯ ಭಕ್ತಿಯಿರುವದೆಂಬುದನ್ನು ಲಕ್ಷ್ಯದಲ್ಲಿಡು ಅದರ ಸಹಾಯದಿಂದಲೇ ಅವಿದ್ಯೆಯ ನಾಶವಾಗುತ್ತದೆ ಬೇರೆ ಆರ್ತ (ರೋಗದಿಂದ ಕ್ಲೇಶ ಹೊಂದಿದವರು), ಜಿಜ್ಞಾಸು (ಮೋಕ್ಷವನ್ನು ಇಚ್ಛಿಸುವವರು) ಮತ್ತು ಅರ್ಥಾರ್ಥಿ (ಜ್ಞಾನದ ಇಚ್ಛೆಯುಳ್ಳವರು), ಇವರೆಲ್ಲರೂ ಮಾಡುವ ಭಕ್ತಿಯು ಅವಿದ್ಯಾತ್ಮಕವಿರುತ್ತದೆ ಆದ್ದರಿಂದ ನನ್ನ ನಾಲ್ಕನಯ ಭಕ್ತಿಯೇ ಶ್ರೇಷ್ಠವಾಗಿದ ಆ ಭಕ್ತಿಯಲ್ಲಿ ಅವಿದ್ಯೆಯ (ಅಜ್ಞಾನ) ಮೈಲಿಗೆಯೂ ಕೂಡ ಇರುವದಿಲ್ಲ ಮತ್ತು ನನ್ನ ಭಜನೆಯಂತೂ ಕುಳಿತಲ್ಲಿಯೇ ಸಹಜವಾಗಿ ಆಗುತ್ತಿರುತ್ತದೆ ಉದ್ಧವಾ! ನಿಜವಾಗಿಯೂ ಅದೇ ನನ್ನ ಪ್ರೀತಿಯ ಭಕ್ತಿ ಇರುತ್ತದೆ ಇದನ್ನು ಕಂಡು ಅವಿದ್ಯೆಯು ಭಯಗ್ರಸ್ತವಾಗುತ್ತದೆ ಮತ್ತು ಎಲ್ಲ ಧರ್ಮಗಳು ಗದಗದ ನಡುಗುತ್ತವೆ ಆ ಭಕ್ತಿಯ ಶಿಖರವನ್ನು ಕಂಡು ಅವಿದ್ಯೆಯು ಅದರ ಭಯದಿಂದಲೇ ಪ್ರಾಣವನ್ನೇ ಬಿಡುತ್ತದೆ ಮತ್ತು ಎಲ್ಲ ಧರ್ಮದ ಅಭಿರುಚಿಯು ಘಾಯಗೊಳ್ಳದೇ ಮಾಯವಾಗುತ್ತದೆ ಹೀಗೆ ತನ್ನ ಭಕ್ತಿಯ ತರಹವನ್ನು ಒಳ್ಳೇ ಪ್ರೀತಿಯಿಂದ ಶ್ರೀಕೃಷ್ಣನು ಹೇಳಿದನು ಇನ್ನು ಯಾವ ರೀತಿಯಿಂದ ಭಕ್ತಿಯನ್ನು ಶೃಂಗರಿಸುವನೋ, ಆ ಭಕ್ತನು ಹೇಗೆ ಭಜನೆ ಮಾಡುವನೆಂಬುದನ್ನು ಕೇಳು ನನ್ನ ಅನುಸಂಧಾನವಿಲ್ಲದೆ, ಸ್ನಾನ, ಸಂಧ್ಯಾವಂದನೆ, ಜಪ, ಹೋಮ

ಮತ್ತು ದಾನ ಮಾಡುವದೆಲ್ಲವೂ ಅಧರ್ಮವೇ ಹೊರತು ನನ್ನ ಭಜನೆಯಲ್ಲ ನಿಜವಾದ ಪ್ರೇಮ ಮತ್ತು ಅಭಿರುಚಿಯು ಪರಪುರುಷನ ಹತ್ತಿರವಿದ್ದು, ತನ್ನ ಪತಿಯ ಹತ್ತಿರ ಹೊಟ್ಟೆ ಪ್ರೀತಿಯ ನಾಟಕವಾಡುವ ಸ್ತ್ರೀ ಹೇಗೆ ಪತಿವ್ರತೆಯಲ್ಲವೋ, ಹಾಗೆಯೇ ವಿಷಯಾಸಕ್ತಿಯಿಂದ ನನ್ನ ಧ್ಯಾನ ಮತ್ತು ಅನುಷ್ಠಾನ ಮಾಡುವವನ ಭಕ್ತಿಯೂ ಸಹ ವ್ಯಭಿಚಾರಿ ಭಕ್ತಿಯಾಗಿರುತ್ತದೆ ಇದೇನು ಪವಿತ್ರ ಭಕ್ತಿಯಲ್ಲ ದೇಹ, ವಾಣಿ, ಮನಸ್ಸಿನಿಂದ ಭಕ್ತಿಯಲ್ಲಿ ನಿಮಗ್ನನಾಗಿರುವದು, ಹಗಲಿರುಳಿನ ಅರಿವೇ ಇಲ್ಲದೇ ಭಜನೆಯನ್ನು ಮಾಡುವದೇ ಭಕ್ತಿಯ ನಿಜವಾದ ರೀತಿಯಾಗಿರುತ್ತದೆ ಯಾವನ ಮುಖದಲ್ಲಿ ಜಪವಿಲ್ಲದೇ ನಾಮವಿರುತ್ತದೆಯೋ, ಧಾರಣೆಯಿಲ್ಲದೆಯೇ ಯಾವನ ಮನಸ್ಸಿನಲ್ಲಿ ಧ್ಯಾನವಿರುತ್ತದೆಯೋ ಮತ್ತು ಸದೈವ ಎಲ್ಲ ಕರ್ಮಗಳನ್ನು ಸಂಕಲ್ಪವಿಲ್ಲದೆಯೇ ನನಗೆ ಅರ್ಪಿಸುವನೋ, ಪ್ರಾಣಾಯಾಮವಿಲ್ಲದೆ, ವಾಯುವನ್ನು ತಡೆಗಟ್ಟುವನೋ ಮತ್ತು ಅಮರ್ಯಾದಿತ ಸ್ವರೂಪದ ಬೋಧವು ಯಾವನಿಗಿರುವದೋ ಹಾಗೂ ವಿಷಯಾನಂದವಿಲ್ಲದೆಯೇ, ಸದೈವ ಸರ್ವಕಾಲ ಆನಂದಿತನಾಗಿರುವನೋ, ಅವನೇ ನನ್ನ ಶ್ರೇಷ್ಠ ಭಕ್ತನಾಗಿರುತ್ತಾನೆ ಭಕ್ತನೆನ್ನಿಸಿಕೊಳ್ಳುವಾಗ ಒಳ್ಳೇ ಸುಖವಾಗುತ್ತದೆ ಆದರೆ ಭಜನ ಮಾರ್ಗದಲ್ಲಿ ಹೃದಯವು ಹಿಂಡಿ ಹಪ್ಪೆಯಾಗುತ್ತದೆ ಅಕೃತ್ರಿಮ ಭಕ್ತಿಯ ಉಗಮವಾದ ಕೂಡಲೇ ಉದ್ಧವಾ! ನನ್ನ ದರ್ಶನದ ಲಾಭವಾಗುತ್ತದೆ ಈ ಪ್ರಕಾರವಾಗಿ ಯಾವನು ಭಜಿಸುವನೋ, ಅವನು ನನ್ನಲ್ಲಿ ಮತ್ತು ನಾನು ಅವನಲ್ಲಿ ಹೀಗೆ ವಾಸ ಮಾಡುತ್ತೇವೆ ಎಲ್ಲ ಭಕ್ತರಲ್ಲಿ ಅವನೇ ಉತ್ತಮ ಭಕ್ತನಾಗಿರುತ್ತಾನೆ ಮತ್ತು ಅವನಿಗೆ ನಿಜವಾದ ಸಾಧು ಎನ್ನುತ್ತಾರೆ ಪುರುಷರಲ್ಲಿ ಅವನೇ ಉತ್ತಮ ಪುರುಷನು. ಸಾಧುಗಳಲ್ಲಿ ಅವನೇ ಅತಿಶಯ ಉತ್ತಮ ಸಾಧು ಉದ್ಧವಾ! ನನ್ನ ವಿಶ್ರಾಂತಿಯ ಅಕೃತ್ರಿಮ ಸ್ಥಾನವೂ ಕೂಡ ಅವನೇ ಇರುತ್ತಾನೆ ಅವನಿಗೋಸ್ಕರ ನಾನು ನನ್ನ ಸರ್ವಾಂಗವನ್ನು ಶಯ್ಯೆಯನ್ನಾಗಿ ಮಾಡುತ್ತೇನೆ ಮತ್ತು ಪ್ರತಿ ಹೆಜ್ಜೆಗೂ ನಾನು ಅವನ ಮೇಲಿಂದ ನನ್ನ ಜೀವವನ್ನು ನಿವಾಳಿಸುತ್ತೇನೆಂಬುದನ್ನು ನಿನ್ನ ಲಕ್ಷ್ಯದಲ್ಲಿರಲಿ ಜೀವಕ್ಕೆ ಪ್ರಾಣವು ಹೇಗೆ ಪ್ರಿಯವಾಗಿರುತ್ತದೆಯೋ, ಹಾಗೆಯೇ ಅವನು ನನಗೆ ಅತ್ಯಂತ ಪ್ರಿಯನಾಗಿರುತ್ತಾನೆ ಇಂತಹ ಉತ್ತಮ ಭಕ್ತನ ಗುಣಗಾನವನ್ನು ಮಾಡುವಾಗ ದೇವನೂ (ಶ್ರೀಕೃಷ್ಣ) ಕೂಡ ಪ್ರೀತಿಯಿಂದ ಹುಚ್ಚನಾದನು ಅವನ (ಶ್ರೀಕೃಷ್ಣ) ತಾಳ್ಮೆಯು ತಪ್ಪಿತು, ಅವನ ಅಂತಃಕರಣ ವನ್ನು ಅವನಿಗೆ ತಡೆಗಟ್ಟಲು ಅಸಾಧ್ಯವಾಯಿತು ಅವನು ಉದ್ಧವನನ್ನು ಎತ್ತಿ ಅಪ್ಪಿಕೊಂಡು ಆನಂದದಿಂದ ಕುಣಿಯಲಾರಂಭಿಸಿದನು, ಆವಾಗ್ಗೆ ಆಶ್ಚರ್ಯದಿಂದ ಉದ್ಧವನ ಕಂಠವೂ ಗದ್ಗದಿತವಾಯಿತು ತಾನು ದೇವರು, ಅವನು ಭಕ್ತನೆಂಬ ಭೇದವನ್ನು ಶ್ರೀಕೃಷ್ಣನು ಮರೆತುಬಿಟ್ಟನು ಮತ್ತು ಅವನು ದೇವನು, ತಾನು ಭಕ್ತನೆಂಬ ಭಾವನೆಯು ಉದ್ಧವನಲ್ಲಿಯೂ ಉಳಿಯಲಿಲ್ಲ ಇಂತಹ ಭಕ್ತಿ ಸಾಮ್ರಾಜ್ಯದಲ್ಲಿ

ಇಬ್ಬರೂ ಒಂದುಗೂಡಿದರು ಆ ವೇಳೆಗೆ ಶ್ರೀಕೃಷ್ಣನಿಗೆ ಭಕ್ತನ ಕಥೆಯನ್ನು ಹೇಳುವ ಕನಿಕರ ಉಂಟಾಯಿತು ಇಂತಹ ಉತ್ತಮ ಭಕ್ತನ ಕಥೆಯನ್ನು ಹೇಳುವದು ಅವನಿಗೆ ಅತ್ಯಂತ ರುಚಿಸುತ್ತದೆ ಅವನಿಗೆ ಅದರ ಅಭಿರುಚಿಯು ಬಹಳವಿರುವದ ರಿಂದಲೇ, ಅವನು ಅದನ್ನೇ ಪುನಃ ಪುನಃ ಹೇಳುತ್ತಿದ್ದನು

## ಪ್ರಕರಣ ೧೯

ದೃಢತರವಾದ ಆಸ್ತಿಕ್ಯದಿಂದ ಸಮಾಧಾನ ಹೊಂದುವದೇ ನಿಜವಾದ ಶ್ರದ್ಧೆ ಯಾಗಿರುತ್ತದೆಯೆಂದು ತಿಳಿ ಮತ್ತು ಅವನು ಮನಸ್ಸನ್ನು ಚಂಚಲಗೊಳಿಸದೆ ಅತೀ ಉತ್ಸಾಹಪೂರ್ವಕ ಕಥಯನ್ನು ಕೇಳುತ್ತಾನೆ ಇಂತಹ ಶ್ರೋತೃ ವರ್ಗವು, ವ್ಯಾಖ್ಯಾತನ ಭಾಷಣವನ್ನು ಆದರದಿಂದ ಮತ್ತು ಮನಸ್ಸಿನಿಂದ ಕಿವಿಗೊಟ್ಟು ಕೇಳುತ್ತದೆ ಅವನು ಅದರಿಂದ ತನ್ನ ಬುದ್ಧಿ ಸಾಮರ್ಥ್ಯವನ್ನು ಬೆಳೆಯಿಸುತ್ತಾನೆ ಮತ್ತು ಅವನು ಭಾವಾರ್ಥದಿಂದ ತನ್ನನ್ನು ಕಥಗೆ ಮಾರಿಕೊಳ್ಳುತ್ತಾನ ಹಾಲನ್ನು ಕುಡಿಯಬೇಕೆಂಬ ಅವಕಾಶವನ್ನು ಬೆಕ್ಕು ಹೇಗೆ ಕಣ್ಣಿಟ್ಟು ಸಾಧಿಸುವದೋ, ಹಾಗೆಯೇ ಕಥಯಲ್ಲಿಯ ಸಾರಭಾಗವನ್ನು ಗ್ರಹಣ ಮಾಡುವದಕ್ಕೋಸ್ಕರ ಯಾವಾಗಲೂ ತತ್ಪರರಾಗಿರಬೇಕು ರತ್ನಖಚಿತ ಕರ್ಣಕುಂಡಲದಿಂದ ಕಿವಿಯನ್ನು ಸುಶೋಭಿತವಾಗಿ ಮಾಡಿದರೆ, ಅದೇನು ಕಿವಿಯ ಭೂಷಣವಾಗುವದಿಲ್ಲ ಹರಿಕಥಾಮೃತಸಾರವನ್ನು ಕೇಳುವದೇ ಕಿವಿಯ ಭೂಷಣವಾಗಿದೆ ಕಥೆಯನ್ನು ಕೇಳುವದರಿಂದಲೇ ಕಿವಿಯ ಸಾರ್ಥಕವಾಗುತ್ತದೆ ಒಂದು ವೇಳೆ ಭಕ್ತನೇ ಭಾಷಣಕಾರನಾದರೂ ಮತ್ತು ಪುರಾಣ ಗಳನ್ನೋದಿ ಪಂಡಿತನಾಗಿದ್ದರೂ, ಅವನು ಬಹಳ ಪ್ರೇಮದಿಂದ ಆದರಪೂರ್ವಕವಾಗಿ ಸಾಧುವಿನ ಮುಖದಿಂದ ಹರಿಕಥೆಯನ್ನು ಕೇಳುತ್ತಾನೆ ಯಾವನು ಹರಿಕಥೆಯನ್ನು ಎಚ್ಚರಿಕೆಯಿಂದ ಕಿವಿಗೊಟ್ಟು ಕೇಳುವನೋ, ಅವನೇ ಅರ್ಥವನ್ನು ಮನನ ಮಾಡಲು ಅರ್ಹನಿರುತ್ತಾನೆ ಕಥಯ ನಿರೂಪಣವು ಮುಕ್ತಾಯವಾದರೂ ಅವನ ಮನದಲ್ಲಿಯ ಮನನಾಭ್ಯಾಸವು ಮುಗಿಯುವದಿಲ್ಲ ಹೀಗ ಮನನಾಭ್ಯಾಸವು ದೃಢವಾಯಿತೆಂದರೆ ನನ್ನ (ಕೃಷ್ಣನ) ಧ್ಯಾನವು ಸಾಧ್ಯವಾಗುತ್ತದೆ ಆಮೇಲೆ ಅದು ಸಗುಣ ಧ್ಯಾನವೇ ಇರಲಿ, ಇಲ್ಲವೇ ನಿರ್ಗುಣ ಧ್ಯಾನವೇ ಇರಲಿ ಧ್ಯಾನಕ್ಕೆ ಪ್ರಾಮುಖ್ಯವಾಗಿ ಅಭಿರುಚಿಯೇ ಕಾರಣವಾಗಿದೆ ಆದರೆ ಉದ್ಧವಾ! ಎಲ್ಲಿಯವರೆಗೆ, ಧ್ಯೇಯ, ಧ್ಯಾನ ಮತ್ತು ಧ್ಯಾಸ ಮಾಡುಪವನು, ಈ ಮೂವರೂ ಒಂದುಗೂಡುವದಿಲ್ಲವೋ, ಅಲ್ಲಿಯವರೆಗ ನಿಜ ವಾಗಿಯೂ ಧ್ಯಾನಾವಸ್ಥೆಯಿರುವದೆಂದು ತಿಳಿ ಯಾವನ ಅಂತರಂಗದಲ್ಲಿ ಧ್ಯಾನದ ಅಭಿರುಚಿಯಿರುವದೋ, ಯಾವನ ಮನಸ್ಸಿನಲ್ಲಿ ನನ್ನ ಬಗ್ಗೆ ಪ್ರೀತಿಯಿರುವದೋ

ಅವನಿಗೆ ಉದ್ಧವಾ! ಕೋಟ್ಯಾವಧಿ ಜನ್ಮ ಜನ್ಮಾಂತರದ ಭಾಗ್ಯವಿದ್ದಾಗಲೇ, ಇಷ್ಟೊಂದು ಲಾಭ ಉಂಟಾಗುತ್ತದೆ ನಿಷ್ಕಾಮ ಮನಸ್ಸಿನಿಂದ ಜನ್ಮಜನ್ಮಾಂತರದಲ್ಲಿ ಸಾಧನವನ್ನು ಮಾಡಿದ್ದಾದರೆ, ನನ್ನ(ಶ್ರೀಕೃಷ್ಣನ)ಧ್ಯಾನವು ದೃಢತರವಾದ ವಿಶ್ವಾಸದಿಂದ ಸಾಧ್ಯವಾಗುತ್ತದೆಯೆಂದು ತಿಳಿ ನನ್ನ (ಶ್ರೀಕೃಷ್ಣನ) ಧ್ಯಾನವು ದೃಢವಾಯಿತೆಂದರೆ, ಅನನ್ಯ ಭಾವನೆಯಿಂದ ನನ್ನ ಭಜನೆಯಾಗಲು ಪ್ರಾರಂಭವಾಯಿತೆಂದರೆ, ಅವನು ತನ್ನ ಎಲ್ಲ ಪದಾರ್ಥಸಹಿತವಾಗಿ ನನಗೆ ಆತ್ಮ ಸಮರ್ಪಣೆಯನ್ನು ಮಾಡುತ್ತಾನೆ ವೇದೋಕ್ತ ಆಚರಣೆಯಿಂದ ಇಲ್ಲವೆ ಲೋಕಾಚಾರದಂತಿದ್ದ ನಡತೆಯಿಂದ ಇಲ್ಲವೆ ದೈಹಿಕ ನಡತೆಯಿಂದ, ಅಚ್ಚರಿಯುಂಟಾಗುವಂಥ ಲಾಭವಾದರೂ ಭಾವಿಕ ಭಕ್ತನು ಅದನ್ನು ಸ್ವೀಕರಿಸುವದಿಲ್ಲ ವೈದಿಕ ಲಾಭದಲ್ಲಿಯಂತೂ, ಸ್ವರ್ಗದಿಂದ ಸತ್ಯಲೋಕದ ವರೆಗೂ ಇರುವ ಉತ್ತಮ ಉಪಭೋಗದ ಲಾಭವೇ ಆಗುತ್ತದೆ ಆದರೆ ಅಂತಹ ಭೋಗಕ್ಕೂ ಭಕ್ತನು ಕೈ ಮುಟ್ಟುವದಿಲ್ಲ ಅವನು ಆನಂದದಿಂದ ಭಜನೆ ಮಾಡುತ್ತ ಅದರಲ್ಲಿಯೇ ಸಂತುಷ್ಟನಾಗಿರುತ್ತಾನೆ ಲೌಕಿಕದಲ್ಲಿಯ ತರತರಹದ ಲಾಭಗಳೆಂದರೆ, ಕಲ್ಪತರು, ಕಾಮಧೇನು ಮತ್ತು ಚಿಂತಾಮಣಿಗಳಾಗಿರುತ್ತವೆ ಆದರೆ ಭಕ್ತನು ಅವುಗಳನ್ನೂ ಕೂಡ ಕೃಷ್ಣಾರ್ಪಣ ಮಾಡಿ ಆನಂದದಿಂದ ಹರಿಭಜನೆಯನ್ನು ಮಾಡುತ್ತ ಅದರಲ್ಲಿಯೇ ತೃಪ್ತನಾಗಿರುತ್ತಾನೆ ಮನೆಯಲ್ಲಿ ಗಜಾಂತಲಕ್ಷ್ಮಿಯು ಪ್ರವೇಶವಾಯಿತೆಂದರೆ, ಉಚ್ಚ ಕೋಟಿಯ ದೈಹಿಕ ಲಾಭವಾದಂತೆಯೇ ಸರಿ ಆದರ ಭಕ್ತನಿದ್ದವನು ಅದನ್ನೂ ಕೃಷ್ಣಾರ್ಪಣ ಮಾಡುತ್ತಾನೆ ಮತ್ತು ನಿತ್ಯ ತೃಪ್ತಿಯಿಂದ ಹರಿಭಜನೆಯಲ್ಲಿ ಸುಖದಿಂದ ಮಗ್ನನಾಗುತ್ತಾನ ಬ್ರಹ್ಮಪದಪ್ರಾಪ್ತಿಯವರಗೆ ಆಗುವ ಎಲ್ಲ ಲಾಭಗಳನ್ನೂ ಗೌಣವೆಂದು ತಿಳಿದು ನನ್ನ ಭಕ್ತಿಗೆ ಯಾವನು ತನ್ನ ಪ್ರಾಣವನ್ನೇ ಮಾರಿಕೊಂಡನೋ, ಅವನು ಎಲ್ಲವನ್ನೂ ನನಗ ಅರ್ಪಣೆ ಮಾಡಿದಂತೆಯೇ ಯಾವನು ಸೇವಗಾಗಿ ತನ್ನ ಪ್ರಾಣವನ್ನು ಸಮರ್ಪಿಸುವನೋ, ಅವನು ಒಂದರ್ಧಕ್ಷಣ ಕೂಡ ವ್ಯರ್ಥವಾಗಿ ಕಳೆಯುವದಿಲ್ಲ ಅವನು ನನ್ನ ಕಥೆ, ನನ್ನದೇ ಧ್ಯಾನ ಮತ್ತು ನನ್ನದೇ (ಶ್ರೀಕೃಷ್ಣ ಭಗವಂತ) ಮಹೋತ್ಸವವನ್ನು ಮಾಡುತ್ತಿರುತ್ತಾನೆ

## ಪ್ರಕರಣ ೨೦

ಮೂರ್ತಿಯನ್ನು ತಯಾರಿಸುವದಾದರ ಅದನ್ನು ಅತ್ಯುತ್ತಮ ರೀತಿಯಿಂದ ತಯಾರಿಸಬೇಕು ಮೂರ್ತಿಯು ಸರಳ, ಸುಂದರ, ಉಚ್ಚ್ಯಕಟ್ಟಾದ ಮೈಕಟ್ಟುಳ್ಳದ್ದು ಮತ್ತು ಮನಸ್ಸನ್ನು ಮರುಳು ಮಾಡುವಂತಹದಾಗಿರಬೇಕು ಅದು ದೋಷರಹಿತವಿದ್ದು, ಮುಗ್ಧವಾಗಿದೆಯೆಂದು ಸಾಧು ಜನರು ಹೊಗಳಬೇಕು ಮೂರ್ತಿಯು

ಅತ್ಯಂತ ರೇಖೀವ ಇರಬೇಕು ಅದು ಬಡಕಲಾಗಿರಬಾರದು ಮತ್ತು ಅಧೋಮುಖಿ ಯಾಗಿರಬಾರದು ಅದು ಅಡಸಲು ಬಡಸಲಾಗಿದ್ದು ಊರ್ಧ್ವಮುಖಿಯಾಗಿರ ಬಾರದು ಅದರ ಮೋರೆಯು ಅಳಬುರಕ ಇಲ್ಲವೆ ಉಗ್ರಸ್ವರೂಪದ್ದಾಗಿರಬಾರದು ಲಠ್ಠ ಮತ್ತು ನಿದ್ರೂವವಾಗಿರುವ ಮೂರ್ತಿಯನ್ನು ಮಾಡಬಾರದು ಕಣ್ಣುಗಳ ದೃಷ್ಟಿಯು ಅಧೋರ್ಧ್ವವಾಗಿರಕೂಡದು ಶರೀರವು ಚೆನ್ನಾಗಿದ್ದು ನಾಸಿಕವು ಮಾತ್ರ ಮೊಂಡಾಗಿರುವದು ಇಲ್ಲವೆ ಮೇಲಿನ ಭಾಗವು ದಷ್ಟಪುಷ್ಟವಾಗಿದ್ದು ಕಾಲುಗಳು ಕಡ್ಡಿಯಾಗಿರುವದು, ಲಠ್ಠ, ಪೊಳ್ಳು, ಪ್ಯೆ ಮತ್ತು ನಗ್ನ ಇಂತಹ ಆಕಾರದ ಮೂರ್ತಿಯು ಇರಕೂಡದು ಅಲ್ಲದೆ ಅತಿಶಯ ಸ್ಥೂಲಾಕಾರದ ಮೂರ್ತಿಯೂ ಸಹ ಇರಬಾರದು ಮೂರ್ತಿಯು ಮುದ್ದಾಗಿದ್ದು ಅದರ ಕಣ್ಣುಗಳು ಸುಂದರ ವಾಗಿರಬೇಕು ಎಲ್ಲ ಅವಯವಗಳು ತುಂಬಿಕೊಂಡಿದ್ದು, ವದನವು ಪ್ರಸನ್ನವಾಗಿರ ಬೇಕು ಅಂಗ-ಪ್ರತ್ಯಂಗಗಳಲ್ಲಿ ಎಲ್ಲಿಯೂ ದೋಷವು ಕಾಣಿಸಬಾರದು ಅದು ಉತ್ತಮ ಚಿಹ್ನಗಳಿಂದ ಯುಕ್ತವಾಗಿ, ಒಳ್ಳೆ ಲಕ್ಷಣವುಳ್ಳದ್ದಾಗಿಯೂ ಮತ್ತು ಕೈಯಲ್ಲಿ ಆಯುಧವನ್ನು ಧರಿಸಿದ್ದಾಗಿರಬೇಕು ಅದನ್ನು ಕಂಡ ಕೂಡಲೇ ದೇಹ ಮತ್ತು ಮನಸ್ಸು ಹರ್ಷಭರಿತವಾಗಬೇಕು ಆ ಮೂರ್ತಿಯ ದರ್ಶನವಾದ ತಕ್ಷಣ ಹಸಿವೆ ನೀರಡಿಕೆಗಳು ಹಿಂಗಬೇಕು ಈ ಪ್ರಕಾರವಾಗಿ ಮೂರ್ತಿಯ ಮುದ್ದು ಮುಖವು ಮುಗ್ಧ ಮತ್ತು ಪ್ರಸನ್ನವಾಗಿರಬೇಕು ಅದರಂತೆ ಮೂರ್ತಿಯು ಕೋಮಲ ವಾಗಿದ್ದು ಅದರ ಮುಖದಲ್ಲಿ ಕೃಪಾಕಟಾಕ್ಷದ ಭಾವವಿರಬೇಕು ಯಾವ ಮೂರ್ತಿ ಯನ್ನು ಕಂಡಕೂಡಲೇ ಮನಸ್ಸು ಹರ್ಷಾತಿರೇಕದಿಂದ ಉಲ್ಲಾಸಗೊಳ್ಳುವದೋ ಯಾವ ಮೂರ್ತಿಯು ಎಲ್ಲರ ಮನಸ್ಸಿಗೆ ಹಿಡಿಸುವದೋ ಮತ್ತು ಬೇಕೆನುತಲಿ ಅದರ ಕಡೆಗೆ ನೋಡಿದಾಗ್ಗೆ, ಅಂತರ್ಯಾಮದಲ್ಲಿ ಪ್ರೀತಿಯು ಉಕ್ಕೇರುತ್ತದೆಯೋ ಅಂತಹ ಮೂರ್ತಿಯನ್ನು ತಯಾರಿಸಬೇಕು ಸ್ವಲ್ಪ ಹಾಸ್ಯವದನವಿದ್ದು ಅತ್ಯಂತ ಪ್ರಸನ್ನ ಮುದ್ರೆಯುಳ್ಳದ್ದಾಗಿರಬೇಕು ಅದರ ಸೌಂದರ್ಯದ ಪ್ರಕಾಶದಿಂದ ಮನಸ್ಸು ಪ್ರಸನ್ನವಾಗುತ್ತದೆ ಕೇವಲ ಇಂತಹ ಮೂರ್ತಿಗೆ ಸರ್ವಾಂಗ ಸುಂದರ ಮೂರ್ತಿ ಎನ್ನುತ್ತಾರೆ ಅಲ್ಲಿ ಮಹಾನ್ ಮಹಾನ್ ಸಾಧು ಜನರನ್ನು ಇಕ್ಕಟ್ಟಾಗಿ ಮಾಡಿ ಅಗ್ನ್ಯುತ್ತಾರಣ ವಿಧಿಯನ್ನು ಏಕನಿಷ್ಠೆಯಿಂದ ಮಾಡಬೇಕು ಮತ್ತು ಮೂರ್ತಿಯ ಮೇಲಿನ ಆವರಣವನ್ನು ತಗೆದು ಯಾವನಾದರೊಬ್ಬ ದೊಡ್ಡ ಪುರುಷನ ಕೈಯಿಂದ ಅದರ ಪ್ರಾಣಪ್ರತಿಷ್ಠೆಯನ್ನು ಮಾಡಿಸಬೇಕು ದೊಡ್ಡ ದೇವಾಲಯವನ್ನು ಕಟ್ಟ ಬೇಕು ಅದರ ಸುತ್ತಮುತ್ತಲು ತೋಟ ಉದ್ಯಾನ ಮತ್ತು ಉಪವನ ಮಾಡಬೇಕು ತೋಟ ಪಟ್ಟ ಕೆರೆ ಮತ್ತು ಭಾವಿಯನ್ನು ಕಟ್ಟಿ ವಿಶ್ರಾಂತಿಯನ್ನು ತೆಗದುಕೊಳ್ಳುವದ ಕ್ಕಾಗಿ ರಮಣೀಯವಾಗಿ ಮಾಡಬೇಕು ನಾನಾ ತರಹದ ವೃಕ್ಷಗಳನ್ನು ಹಚ್ಚುವ ದಕ್ಕೆ 'ವನ' ಅನ್ನುತ್ತಾರ ತಿನ್ನಲು ಯೋಗ್ಯವಾದ ಹಣ್ಣಿನ ಗಿಡಗಳನ್ನು ಹಚ್ಚುವ

ದಕ್ಕೆ 'ಉಪವನ' ಎಂದು ಅನ್ನುತ್ತಾರೆ ಮತ್ತು ಕೇವಲ ಹೂವಿನ ಗಿಡಗಳನ್ನು ಹಚ್ಚುವದಕ್ಕೆ 'ಉದ್ಯಾನ' ವೆಂದು ಅನ್ನುತ್ತಾರೆ ಇವೆಲ್ಲವನ್ನೂ ಸಿದ್ಧಗೊಳಿಸಿ ಪೂಜಿಸುವದಕ್ಕಾಗಿ ಕೃಷ್ಣಾರ್ಪಣ ಮಾಡಬೇಕು ಎಲ್ಲ ಕಡೆಯಲ್ಲಿಯ ವ್ಯಾಪಾರಸ್ಥರು ಪೇಟೆಗಾಗಿ ಬರುವಂತೆ ದೇಗುಲದ ಹತ್ತಿರ ಪಟ್ಟಣವನ್ನು ಸ್ಥಾಪಿಸಬೇಕು ಹಗಲಿರುಳೂ ವೇದಾಧ್ಯಯನ, ಶಾಸ್ತ್ರ ಶ್ರವಣ ಮತ್ತು ಕೀರ್ತನವಾಗುತ್ತಿರಬೇಕು ಇಷ್ಟೆಲ್ಲವನ್ನೂ ಮಾಡಲು ಯೋಗ್ಯತೆ ಇಲ್ಲದಿದ್ದರೆ ಮತ್ತು ಎಲ್ಲವನ್ನೂ ಮಾಡಬೇಕೆಂಬ ಉದ್ದಿಷ್ಟವಿದ್ದು ಸಾಕಷ್ಟು ಹಣವಿಲ್ಲದಿದ್ದರೆ, ಧನವಂತನ ಸಹಾಯವನ್ನು ಕೈಗೊಂಡು, ನನ್ನ ಭಕ್ತಿಯುಕ್ತ ಅಂತಃಕರಣದಿಂದ ಎಲ್ಲವನ್ನೂ ನೆರವೇರಿಸಬೇಕು ಇಲ್ಲವ ಭಗವದ್ಭಕ್ತರೆಲ್ಲರನ್ನು ಒಂದುಗೂಡಿಸಿ, ಅವರಲ್ಲಿ ಧನಿಕನಾವನಿರುವನೋ ಅವನು ಭಕ್ತಿಯಿಂದ ದ್ರವ್ಯ ಸಹಾಯವನ್ನು ನೀಡಿದರೆ, ಆ ದ್ರವ್ಯದಿಂದ ಎಲ್ಲವನ್ನೂ ಸಾರುಗಾಣಿಸಬೇಕು ದೇವಾಲಯದಲ್ಲಿ ಒಮ್ಮೆ ಪ್ರಾಣ ಪ್ರತಿಷ್ಠೆ ಮಾಡಿದ ಮೇಲೆ ಮತ್ತೆ ಯಾವಾಗಲೂ ಎಂದಿಗೂ ಯಾವನು ಆ ಗುಡಿಯ ಗೊಡವೆಗ ಬರುವದಿಲ್ಲವೋ, ಅವನು ಆಲಸ್ಯುಳ್ಳವನೂ ಮತ್ತು ಭಾಗ್ಯಹೀನನಾಗಿರುವನೆಂಬುದೂ ಲಕ್ಷ್ಯದಲ್ಲಿರಲಿ ಅವನು ನಿಜವಾದ ಭಕ್ತನಲ್ಲ ಯಾವನು ಮೂರ್ತಿಯ ಪ್ರತಿಷ್ಠಾಪನೆಯನ್ನು ಮಾಡುವ ಕರ್ತವ್ಯವನ್ನು ಅರಿಯುವನೋ, ಹಣವನ್ನು ವ್ಯಯ ಮಾಡಿ ಉತ್ತಮ ಭಕ್ತಿಯನ್ನೂ ಮಾಡುವನೋ, ಅವನು ಅತ್ಯಂತ ನೀಚವಾದ ಕೆಲಸವನ್ನು ಮಾಡುವದೂ ಕೂಡ ತನ್ನ ಕರ್ತವ್ಯವೆಂದು ತಿಳಿಯುತ್ತಾನ ಮತ್ತು ಕಸಗೂಡಿಸಲು ಕೈಯಲ್ಲಿ ತೆಂಗಿನ ಮರದ ಕಸಬರಿಗೆಯನ್ನೂ ಹಿಡಿಯಲು ಹಿಂಜರಿಯುವದಿಲ್ಲ ಶಿಷ್ಯ ಮತ್ತು ಸೇವಕ ಜನರೆದುರಿಗೂ ಕೂಡ, ಪ್ರತಿಷ್ಠೆ ಮತ್ತು ಸನ್ಮಾನವೆಲ್ಲವನ್ನೂ ತ್ಯಜಿಸಿ ಸ್ವತಃ ಜಂಭವನ್ನು ಬಿಟ್ಟು ದೇವಾಲಯದ ಮುಂದೆ ಥಳಿ ರಂಗೋಲಿಗಳನ್ನು ಹಾಕುತ್ತಾನೆ ಅದರಲ್ಲಿ ತರತರಹದ ಚಿತ್ರಗಳನ್ನು ಬರೆದು ಸುಶೋಭಿತವಾಗಿ ಕಾಣುವಂತೆ ಬಣ್ಣವನ್ನೂ ತುಂಬುತ್ತಾನ ಅವನಿಗ ನನ್ನ ಭಜನೆಯ ಅಭಿರುಚಿಯು ಅತಿಶಯವಾಗಿರುತ್ತದೆ ಯಾವ ಪ್ರಕಾರವಾಗಿ ಒಬ್ಬ ಬಡವ ದರಿದ್ರ ಭಿಕ್ಷುಕನಿರುವನೋ ಆ ಪ್ರಕಾರವಾಗಿದ್ದು ಅವನು ಸೇವೆಯನ್ನು ಮಾಡುತ್ತಾನ ನೀಚ ಕೆಲಸ ಮಾಡುವದರಲ್ಲಿ ಅವನಿಗೆ ಆನಂದವೇ ಆಗುತ್ತದೆ. ಅವನು ತೋರಿಕೆಗಾಗಿ ನನ್ನ ಭಜನೆಯನ್ನು ಮಾಡುವದಿಲ್ಲ ಬಹಳ ಹಣವನ್ನು ಖರ್ಚುಮಾಡಿ ದೇವಾಲಯವನ್ನು ಕಟ್ಟಿ, ಮೂರ್ತಿ ಪ್ರತಿಷ್ಠಾಪನಯನ್ನು ಮಾಡಿದ ನಾನೊಬ್ಬ ದೊಡ್ಡ ಭಕ್ತನಿರುವನೆಂಬ ಅಭಿಮಾನವನ್ನು ಅವನು ತಾಳುವದಿಲ್ಲ ಮನದಲ್ಲಿ ನಿಜವಾದ ಭಕ್ತಿಯಿರುವದಿಲ್ಲ ಮತ್ತು ಮೇಲ ಮೇಲೆ ತೋರಿಕೆಗಾಗಿ ಭಕ್ತಿಯ ಆಡಂಬರವನ್ನು ಮಾಡುವ ಡಾಂಭಿಕ ಭಕ್ತಿಯಿರುತ್ತದಯೋ ಅದನ್ನು ಭಾವಿಕ ಭಕ್ತನು ಸ್ಪರ್ಶಿಸುವದೇ ಇಲ್ಲ ಭಕ್ತನು ಅಭಿಮಾನಿಯಾಗಬಾರದು.

ಸನ್ಮಾನದ ಅಭಿಲಾಷೆಯನ್ನು ಮಾಡಬಾರದು, ಡಾಂಭಿಕ ಭಜನೆಯನ್ನು ಎಂದಿಗೂ ಮಾಡಬಾರದು ಮತ್ತು ಯಾವ ತರಹದ ಇಚ್ಛೆಯನ್ನೂ ಮಾಡಬಾರದು ಅವನಿಗೆ ಯಾವ ಅನುಭವ ಬಂದಿರುವದೋ ಇಲ್ಲವೆ ದೇವಾಲಯಕ್ಕಾಗಿ ಎಷ್ಟು ಹಣ ಖರ್ಚಾಗಿರುವದೋ ಅಥವಾ ಯಾವದಾದರೂ ದಾನವನ್ನು ಕೊಟ್ಟಿದ್ದರೆ ಅವುಗಳ ವಿಷಯವಾಗಿ ಎಂದಿಗೂ ಮಾತನಾಡಿ ತೋರಿಸಬಾರದು ಯಜಮಾನನು ತಾನು ಮಾಡಿದ ಸತ್ಕಾರ್ಯವನ್ನು ತನ್ನ ಬಾಯಿಯಿಂದಲೇ ಹೊಗಳಿಕೊಂಡರೆ, ಪ್ರಾಣವಿಲ್ಲದ ಶರೀರದಂತ ಅಂದರೆ ಪ್ರೇತದಂತೆ ಅದಲ್ಲವೂ ನಿಷ್ಫಲವಾಗುತ್ತದೆ ಒಕ್ಕಲಿಗನು ಧಾನ್ಯವನ್ನು ಬಿತ್ತಿ ಅದನ್ನು ಕೂಡಲೇ ಮುಚ್ಚಿಬಿಡುತ್ತಾನೆ ಅಂದರೇನೇ ಬೆಳೆಯು ಭರದಿಂದ ಬರುತ್ತದ ಅದರಂತೆ, ಕೊಟ್ಟ ದಾನವನ್ನು ನುಡಿಯದಿದ್ದಲ್ಲಿಯೇ ಫಲದ್ರೂಪವಾಗುತ್ತದೆ ನಾವು, ದೇವರಿಗೆ ಅರ್ಪಿಸಿದ್ದನ್ನು ಇಲ್ಲವೆ ಯಾರಾದರೂ ದೇವಾಲಯಕ್ಕೆ ಏನಾದರೂ ಕೊಟ್ಟಿದ್ದನ್ನು ತೆಗೆದುಕೊಳ್ಳಬಾರದು ಅದು ಪೂಜಾರೀತನದ ದೋಷವಾಗುತ್ತದ ದೇವರ ಪ್ರಸಾದವನ್ನು ಸ್ವೀಕರಿಸುವಾಗ ಅತೀ ಆಸೆಯಿಂದ ಎಲ್ಲ ಪ್ರಸಾದವನ್ನು ತಾವೇ ತೆಗೆದುಕೊಳ್ಳಬಾರದು ಮೊದಲು ಪ್ರಸಾದವನ್ನು ಎಲ್ಲರಿಗೂ ಹಂಚಬೇಕು ಆಮೇಲೆ ಉಳಿದುದರಲ್ಲಿ ತಾನೂ ಸ್ವಲ್ಪ ತೆಗದುಕೊಳ್ಳಬೇಕು ಶ್ರೀಹರಿಗೆ ದೀಪವನ್ನು ಸಮರ್ಪಿಸಿದರೆ, ಅದರ ಬೆಳಕಿನಲ್ಲಿ ಮನಗೆಲಸಗಳನ್ನು ಮಾಡಬಾರದು ಪುರಾಣದಲ್ಲಿಯೂ ಮತ್ತು ಜ್ಞಾನವಂತರಾದ ಸ್ಮೃತಿಕಾರರೂ ಸಹ ಹೀಗೆಯೇ ಹೇಳಿದ್ದಾರೆ ಇದಲ್ಲವೂ ಸುಮಾರಾಗಿ ಬಾಹ್ಯಾಕಾರ ಪೂಜೆಯ ವಿಧಾನವಾಯಿತು ಆದರ ಅಂತಃಕರಣದಿಂದ ನನ್ನಲ್ಲಿ (ಕೃಷ್ಣ) ಪೂರ್ಣ ಭಕ್ತಿ ಮತ್ತು ವಿಶ್ವಾಸವನ್ನಿಡಬೇಕು ಆ ಭಕ್ತಿಯೇ ಭಗವಂತನಿಗ ಪ್ರಿಯವಾಗಿರುತ್ತದೆ ಭಾವಿಕರ ಪೂಜಯು ಭಕ್ತಿಯಿಂದಲೇ ಆಗುತ್ತಿರುತ್ತದೆ ಇನ್ನು ಭಕ್ತಿಯ ಗೌಪ್ಯವನ್ನು ಹೇಳುವನು ಕೇಳು ಯಾವ ಪ್ರಕಾರವಾಗಿ ಭಜನಯನ್ನು ಮಾಡುವದರಿಂದ "ಭಕ್ತ"ನೆಂದು ಅನ್ನುತ್ತಾರೋ, ಆ ಭಜನೆಯು ಹೇಗಿರುವದೆಂದರ, ಈ ಜಗತ್ತಿನಲ್ಲಿ ಯಾವದು ಉತ್ತಮವಿರುವದೋ ಮತ್ತು ಯಾವ ವಸ್ತುವಿನ ಮೇಲೆ ಪ್ರೀತಿಯಿರುವದೋ, ಅದೆಲ್ಲವನ್ನು ಅವರು ನನಗೆ (ಶ್ರೀಕೃಷ್ಣನಿಗೆ) ಅರ್ಪಿಸುತ್ತಾರೆ ಹೆಚ್ಚಿಗೆ ಏನು ಹೇಳಲಿ? ಒಂದು ವೇಳೆ ಭಕ್ತನಿಗೆ ಆಕಸ್ಮಿಕವಾಗಿ ಚಂದ್ರಾಮೃತವು ಲಭಿಸಿದರ, ಅವನು ಅದೆಲ್ಲವನ್ನೂ ಭಗವಂತನಿಗೇ ಅರ್ಪಣ ಮಾಡುತ್ತಾನೆ ದೇಹದ ಆಸಕ್ತಿಯಿಂದ ಅವನು ಅದನ್ನು ಪ್ರಾಶನ ಮಾಡುವದಿಲ್ಲ 'ದೇಹವು ಅಮರವಾಗಬೇಕೆಂಬ ಆಸಕ್ತಿಯಿಂದ ತಾನೇ ಅಮೃತವನ್ನು ಸೇವಿಸಬೇಕೆಂದರೆ ದೇವರು ಅಮೃತ ಪಾನವನ್ನು ಮಾಡುತ್ತಿದ್ದರೂ ಯೋಗ್ಯ ವೇಳೆಗೆ ಮರಣ ಹೊಂದುತ್ತಾರಷ್ಟೇ' ಎಂದು ತಿಳಿದು ದೇಹದ ಮಮತೆಯಿಂದ ಅಮೃತವನ್ನು ಸೇವಿಸುವದಿಲ್ಲ ಅದನ್ನೇ ಭಗವಂತನಿಗೆ ಅರ್ಪಿಸಿದಲ್ಲಿ ಕ್ಷೀಣವಾಗದ (ಅಕ್ಷಯ) ಅಮರತ್ವವು ಲಭಿಸು

ತ್ತದೆ ಯಾರಿಗೂ ಏನೂ ಬೇಡದೆ ಕೇವಲ ದೈವದಿಂದಲೇ ಭಕ್ತನಿಗೆ ಸ್ಪರ್ಶಮಣಿ ಇಲ್ಲವೆ ಚಿಂತಾಮಣಿಯ ಲಾಭವಾದಲ್ಲಿ, ಅವನು ಲೋಭದಿಂದ ಅದನ್ನು ತನ್ನ ಬದಿಯಲ್ಲಿ ಇಟ್ಟುಕೊಳ್ಳುವದಿಲ್ಲ ಕೂಡಲೇ ಭಗವಂತನಿಗೆ ಅರ್ಪಿಸುತ್ತಾನೆ ಲೋಭದಿಂದ ಕಲ್ಪತರುವಿನ ಜೋಪಾನನೆ ಮಾಡಿದಲ್ಲಿ, ಕಲ್ಪನೆಯಿಲ್ಲದೆಯೇ ಇಚ್ಛೆಯು ಪ್ರಬಲವಾಗುತ್ತದೆ ಆದರೆ ಅದನ್ನೇ ಭಗವಂತನಿಗೆ ಅರ್ಪಿಸಿದಲ್ಲಿ, ಅವನು ತಾನಾಗಿಯೇ ನಿರಿಚ್ಛನಾಗುತ್ತಾನೆ ಸ್ವಾರ್ಥದಿಂದ ಚಿಂತಾಮಣಿಯನ್ನು ಜೋಪಾನ ಮಾಡಿದರೆ ಅದರಿಂದ ಅಂತಃಕರಣದಲ್ಲಿ ಅತ್ಯಂತ ಚಿಂತೆಯೇ ಹೆಚ್ಚುತ್ತದೆ ಆದರೆ ಅದನ್ನೇ ಭಗವಂತನಿಗೆ ಅರ್ಪಣೆ ಮಾಡಿದಲ್ಲಿ ನಿಶ್ಚಿಂತತೆಯು ಪ್ರಾಪ್ತವಾಗುತ್ತದೆ ನಾವು ಕಾಮಧೇನುವನ್ನು ನಾಕಿದರೆ, ಅದರಿಂದ ತಡೆಯಲಾರದಷ್ಟು ಇಚ್ಛೆಯು ಹೆಚ್ಚುತ್ತದೆ ಆದರೆ ಆ ಕಾಮಧೇನುವನ್ನು ಕೃಷ್ಣಾರ್ಪಣ ಮಾಡಿದರೆ, ನಮ್ಮಲ್ಲಿ ಪರಿಪೂರ್ಣ ನಿರಪೇಕ್ಷತೆಯು ಬಾಗುತ್ತದೆ ಆಸೆಯಿಂದ ಸ್ಪರ್ಶಮಣಿಯನ್ನು ಹತ್ತಿರನಿಟ್ಟುಕೊಂಡಲ್ಲಿ, ಅದು ಅತಿಶಯ ಧನಲೋಭವನ್ನು ಹೆಚ್ಚಿಸುತ್ತದೆ ಆದರೆ ಅದೇ ಸ್ಪರ್ಶಮಣಿಯನ್ನು ಭಗವಂತನಿಗೆ ಅರ್ಪಿಸಿದಲ್ಲಿ ಮಾನವನು ಧನದ ಸ್ವಾರ್ಥದಿಂದ ಮುಕ್ತನಾಗುತ್ತಾನ ಅದಲ್ಲದೇ ಯಾವ ಯಾವ ದೇಶದಲ್ಲಿ, ಯಾವ ಯಾವ ವೇಳೆಯಲ್ಲಿ ಯಾವ ಯಾವ ಋತುವಿನಲ್ಲಿ, ಯಾವ ಯಾವ ಉತ್ತಮ ಪದಾರ್ಥ ಇಲ್ಲವೆ ಹಣ್ಣುಗಳು ಉತ್ಪನ್ನವಾಗುವವೋ, ಇಲ್ಲವೆ ಹೊಸ ಧಾನ್ಯದ ಬೆಳೆಯು ಬರುವದೋ ಅದೆಲ್ಲವನ್ನೂ ಭಕ್ತಿಯುಕ್ತ ಅಂತಃಕರಣದಿಂದ ಶ್ರೀ ಕೃಷ್ಣನಿಗೇ ಅರ್ಪಣ ಮಾಡುತ್ತಾರ ಮನಃಪೂರ್ವಕವಾಗಿ ನೇರುವ ಪದಾರ್ಥವು ಸಿಕ್ಕಾಗಲೂ ಅದರ ಅಪೇಕ್ಷೆಯನ್ನು ಮಾಡದೆ ಅದನ್ನೂ ಅವನು ನನಗೇ (ಕೃಷ್ಣನಿಗ) ಅರ್ಪಿಸುತ್ತಾನ ಅವನು ತನ್ನ ಮನದಲ್ಲಿಯ ಎಲ್ಲ ಅಭಿರುಚಿಯನ್ನೂ ನನಗೇ ಅರ್ಪಿಸುತ್ತಾನೆ ಅನಂತನಾದ ನನಗೆ ನನ್ನ ಭಕ್ತಿಯನ್ನು ಪ್ರೀತಿಯಿಂದ ಅರ್ಪಿಸಿದಲ್ಲಿ ಅದರ ಫಲಶ್ರುತಿಯನ್ನು ವೇದಗಳಿಗೆ ಹೇಳಲಿಕ್ಕಾಗದೇ ಅವು ಮೌನ ತಾಳಿದವು ಆದರೆ ವೇದೋಕ್ತನಾದ ನನಗೂ ಸಹ ಅದರ ಫಲಶ್ರುತಿಯನ್ನು ಹೇಳಲು ಬರಲಿಕ್ಕಿಲ್ಲ ಉದ್ಧವಾ! ನಿಜವಾಗಿಯೂ ಭಕ್ತಿಯನ್ನು ಸಮರ್ಪಿಸಿದ ಫಲಶ್ರುತಿಯು ಸ್ವತಃ ನಾನೇ ಆಗಿರುವೆನು ಉದ್ಧವಾ! ತನ್ನ ಜೀವಕ್ಕಿಂತಲೂ ನನ್ನ (ಶ್ರೀಕೃಷ್ಣ) ಮೇಲೆ ಅತ್ಯಂತ ಪ್ರೀತಿಯನ್ನಿಡುವದೇ ನಿಜವಾದ ಭಕ್ತಿಯೆಂಬುದನ್ನು ನಿರ್ಧಾರವಾಗಿ ಲಕ್ಷ್ಯದಲ್ಲಿರಲಿ

## ಪ್ರಕರಣ ೨೧

ಅನೇಕ ತರಹದ ಯೋಗ ಯಾಗ, ವಾಪಿ, ಕೂಪ, ತೋಟ, ಸರೋವರ ಅತ್ಯುತ್ತಮವಾದ ಶ್ರೌತಸ್ಮಾರ್ತ ಕರ್ಮಗಳನ್ನು ಆಚರಿಸುತ್ತಿರುವಾಗ ಯಾವನು

ಅವುಗಳನ್ನು ಅರ್ಪಣ ಮಾಡುವನೋ, ಆವಾಗಲೇ ಆ ಕರ್ಮಗಳೆಲ್ಲವೂ ವ್ಯವಸ್ಥಿತವಾಗಿ ನೆರವೇರಿದವೆಂದು ತಿಳಿಯಬೇಕು ಮತ್ತು ನನಗೆ (ಶ್ರೀಕೃಷ್ಣ) ಅರ್ಪಿಸದೇ ಶ್ರೋತ್ರ, ಅಗ್ನಿಹೋತ್ರ, ಸೋಮಯಾಗ ಮತ್ತು ಸ್ಮಾರ್ತ ಮುಂತಾದ ಸತ್ಕರ್ಮಗಳನ್ನೂ ಒಂದು ವೇಳೆ ಆಚರಿಸಿದರೂ, ಇಲ್ಲವ ಕೆರೆ ಬಾವಿಗಳನ್ನು ಕಟ್ಟಿದರೂ ಅದೆಲ್ಲವೂ ವ್ಯರ್ಥವೇ ಸರಿ ಏಕೆಂದರ ಸತ್ಕರ್ಮವಾದರೂ ಕೂಡ, ಅದನ್ನು ನನಗೆ ಅರ್ಪಿಸಿದಾಗಲೇ, ಅದು ಯಥಾಸಾಂಗವಾಗುತ್ತದೆ—

—ಎಲ್ಲ ಕರ್ಮಗಳನ್ನು ನನಗೆ (ಶ್ರೀಕೃಷ್ಣ) ಅರ್ಪಿಸುತ್ತಿರುವಾಗಲೂ ಕೂಡ, ಆಕಸ್ಮಿಕವಾಗಿ ಭಕ್ತನಿಗೆ ಫಲೇಚ್ಛೆಯ ಬಲೆಗೆ ಬಿದ್ದು ಬಾಧೆಯಾಗಬಾರದೆಂದು, ನಾನು ವಿಘ್ನಗಳು ಅವನೆಡೆಗೆ ಎಂದಿಗೂ ಬಾರದಂತೆ ಅವನನ್ನು ನೋಡಿಕೊಳ್ಳುತ್ತೇನೆಂಬುದನ್ನು ಲಕ್ಷ್ಯದಲ್ಲಿಡು ಸಕಾಮ (ಕಾಮನೆಯಿಂದ) ಕರ್ಮವನ್ನಾಚರಿಸುವವರಿಗೆ ಬಹಳ ಕಷ್ಟದಿಂದಲೂ ಕೂಡ ಯಾವದು ಸಾಧ್ಯವಾಗುವದಿಲ್ಲವೋ, ಅದಕ್ಕಿಂತಲೂ ಶ್ರೇಷ್ಠವಾದ ಜನರ ಗತಿ ಮತ್ತು ಎಲ್ಲ ಭೋಗವನ್ನು ನನ್ನ ಭಕ್ತನಿಗೆ ಕೊಡುತ್ತಿರುತ್ತೇನೆ ಅಂತಃಕರಣದಿಂದ ಯಾವನು ನನ್ನ ಭಕ್ತನಿದ್ದು, ಉತ್ತಮೋತ್ತಮ ಭೋಗ ವಿಲಾಸಗಳಲ್ಲಿಯೂ ಕೂಡ ವಿರಕ್ತನಿರುವನೋ, ಅವನು ಆ ಭೋಗಗಳನ್ನು ಉಪ ಭೋಗಿಸುತ್ತಲಿರುವಾಗಲೂ, ನನ್ನ ಸ್ಮರಣೆ ಮಾಡುತ್ತಿರುತ್ತಾನೆ ಮತ್ತು ಆ ಭೋಗ ವಿಲಾಸಗಳಲ್ಲಿ ಆಸಕ್ತನಾಗುವದಿಲ್ಲ ಒಮ್ಮೆ ಒಬ್ಬ ಸಾಧು ದೇವಾಲಯಕ್ಕೆ ಹೋಗುವಾಗ, ಧಾರಾಕಾರವಾಗಿ ಸುರಿಯುವ ಮಳೆಯಿಂದ ಬೇಸತ್ತು ನೆರಳಿಗಾಗಿ, ತಿಳಿಯದಲೇ ಆಕಸ್ಮಿಕವಾಗಿ ವೇಶ್ಯೆಯ ಮನೆಯಲ್ಲಿ ಪ್ರವೇಶಿಸಿದರೂ, ಅವನು ಅಲ್ಲಿಯೇ ಇದ್ದು ಅವಳನ್ನು ಹೇಗ ಸೇವಿಸುವದಿಲ್ಲವೋ, ಹಾಗೆಯೇ ಭಕ್ತನೂ ಸಹ ದಿವ್ಯಭೋಗಗಳಿಗೆ ಬೇಸತ್ತು ಅತೀವ ಪಶ್ಚಾತ್ತಾಪದಿಂದ, ಮೋಸ ಹೋದೆನೆಂದು ಹಣೆ ಹಣೆ ಗಟ್ಟಿಸಿಕೊಳ್ಳುತ್ತ ಹರಿಯ ಸ್ಮರಣೆಯನ್ನು ಮಾಡುತ್ತಾನ ಹೀಗೆ ಪಶ್ಚಾತ್ತಾಪದಿಂದ, ಅವನ ಎಲ್ಲ ಭೋಗಗಳು ನಾಶ ಹೊಂದುತ್ತವೆ ಮತ್ತು ಭಗವದ್ಭಕ್ತನ ಮನೆಯಲ್ಲಿ ಆ ಜ್ಞಾನವಂತನು ಜನಿಸುತ್ತಾನ ಅವನಿಗೆ ಪೂರ್ವಜನ್ಮದ ಸಂಸ್ಕಾರದಿಂದ ಎಲ್ಲ ವಿಷಯ ಭೋಗಗಳಲ್ಲಿ ವೈರಾಗ್ಯವೇ ಹುಟ್ಟುತ್ತದ ಅವನು ಜನ್ಮದಾರಭ್ಯದಿಂದಲೇ ಭಕ್ತಿ ಮಾರ್ಗವನ್ನನುಸರಿಸುತ್ತಾನ ಮತ್ತು ಅವನಿಗೆ ಭಕ್ತರು ಜೀವ ಮತ್ತು ಪ್ರಾಣಕ್ಕಿಂತಲೂ ಹೆಚ್ಚಿಗೆ ಸೇರುತ್ತಾರ ಅವನು ಮುಕ್ತಿಯನ್ನು ಧಿಕ್ಕರಿಸಿ ಸ್ವತಃ ಸರ್ವಸ್ವಿಯಾಗಿ ನನ್ನನ್ನೇ ಭಜಿಸುತ್ತಾನೆ—

—ಈ ಪ್ರಕಾರವಾಗಿ ನಾನು ನನ್ನ ಭಕ್ತನಿಗೆ ವಿಘ್ನಗಳ ಬಾಧೆಯು ಕನಸಿನಲ್ಲಿ ಕೂಡ ಆಗದಂತೆ ನೋಡಿಕೊಳ್ಳುತ್ತೇನೆ ಹೀಗೆಯೇ ಯಾರಿಗೆ ವಿಷಯದಲ್ಲಿ ವಿರಕ್ತಿಯುಂಟಾಗುತ್ತದೆಯೋ, ಯಾವಾಗ ಕೆರೆ ಬಾವಿಗಳನ್ನು ಕಟ್ಟುವ ಪರೋಪಕಾರದ ಕೆಲಸವನ್ನು

ಮಾಡುವರೋ, ಇಲ್ಲವೆ ಯಾವಾಗ್ಗೆ ಯೋಗ-ಯಾಗ ಮತ್ತು ತ್ಯಾಗ ವೃತ್ತಿಯ ಸಾಧನೆಯನ್ನು ಮಾಡುವರೋ, ಆವಾಗಲೇ ಅವರಿಗೆ ನನ್ನ (ಶ್ರೀಕೃಷ್ಣನ) ಭಕ್ತಿಯು ಉತ್ಪನ್ನವಾಗುತ್ತದೆ ಮನಸ್ಸಿನ ಸಮದೃಷ್ಟಿಯಿಂದ ಶ್ರೌತಸ್ಮಾರ್ತಕರ್ಮದ ಅನುಷ್ಠಾನ ಇಲ್ಲವೇ ಯೋಗ, ಯಾಗ ಮತ್ತು ತ್ಯಾಗವೃತ್ತಿಯ ಸಾಧನವನ್ನು ಯಾವಾಗ್ಗ ಏಕನಿಷ್ಠೆಯಿಂದ ಮಾಡುವರೋ, ಆವಾಗಲೇ ಅದರಿಂದ ಅವರ ಚಿತ್ತವೃತ್ತಿಯು ಶುದ್ಧವಾಗುತ್ತದೆ ಮತ್ತು ಉದ್ಧವಾ! ಚಿತ್ತವೃತ್ತಿಯು ಶುದ್ಧವಾದ ನಂತರ ಅವರಿಗೆ, ನಿಜವಾಗಲೂ ನನ್ನ ಉತ್ತಮ ಭಕ್ತಿಯ ಪ್ರಾಪ್ತಿಯಾಗುವದೆಂದು ತಿಳಿದುಕೋ, ಆದರೆ ಇಷ್ಟೆಲ್ಲ ಪ್ರಯತ್ನವನ್ನು ಮಾಡದೇ ನನ್ನ ಸದ್ಭಕ್ತಿಯು ಪ್ರಾಪ್ತವಾಗುವಂತಹ ಅತಿಶಯ ಗುಪ್ತವಾದ ಯುಕ್ತಿಯು ನನಗೆ ಗೊತ್ತಿದೆ ಅದನ್ನೂ ಸಹ ನಾನು ನಿನಗೆ ಹೇಳುವೆ ಉದ್ಧವಾ! ಎಲ್ಲ ಸಾಧನೆಗಳನ್ನು ಬಿಟ್ಟು ಯಾವನು ಸಾಧುವಿನ (ಸದ್ಗುರುವಿನ) ಭಜನೆಯನ್ನು ಮಾಡುವನೋ, ಆವಾಗಲೇ ಅವನ ಮನಸ್ಸು ಶುದ್ಧವಾಗುವದೆಂಬುದನ್ನು ನೀನು ಲಕ್ಷ್ಯದಲ್ಲಿಡು ಈವಾಗ ನೀನು ಹೀಗೆ ಅನ್ನಬಹುದು, ಸಾಧುವು ಹೇಗೆ ಇರುತ್ತಾನೆ? ಮತ್ತು ಅಂತಹ ಸಾಧು ಯಾವನು? ಆದರೆ, ಅವನ ಲಕ್ಷಣವನ್ನು ಮುಂಚಿತವಾಗಿಯೇ ಹೇಳಿದ್ದೇನೆ ಆದಕಾರಣ ಈಗ ಹೆಚ್ಚಿಗೆ ಹೇಳುವ ಅವಶ್ಯಕತೆಯು ಏನೂ ಇರುವದಿಲ್ಲ ಸಾಧು ಎಂದರೆ ಸದ್ಗುರು ಎಂಬುದನ್ನು ಲಕ್ಷ್ಯದಲ್ಲಿಟ್ಟರೆ ಆಯಿತು —

—ಯಾವನು ಭಾವಾರ್ಥದಿಂದ ಆ ಸದ್ಗುರುವಿನ ಭಜನೆಯನ್ನು ಮಾಡುವನೋ, ಅವನ ಎಲ್ಲ ಶುದ್ಧಿಗೆ ಕಾರಣ ಆ ಸರ್ವತೋಪರಿ ಸದ್ಗುರುವೇ ಆಗಿರುವನೆಂದು ತಿಳಿ ಅವನ ಮುಖದಿಂದ ನುಡಿದ ಶಬ್ದವೇ ಬ್ರಹ್ಮಸಾಕ್ಷಾತ್ಕಾರದವರೆಗೆ ಒಯ್ದು ಮುಟ್ಟಿಸುತ್ತದೆ ಆ ಸದ್ಗುರುವಿನ ಶ್ರೀ ಚರಣವನ್ನು ಸೇವಿಸಿದಲ್ಲಿ ಯಾವ ಶುದ್ಧಿಯು ಆಗಲಾರದು? ಮುಖದಿಂದ ಗುರುವಿನ ನಾಮವನ್ನು ತೆಗೆದುಕೊಳ್ಳುವದರಿಂದಲೇ ಅವನನ್ನು ಕಲಿಕಾಳನು ಕಣ್ಣೆತ್ತಿ ಕೂಡ ನೋಡಲಾರನು ಆನಂದದಿಂದ ಅವನ (ಸದ್ಗುರುವಿನ) ಸೇವೆಯನ್ನು ಮಾಡಿದಲ್ಲಿ, ಮೋಕ್ಷಸುಖವೂ ಸಹ ಅವನ (ಭಕ್ತನ) ಚರಣಕ್ಕೆರಗುವದು ಯಾವನ ಚಿತ್ತದಲ್ಲಿ ಸದ್ಗುರುವಿನ ಅಭಿರುಚಿಯಿರುವದೋ ಮತ್ತು ಯಾವನಿಗೆ ಸದ್ಗುರುವಿನ ಭಜನೆಯಲ್ಲಿ ಅತ್ಯಂತ ಪ್ರೇಮವಿರುವದೋ ಅವನಿಗೆ ನನ್ನ ಸದ್ಭಕ್ತಿಯು ಒಲಿಯುತ್ತಾಳೆಂದು ತಿಳಿಯಬೇಕು ನಿಜವಾಗಲೂ ಆ ಭಕ್ತಿಯು, ಆ ಭಕ್ತನು ತನ್ನನ್ನು ವರಿಸಬೇಕೆಂದು, ಅವನ ಬೆನ್ನಟ್ಟುತ್ತದೆ ಗುರುಭಜನೆಯಲ್ಲಿ ಯಾವನು ಭಾವನೆಯಿಂದ ಮಗ್ನನಾಗುತ್ತಾನೋ, ಅವನೇ ನಿಜವಾಗಲೂ ಜಗತ್ತಿನಲ್ಲಿ ತನ್ನ ಸ್ವಾರ್ಥವನ್ನು ಸಾಧ್ಯಮಾಡಿಕೊಂಡನೆಂದು ಅರಿಯಬೇಕು ಅವನಲ್ಲಿಯೇ ನನ್ನ ಉತ್ತಮ ಭಕ್ತಿಯು ದೃಗ್ಗೋಚರವಾಗುವದು —

—ನನ್ನ ಸದ್ಭಕ್ತಿಯಷ್ಟೇ ಏಕೆ? ನಾನು (ಶ್ರೀಕೃಷ್ಣನು) ಕೂಡ ಹಗಲಿರುಳು ಅವನ ಹತ್ತಿರವೇ ನಿಂತಿರುತ್ತೇನೆ ಇಷ್ಟೊಂದು ಗುರುಪ್ರೇಮದಿಂದ ನಾನು (ಕೃಷ್ಣ) ಮರುಳಾಗಿದ್ದೇನ ನನಗೆ ನನ್ನ ಭಕ್ತನ ಬಗ್ಗೆ ಅಷ್ಟೊಂದು ಅಭಿರುಚಿಯಿರುವದಿಲ್ಲ ಆದರೆ ಗುರುಭಕ್ತನ ಬಗ್ಗೆ ನನಗೆ ಬಹಳೇ ಅಭಿರುಚಿಯಿರುತ್ತದೆ ಆದರೆ ಸತ್ಸಂಗತಿ ವಿನಃ ಪ್ರತ್ಯಕ್ಷ ಉತ್ತಮ ಸದ್ಭಕ್ತಿಯು ಎಂದಿಗೂ ಪ್ರಾಪ್ತವಾಗಲಾರದು

ನನ್ನ ಪ್ರಾಪ್ತಿಗಾಗಿ ಭಕ್ತಿಮಾರ್ಗ ಮತ್ತು ಜ್ಞಾನಮಾರ್ಗ ಹೀಗೆ ಎರಡು ಮಾರ್ಗಗಳಿರುತ್ತವೆ ಜ್ಞಾನಮಾರ್ಗವು ಬಹಳ ಬಿಕ್ಕಟ್ಟಿನದಾಗಿದೆ,ಆದರೆ ಭಕ್ತಿಮಾರ್ಗವು ನಿರ್ವಿಘ್ನತೆಯಿಂದ ಭಕ್ತನನ್ನು ನನ್ನೆಡೆಗೆ ಮುಟ್ಟಿಸುತ್ತದೆ ಈ ಸಂಸಾರಸಾಗರದಿಂದ ಪಾರಾಗುವ ಅನೇಕ ಸಾಧನಗಳನ್ನು ಬಹಳ ಜನರು ಹೇಳಿದ್ದಾರೆ ಆದರೆ ಅವೆಲ್ಲವೂ ವ್ಯರ್ಥವಾಗಿವೆಯೆಂದು ತಿಃ ಅನುಭವದ ಕೊನೆಗೆ ನನ್ನ ಭಕ್ತಿಮಾರ್ಗವೇ ಶ್ರೇಷ್ಠ ವಾಗಿದೆಯೆಂದು ಕಂಡುಬರುತ್ತದೆ—

—ಎಲ್ಲ ಸಾಧನ ಮಾರ್ಗಗಳಲ್ಲಿ ಸುಲಭ, ನಿರ್ವಿಘ್ನ, ನಿತ್ಯ ಮತ್ತು ಪವಿತ್ರವಾಗಿರು ವಂತಹ ಸಾಧನವೆಂದರೆ ಕೇವಲ ನನ್ನ ಭಕ್ತಿಮಾರ್ಗವಿರುತ್ತದೆ ಜ್ಞಾನಮಾರ್ಗವು ಭಕ್ತನನ್ನು ಮಧ್ಯದಲ್ಲಿಯೇ ವ್ಯಾಕುಲನನ್ನಾಗಿ ಮಾಡುತ್ತದೆ ತೋಟಕ್ಕೆ ನೀರು ಬಿಡುವದಕ್ಕಾಗಿ, ಮಟ್ಟ ಹೊಡೆಯುವದು ಇಲ್ಲವೆ ಕಾಲುವೆ ಮಾಡುವದು ಹೀಗೆ ಎರಡು ವಿಧಗಳಿರುತ್ತವೆ ಮಟ್ಟಿಯಿಂದ ಬಾವಿಯಲ್ಲಿ ನೀರನ್ನು ಜಗ್ಗುವದು ಮತ್ತು ಅದು ಕೂಡ ಬಹಳ ಪ್ರಯಾಸದಿಂದ ಅಲ್ಪಸ್ವಲ್ಪ ನೀರು ದೊರಕುತ್ತದೆ ಮೊಟ್ಟ ಮೊದಲು ಮಟ್ಟಿ, ಹಗ್ಗ ಮತ್ತು ಎತ್ತಿನ ಜೋಡಿಯ ತಯಾರಿ ಬೇಕಾಗುತ್ತದ ಆಮೇಲೆ ಆ ಎತ್ತುಗಳಿಗ ಚಬಕದ ಏಟುಗಳನ್ನು ಕೊಡುತ್ತ ಮತ್ತು ಆ ಎತ್ತುಗಳು ಹಿಂದೆ ಮುಂದೆ ಹೋಗುವಾಗ, ಬರುವಾಗ ಜಗ್ಗಾಡುತ್ತ, ಅವುಗಳನ್ನು ಹೈರಾಣ ಮಾಡಿದಾಗ್ಗ ಎಲ್ಲಿಯೊದರೂ ತೋಟದ ಒಂದು ಭಾಗವು ಹಸಿಯಾಗುವದು ಅದರಲ್ಲಿಯೂ ಒಂದು ವೇಳೆ ಮಟ್ಟಯೇ ಒಡೆಯುತ್ತದ ಇಲ್ಲವೆ ಹಗ್ಗವೇ ಹರಿಯುತ್ತದೆ ಅಥವಾ ಒಮ್ಮೊಂದೂಮ್ಮೆಲೇ ಒಂದು ಎತ್ತು ಬೇನ ಬೀಳುತ್ತದೆ ಇಲ್ಲವೆ ಸಾಯುತ್ತದೆ ಹೀಗಾಯಿತೆಂದರೆ ಕೊಡಲೆ ಭೂಮಿಯು ಬತ್ತುತ್ತದ ಮತ್ತು ಕೈಗೆ ಬಂದ ಬೆಳೆಯು ಸುಟ್ಟು ಹೋಗುತ್ತದೆ ಆದರೆ ನದಿಯ ಕಾಲುವಯ ರೀತಿಯು ಮಾತ್ರ ಹೀಗಿರುವದಿಲ್ಲ ಒಮ್ಮೆ ಕಾಲುವೆಯನ್ನು ತಯಾರಿಸಿ ನೀರನ್ನು ಬಿಟ್ಟರೆ, ಅದರಲ್ಲಿ ಹಗಲಿರುಳೂ ನೀರು ಒಂದೇ ಸವನೇ ಹರಿಯುತ್ತಲೇ ಇರುತ್ತದೆ ಜ್ಞಾನವು ಮಟ್ಟಯ ನೀರಿನಂತೆ ಇರುವದು ವೇದಶಾಸ್ತ್ರವನ್ನೋದಿ ನಿತ್ಯಾನಿತ್ಯದ ವಿಚಾರ ಮಾಡುವದಕ್ಕೋಸ್ಕರ ಮಾರ್ಮಿಕ ಪಂಡಿ ತರು ಅಣಿಯಾಗುತ್ತಾರೆ ಅದರಲ್ಲಿ ಒಬ್ಬನು ಕರ್ಮಮಾರ್ಗವನ್ನು ಪ್ರತಿಪಾದಿಸುತ್ತಾನೆ ಮತ್ತೊಬ್ಬನು ಸನ್ಯಾಸದತ್ತ ಮನಸ್ಸನ್ನು ಒಲಿಸಿ ಮುಂಡನ ಮಾಡಿಸುತ್ತಾನೆ ಮತ್ತೆ ಕೆಲವರು, ದೇಹವನ್ನು ಈ ರೀತಿಯಾಗಿ ದುಃಖಪಡಿಸುವದು ಒಳ್ಳೇಯದಲ್ಲವೆನ್ನುತ್ತಾರೆ

ಕೆಲವರು ಎಲ್ಲವೂ ಪ್ರಾರಬ್ಧಾಧೀನವಾಗಿರುತ್ತದೆ, ಎನ್ನುತ್ತಾರೆ ಕೆಲವರು ಶಬ್ದಜ್ಞಾನವೇ ಸತ್ಯವಾಗಿದೆಯೆಂದು ಹೇಳುತ್ತಾರೆ ಕೆಲವರಂತೂ ಈ ಸಂದರ್ಭದಲ್ಲಿ ಮೌನವನ್ನು ಧರಿಸಿ, ಬಹಳ ವಟವಟ ಮಾಡದಿರುವದೇ ಒಳಿತು ಎನ್ನುತ್ತಾರೆ ಕೆಲವರು ತಪವೇ ಶ್ರೇಷ್ಠವಾಗಿದೆಯೆನ್ನುತ್ತಾರೆ ಕೆಲವರು ವಿದ್ವತ್ತೆಯನ್ನು ಬಿಟ್ಟುಬಿಡಬೇಕು ಯಾವನ ಕಲ್ಪನೆಯು ತೀಕ್ಷ್ಣವಾಗಿದೆಯೋ ನಿಜವಾಗಿಯೂ ಅವನೇ ಜಾಣನು—

—ಮೂರ್ಖನಿಗೆ ಎಷ್ಟು ಹೇಳಬೇಕು? ಕೆಲವರು ಮಂತ್ರದ ಪುರಶ್ಚರಣವೇ ಎಲ್ಲದಕ್ಕಿಂತ ಮಿಗಿಲಾಗಿದೆ ಅನ್ನುತ್ತಾರೆ ಮತ್ತೆ ಅನೇಕರು ವೇದಾಧ್ಯಯನವೇ ಶ್ರೇಷ್ಠವಾಗಿದೆಯೆಂದರೆ, ಬೇರೆಯವರು ದಾನ ಮಾಡುವದೇ ಒಳ್ಳೆಯದೆನ್ನುತ್ತಾರೆ ಮತ್ತೊಬ್ಬನು ಇವುಗಳೆಲ್ಲವನ್ನೂ ಅಳಿಸಿ, ಜನರಿಗೆ ಯೋಗಮಾರ್ಗದ ಖಟಪಿಟಿಯಲ್ಲಿ ತೊಡಕಿಸುತ್ತಾರೆ ಅವನು ಅವರಿಗೆ ಆಸನ ಮತ್ತು ಮುದ್ರೆಯ ರುಚಿದೋರಿ ಬಯಲಿನಲ್ಲಿ ಕೂಡ್ರಿಸುತ್ತಾನೆ ಹೀಗೆ ಬಹಳ ಪ್ರಕಾರವಾಗಿ ವಾದ ಮಾಡುತ್ತ ಮಾಡುತ್ತ ಯಾವದಾದರೊಂದು ನಿಶ್ಚಯಕ್ಕೆ ಬರುವದಿಲ್ಲ ಹೆಸರಾದ ಪಂಡಿತರಿಗೆ ಜ್ಞಾನಾಭಿಮಾನವಿರುವದರಿಂದ ಅವರಿಗೆ ನಿಜವಾದ ಜ್ಞಾನವು ತಿಳಿಯುವದೇ ಇಲ್ಲ ಜ್ಞಾನಮಾರ್ಗದ ಅವಸ್ಥೆಯು ಹೀಗಿರುತ್ತದೆ ಅದರಲ್ಲಿ ಅನೇಕ ತರಹದ ವಿಘ್ನಗಳು ಉತ್ಪನ್ನವಾಗುತ್ತವೆ ವಿಕಲ್ಪದಿಂದಲೇ ವಿದ್ವತ್ತೆಯು ಇಲ್ಲದಂತಾಗುತ್ತದೆ ಆದ್ದರಿಂದ ವಿದ್ವತ್ತೆಯಿಂದ ನನ್ನ ಪ್ರಾಪ್ತಿಯಾಗುವದಿಲ್ಲ ನನ್ನ ಭಕ್ತಿಯೇನು ಅಂತಹದಲ್ಲ, ಭಕ್ತಿಸಂಪನ್ನರಾದ, ಜನರಿಗೆ ನನ್ನ (ಕೃಷ್ಣನ) ನಾಮಸ್ಮರಣ ಮಾಡುವದರಿಂದಲೇ ನನ್ನ ಪ್ರಾಪ್ತಿಯಾಗುತ್ತದೆ ನಾಮದಿಂದ ಎಷ್ಟು ಜನರು ಉದ್ಧರಿಸಿದರೋ ಅದನ್ನು ಎಣಿಸುವದು ಅಸಾಧ್ಯವಾಗಿದೆ ಭಾಗವತದಲ್ಲಿ ಇದನ್ನೇ ಹೇಳಿದ್ದಾರೆ ನನ್ನ ಗುಣವರ್ಣನೆಯನ್ನು ಮಾಡುತ್ತಿರುವಾಗ ಇಲ್ಲವೆ ಹರಿಕಥಾ ನಾಮ ಸಂಕೀರ್ತನೆ ಮಾಡುವಾಗ ಅಲ್ಲಿ ವಿಘ್ನಗಳ ಪ್ರವೇಶವಾಗುವದೇ ಇಲ್ಲ ಹರಿನಾಮದ ಗರ್ಜನೆಯು ಕೋಟೆಯಂತೆ ರಕ್ಷಿಸುತ್ತದ —

— ಹರಿನಾಮದ ಘೋಷವು ಎಲ್ಲಿ ನಡೆಯುತ್ತಿದೆಯೋ, ಅಲ್ಲಿ ವಿಘ್ನಗಳು ಎಲ್ಲಿಂದ ಬರುವವು? ನನ್ನ ಭಕ್ತನೆದುರಿಗೆ ಅವು ಯಃಪಲಾಯನ ಮಾಡುತ್ತವ ಹಾಗೂ ಮುಕ್ತಿಯ ಬಾಗಿಲವು ತೆರೆಯುತ್ತದೆ ನನ್ನ ಭಕ್ತನು ನಿರಿಚ್ಛನಿರುವದರಿಂದ, ಅವನು ಮುಕ್ತಿಯನ್ನೂ ಕೂಡ ಇಚ್ಛಿಸುವದಿಲ್ಲ ಆದ್ದರಿಂದಲೇ ನಾನು ಶ್ರೀಕೃಷ್ಣನು ಅವನ ಭಾವಾರ್ಥಕ್ಕೆ ಮರುಳಾಗಿರುತ್ತೇನೆ —

—ತಾತ್ಪರ್ಯವೇನೆಂದರ, ನಿರ್ವಿಘ್ನದಿಂದ ನನ್ನಡಿಗೆ ಬರಲು (ಕೃಷ್ಣನ ಹತ್ತಿರ) ಭಕ್ತಿಯ ವಿನಃ ಬೇರೆ ಹಾದಿಯೇ ಇರುವದಿಲ್ಲ ಇದೇ ತ್ರಿವಾರ ಸತ್ಯವಿದ್ದು, ಎಲ್ಲ ರೀತಿಯಿಂದಲೂ ನಿಜವಿದ ಭಕ್ತಿಯೇ ನನಗೆ(ಕೃಷ್ಣನಿಗೆ) ನಿಜವಾಗಿಯೂ ರುಚಿಸುತ್ತದೆ ಹೀಗೆ ಸುಲಭವಾಗಿರುವ ತನ್ನ ಭಕ್ತಿಯನ್ನು ಅತ್ಯಂತ ಪ್ರೀತಿಯಿಂದ ಸವಿಸ್ತಾರವಾಗಿ ಹೇಳುವಂತಹನಾದನು ಉದ್ಧವನಿಗೆ ಹರಿಭಕ್ತಿಯ ಅಭಿರುಚಿಯಂತೂ ಇದ್ದೇ ಇತ್ತು

ಅಂತಲೇ ಅವನು ಈ ರೀತಿಯಾಗಿ ಕೇಳಿದ ತಕ್ಷಣ, ಆನಂದಾತಿಶಯದ ಗೋಪುರವನ್ನೇ ಕಟ್ಟಿದನು ಉದ್ಧವನ ಮನಸ್ಸಿನಲ್ಲಿದ್ದುದೇ ಶ್ರೀಕೃಷ್ಣನು ಹೇಳಿದ್ದರಿಂದ, ಅವನು ಹರ್ಷಾತಿರೇಕದಿಂದ ಕುಣಿಯಲಾರಂಭಿಸಿದನು ಅವನು ಜೀವಭಾವದಿಂದ ಶ್ರೀಕೃಷ್ಣನಿಗೆ ಆರತಿ ಎತ್ತಿದನು ಮತ್ತು ಹೀಗೆ ಮಾತನಾಡಿದನು "ಇಷ್ಟು ನಿನ್ನ ಭಕ್ತಿಯು ಸುಲಭವಾಗಿದ್ದರ, ಎಲ್ಲ ಜನರು ನಿನ್ನ ಭಕ್ತಿಯನ್ನೇಕೆ ಮಾಡುವದಿಲ್ಲ?" ಆವಾಗ್ಗೆ ದೇವರು (ಶ್ರೀಕೃಷ್ಣನು) ಅಂದರು "ಉದ್ಧವಾ! ಭಾಗ್ಯವಿಲ್ಲದೆಯೇ ನನ್ನ ಭಕ್ತಿಯು ಎಂದಿಗೂ ಸಾಧ್ಯವಾಗಲಾರದು—

—ಕೋಟಿ ಕೋಟಿ ಪುಣ್ಯದ ಸಂಪತ್ತಿಯ ಸಂಚಯವಿದ್ದರೇನೇ, ನನ್ನ (ಕೃಷ್ಣನ) ಸಂತರ (ಸದ್ಗುರುವಿನ) ಸಹವಾಸವು ದೊರಕುತ್ತದೆ ಮತ್ತು ಸತ್ಸಂಗತಿಯಿಂದಲೇ ನನ್ನ ಭಕ್ತಿಯ ಉಗಮವಾಗುತ್ತದೆ ಉದ್ಧವಾ! ಸತ್ಸಂಗತಿಯಿಂದಲೆ ಭಕ್ತಿಯ ಪ್ರಾಪ್ತಿ ಯಾಗುತ್ತದೆ ಇದನ್ನು ನೀನು ಖಾತ್ರಿಪೂರ್ವಕವಾಗಿ ತಿಳಿದುಕೋ " "ನನ್ನ ಭಕ್ತಿಯು ಸದ್ಗುರುವಿನ ಹತ್ತಿರ ದಾಸಿಯಾಗಿ ಕಾದಿರುತ್ತದೆ "ಸದ್ಗುರುವಿಗೆ ನೀನು 'ನನ್ನನು' ಎಂದು ಅನ್ನುವಿಯಾದರ, ಬೇರೆಯವರನ್ನು ಯಾರ ಬಳಿ ಕಳುಹಿಸಿದಿ? ಹಾಗೂ ನಿನ್ನ ಭಕ್ತಿಯು ಹಗಲಿರುಳೂ ಸಂತರ ಹತ್ತಿರವೇ ಏಕೆ ಇರುತ್ತದೆ? ಉದ್ಧವಾ! ಹೀಗೆ ಮನದಲ್ಲಿ ವಿಕಲ್ಪ ಉಂಟಾಗಲು ಇಲ್ಲ ಆಕ್ಷೇಪವೇ ಇಲ್ಲ ಸಂತರ ಭಜನೆಯಲ್ಲ ನನಗೆ ಪೂರ್ಣ ಶ್ರದ್ಧೆಯು ಇರುತ್ತದೆ ಅಂಥವರ ಮೇಲೆ ಭಕ್ತಿಯದೇನು ದೊಡ್ಡ ಮಹಾ? ಆದರೆ "ನೀನು ಸಂತರ ಸೇವೆಯನ್ನು ಮಾಡುವ ಕಾರಣವೇನು?" ಎಂದು ನೀನು ಕೇಳಬಹುದು ಆದರೆ, ಯಾರಿಂದಲೂ ತಡೆಗಟ್ಟಲಾರದಂತಹವನಾದ ಅನಂತನಾದ ನನ್ನನ್ನು ಅವರು ತಮ್ಮ ಭಕ್ತಿಯ ಪಾಶದಿಂದ ಕಟ್ಟಿಹಾಕಿದ್ದಾರ ಈಗ ಅವರು ಯಾವ ಉದ್ದೇಶದಿಂದ ಕಟ್ಟಿದ್ದಾರೆಂಬುವ ಕಾರಣವನ್ನೂ ನಿನಗೆ ಹೇಳುತ್ತೇನ ಅವರಿಗೆ ಜಗತ್ತಿನಲ್ಲಿ ನನ್ನ ಹೊರತು ಬೇರೆ ಅರ್ಥವೇ ಗೊತ್ತಿರುವದಿಲ್ಲ ಅವರು ತಮ್ಮ ಸ್ವಕರ್ಮವನ್ನೂ ನನಗೇ ಅರ್ಪಿಸಿರುತ್ತಾರೆ ಅವರು ತಮ್ಮ ಎಲ್ಲ ಧರ್ಮ, ದೇಹ, ಮನ, ರೂಪ, ನಾಮ ಮತ್ತು ಆಶ್ರಮ ಧರ್ಮವನ್ನೂ ನನಗೇ ಅರ್ಪಿಸಿರುತ್ತಾರೆ—

– ಕಲ್ಪಾಂತದ ಸಮಯದಲ್ಲಾಗುವ, ಗಡಗಡಾಟದ ಹಾಹಾಕಾರದ ಭಯದಿಂದ ಎಲ್ಲ ಜಗತ್ತು ಕಂಪಿಸುತ್ತದೆ ಮತ್ತು ಲಯ ಹೊಂದುತ್ತದೆ ಈ ಪ್ರಕಾರದಿಂದ ಸಂಕಟ-ಕಷ್ಟಗಳು ಬಂದೊದಗಿದರೂ, ಅವರು ಧೈರ್ಯದಿಂದ ನನ್ನಿಂದ ಅಲ್ಲಾಡುವದಿಲ್ಲ ಆಕಾಶವು ಕಳಚಿ ಬಿದ್ದರೂ, ಅವರು ಆಶ್ರಯಕ್ಕಾಗಿ ನನ್ನ ಹೊರತು ಬೇರೆಯವರ ದಾರಿ ಕಾಯುವದಿಲ್ಲ ಆದ್ದರಿಂದಲೇ ಶ್ರೀಕೃಷ್ಣನಾದ ನಾನು ಅವರ ದಾಸನಾಗಿದ್ದೇನೆ ಭಾವಾರ್ಥದ ಮಹಿಮೆಯು ಅಗಾಧವಾಗಿದೆ ಅಂತಲೇ ಅವರು ವಿಶ್ವಾತ್ಮನಾದ ನನ್ನ ಆತ್ಮನಾಗಿರುತ್ತಾರ ಏಕೆ ನಮ್ಮಿಬ್ಬರಲ್ಲಿ ಐಕ್ಯವಿರುತ್ತದೆ ಆದುದರಿಂದಲೇ ಪುರುಷೋತ್ತಮನಾದ ನನ್ನನ್ನು ವಶಪಡಿಸಿಕೊಂಡಿದ್ದಾರೆ ಸದ್ಗುರು (ಸಂತ) ಮತ್ತು

ನನ್ನಲ್ಲಿ (ಕೃಷ್ಣ) ಕಲ್ಪಾಂತವಾದರೂ ಕೂಡ ಭೇದಭಾವವಿಲ್ಲವೆಂಬುದು ಲಕ್ಷದಲ್ಲಿರಲಿ ಇದು ನನ್ನ ಅಂತರ್ಗತವಾದ ಎಲ್ಲ ಗುಪ್ತ ರಹಸ್ಯವನ್ನು ನಾನು ನಿನಗೆ ಹೇಳಿದೆನು ನನ್ನ ಭಕ್ತಿಯಿಂದಲೇ ಸಂತರು ನನ್ನವರಾಗಿದ್ದಾರೆ ಬೇರೆ ಜನರು ನನ್ನ ಭಜನೆ ಯನ್ನು ಮಾಡುವದಿಲ್ಲ ಆದ್ದರಿಂದ ನಾನು (ಶ್ರೀಕೃಷ್ಣ) ಅವರನ್ನು ದೈವಾಧೀನರನ್ನಾಗಿ ಮಾಡಿ, ಕಲಿಕಾಳನ ಸ್ವಾಧೀನರನ್ನಾಗಿ ಮಾಡಿರುವನು ಕಾಳನಿಗೆ ನನ್ನ (ಕೃಷ್ಣ) ಸಂತರ ಬಳಿಯಲ್ಲಿ ಬರುವ ಸಾಮರ್ಥ್ಯವಿಲ್ಲ ಏಕೆಂದರೆ ನಾನು (ಕೃಷ್ಣ)ಯಾವಾಗಲೂ ಅವರನ್ನು ಸಂರಕ್ಷಿಸುವವನಾಗಿರುವೆನು ಆದ್ದರಿಂದ ಅವರು ಕಲಿಕಾಳನ ಹೊಡೆತ (ಏಟು)ಕ್ಕೆ ಸಿಗುವದಿಲ್ಲ ಈ ಪ್ರಕಾರವಾಗಿ ಸಂತರ ಎಲ್ಲ ಕೆಲಸವನ್ನು ಮಾಡಲು ನನಗೆ ನಾಚಿಕೆಯೆನಿಸುವದಿಲ್ಲ ಉದ್ಧವಾ! ಈಗ ನಾನು, ನನ್ನ ಅತ್ಯಂತ ರಹಸ್ಯಮಯವಾದ ಗೌಪ್ಯವನ್ನು ನಿನಗೆ ಹೇಳುವೆನು ಯದುವಂಶಕ್ಕೆ ಭೂಷಣನಾದ ಉದ್ಧವನೇ! ಕೇಳು ನೀನು ಸ್ವಗೋತ್ರನಿರುವಿ, ಸೇವಕನಿರುವಿ ಹಾಗೂ ನನ್ನ ಸಹೃದಯ ಮಿತ್ರನೂ ಇರುವಿಯಾದ್ದರಿಂದ, ನಿನ್ನಿಂದ ನನ್ನ ಗುಪ್ತವಾದ ರಹಸ್ಯವನ್ನು ಬಚ್ಚಿಡುವ ಧೈರ್ಯವು ನನಗಾಗುವದಿಲ್ಲ ಆದುದರಿಂದ, ನನ್ನ ಗೌಪ್ಯದಲ್ಲಿಯ ಗುಪ್ತವಾದ ಇಂಗಿತ ಇಲ್ಲ ಆ ಇಂಗಿತದಲ್ಲಿಯ ಗುಪ್ತ ಭಾಂಡಾರ ಮತ್ತು ಆ ಭಾಂಡಾರದಲ್ಲಿಯ ಗುಪ್ತತತ್ವವನ್ನು ಈಗ ನಿಜವಾಗಲೂ ನಿನಗೆ ಹೇಳುವನು ನಿಜವಾಗಿಯೂ ಇಂತಹ ಗೌಪ್ಯದಲ್ಲಿಯ ಗೌಪ್ಯವನ್ನು ಇದುವರೆಗ ನಾನು ಯಾರಿಗೂ ಹೇಳಿಲ್ಲ ಆದರೆ ನೀನು ನನ್ನ ಜಿವಲಗ ಮಿತ್ರನೂ ಮತ್ತು ಸಹಚಾರಿಯೂ ಇರುವಿ, ಅದಲ್ಲದೆ ನನ್ನ ಮೇಲೆ ನಿನ್ನ ಅಪ್ರತಿಮ ಪ್ರೀತಿಯೂ ಇದೆ ಮತ್ತು ಆ ಪ್ರೀತಿಯು ಅಕೃತ್ರಿಮವಾಗಿದೆ ಹಾಗೂ ನೀನು ನನ್ನ ಅನನ್ಯ ಭಕ್ತನೂ ಇರುವಿ ಮತ್ತು ಆ ಭಕ್ತಿಯಂತೆಯೇ ನಿನ್ನಲ್ಲಿ ವಿರಕ್ತಿಯೂ ಇರುವದು ನಿನ್ನಲ್ಲಿ ಪರಿಪೂರ್ಣ ನಿಷ್ಕಪಟ ವೃತ್ತಿಯೂ ಇರುತ್ತದೆ ನಿಜವಾಗಿಯೂ ನೋಡಲಾಗಿ, ಯಾದವವಂಶದಲ್ಲಿ ನನ್ನ ಸರಿಸಮಾನ ಉದ್ಧವಾ! ನೀನೊಬ್ಬನೇ ಇರುವಿ ನೀನು ನನ್ನಂತೆ ಯೋಗ್ಯತೆಯುಳ್ಳವನೂ ಮತ್ತು ನನ್ನ ಗೋತ್ರಜನಿದ್ದು ಸೇವಕನೂ ಇರುವಿ, ಇದೇ ಆಶ್ಚರ್ಯವಾಗಿದೆ—

—ನೀನು ಕೆಲಸವಾಗುವತನಕವೇ ಸೇವಕನಿರುವದಿಲ್ಲ ಆದರೆ ಪೂರ್ಣ ಪ್ರಾಮಾಣಿಕನಾದ ಸೇವಕನಾಗಿರುವಿ ನಿನ್ನ ಒಂದೊಂದು ಗುಣವನ್ನು ಎಷ್ಟೆಂದು ವರ್ಣಿಸಲಿ? ನಿಜವಾಗಲೂ ಇದೆಲ್ಲವನ್ನೂ ಹೇಳುವಾಗ ನನಗ ಆನಂದವೇ ಆಗಿದ ಆದುದರಿಂದಲೇ ಅದು ಗುಪ್ತ ರಹಸ್ಯವಾಗಿದ್ದರೂ, ನಿನ್ನಿಂದ ಅದನ್ನು ಬಚ್ಚಿಡುವ ಸಾಹಸವು ನನಗಾಗುವದಿಲ್ಲ ಹೀಗೆಂದು ಭಗವಂತನು, ಎರಡೂ ಹೃದಯಗಳು ಒಂದು ಗೂಡುವಂತೆ ಉದ್ಧವನನ್ನು ಆಲಂಗಿಸಿದಾಗಲೇ, ಚಿದಾನಂದ ಸ್ವರೂಪನಾದ ಶ್ರೀಕೃಷ್ಣನು ತೃಪ್ತನಾದನು ಆಮೇಲೆ ಕೃಷ್ಣನು ಅಂದನು "ಎಚ್ಚರದಿಂದ ಚೆನ್ನಾಗಿ ಲಕ್ಷಗೊಟ್ಟು ಆದರದಿಂದ ನನ್ನ ಭಾಷಣವನ್ನು ಕೇಳು ಈ ನನ್ನ ಗುಹ್ಯಜ್ಞಾನವು ನಿನಗೆ ಪ್ರಾಪ್ತ

ವಾಯಿತೆಂಪರೆ, ನಿನ್ನಿಂದ ಎಲ್ಲ ಕುಲವು ಉದ್ಧಾರವಾಗುವದು ಕಾರಣವೇನೆಂದರೆ ಯಾವ ವಂಶದಲ್ಲಿ ಬ್ರಹ್ಮಜ್ಞಾನಿಯು ಜನಿಸುವನೋ, ಆ ವಂಶವು ಅವನಿಂದಲೇ ಪವಿತ್ರವಾಗುತ್ತದ ” ಈ ನನ್ನ ಭಾಷಣವು ಅತ್ಯಂತ ನಿಜವಾಗಿದೆಯೆಂದು ತಿಳಿ—

—ಈ ವಿಷಯವಾಗಿ ಮನಸ್ಸಿನಲ್ಲಿ ಎಳ್ಳಷ್ಟೂ ಸಂದೇಹವನ್ನು ತರಬಾರದು ಆದರೆ ನೀನು ಅನ್ನಬಹುದು “ನೀನು ಸ್ವತಃ ಪೂರ್ಣಬ್ರಹ್ಮನಾದ ನಾರಾಯಣನು ಯದು ವಂಶದಲ್ಲಿ ಅವತರಿಸಿರುವಿ ಅಂದಮೇಲೆ ಈ ವಂಶವು ಆದರಿಂದಲೇ ಉದ್ಧಾರವಾಯಿತು ನಿನ್ನೆದುರಿಗೆ ನನ್ನ ಜ್ಞಾನವು ಎಷ್ಟರದು?'' ಹೀಗಂದರೆ ನಾಮ, ರೂಪ, ಜಾತಿ, ಗೋತ್ರ ಇವೆಲ್ಲವುಗಳಿಂದ ನಾನು ಅಲಿಪ್ತನಾಗಿರುತ್ತೇನೆ ಜಗತ್ತಿನಲ್ಲಿಯ ಎಲ್ಲ ಕುಲಗಳಿಂದ ನಾನು ಕುಲವಂತನಾಗಿದ್ದೇನೆ ಕಾರಣವೇನೆಂದರೆ ಎಲ್ಲ ಜಗತ್ತೇ ನನ್ನ ಗೋತ್ರವಾಗಿರುತ್ತದೆ ಎಂಬುದನ್ನು ಲಕ್ಷದಲ್ಲಿಟ್ಟು ನನ್ನ ನಿಜವಾದ ಗೌಪ್ಯದ ಸಾರವನ್ನು ನಿನಗೆ ಹೇಳುವೆನು ಅದರಿಂದ ಎಲ್ಲ ಜಗತ್ತಿನ ಉದ್ಧಾರವಾಗುವದು” ಎಂದು ಶ್ರೀಕೃಷ್ಣನು ಹೇಳಿದನು ಆ ಗುಹ್ಯ ಜ್ಞಾನವನ್ನು ಕೇಳುವದಕ್ಕಾಗಿ ಉದ್ಧವನು ತನ್ನ ಸರ್ವಾಂಗವನ್ನೇ ಕಿವಿಯನ್ನಾಗಿ ಮಾಡಿದನು

## ಪ್ರಕರಣ ೨೨

ಅಷ್ಟಾಂಗಯೋಗದಲ್ಲಿ ನನ್ನನ್ನು ವಶಮಾಡಿಕೊಳ್ಳುವ ಸಾಮರ್ಥ್ಯವಿಲ್ಲ ಜಗತ್ತಿನಲ್ಲಿಯ ನಿತ್ಯಾನಿತ್ಯದ ವಿಚಾರದಿಂದ ಕೂಡ ನನ್ನತನಕ ಬರಲಾಗುವದಿಲ್ಲ. ಇಲ್ಲವೆ ಸದ್ವೈವ ಪ್ರಕೃತಿ ಪುರುಷನ ವಿಚಾರ ಮಾಡುತ್ತಿರುವಾಗಲೂ, ಆ ಮಾನವನಿಗೆ ನನ್ನ ಸ್ಥಾನದವರಗೆ ಬರುವ ಸಾಮರ್ಥ್ಯವುಂಟಾಗುವದಿಲ್ಲವೆಂಬುದನ್ನು ಲಕ್ಷದಲ್ಲಿಡು ಅಹಿಂಸೆಯೂ ಕೂಡ ಗೊಂಡು ಎಲ್ಲ ಧರ್ಮ ಹಾಗೂ ಸತ್ಯ ಇತ್ಯಾದಿಕಗಳಿಂದ ನನ್ನ ಪ್ರಾಪ್ತಿಯು ಆಗುವದಿಲ್ಲ ವೇದಾಧ್ಯಯನವು ಶ್ರೇಷ್ಠವೆಂದು ಅನ್ನುತ್ತಾರ ಆದರೆ ಎಲ್ಲ ವೇದಗಳು ಮುಖೋದ್ಗತವಾಗಿದ್ದರೂ, ನನ್ನ (ಕೃಷ್ಣ) ಪ್ರಾಪ್ತಿಯಾಗುವದಿಲ್ಲ ಹಾಗಾದರ ಅವುಗಳ ಮುಂದೆ ಪಾಪ ಆ ತಪಶ್ಚರ್ಯೆದ ಗತಿ ಏನು? ಪಂಚಾಗ್ನಿಸಾಧನದ ಪ್ರಕಾರವಂತೂ ನಿರರ್ಥಕವಾಗಿದೆ ಕೃಚ್ಛ–ಚಾಂದ್ರಾಯಣ ವ್ರತಗಳಂತೂ ಹುಚ್ಚುತನ ಪಂದೆನಿಸಿದವು ಏಕೆಂದರೆ ಅವೆಲ್ಲವುಗಳನ್ನು ಆಚರಿಸಿದರೂ ನಾನು ಪ್ರಾಪ್ತನಾಗುವದಿಲ್ಲ ಯಾವನು ಮನಮುರವನ್ನು ತ್ಯಜಿಸಿ ವಿರಕ್ತನಾಗುವನೋ, ಇಲ್ಲವೆ ‘ವಿರಜಾ’ (ಎಂಪರೆ ಸಂನ್ಯಸ್ತನಾಗುವ ಮುನ್ನ ಮಾಡುವ ಹೋಮ) ಹೋಮವನ್ನಾಚರಿಸಿ ತನ್ನ ಸರ್ವಸ್ವವನ್ನೂ ಅಗರಲ್ಲಿ ಹವನ ಮಾಡುವನೋ, ಇಲ್ಲವೇ ಎಲ್ಲ ಸಾಧನಗಳಲ್ಲಿ ಶ್ರೇಷ್ಠವಾದ ಸನ್ಯಾಸವನ್ನು ಗ್ರಹಣ ಮಾಡುವನೋ, ಅವನಿಗೂ ಕೂಡ ಪರಮೇಶ್ವರನು ವಶವಾಗುವದಿಲ್ಲ ಶ್ರೌತಸ್ಮಾರ್ತ ಕರ್ಮಗಳನ್ನು ಮಾಡುತ್ತ ಮಾಡುತ್ತ ಕರ್ಮರ

ಜನರು ಹುಚ್ಚರಾದರು ಆದರೂ ನಾನು (ಶ್ರೀಕೃಷ್ಣ) ಅವರಿಗೆ ವಶವಾಗುವದಿಲ್ಲ (ದೊರಕುವದಿಲ್ಲ) ಪಾಪ, ಆ ಜನರಿಗೆ ಹೋಮ ಮಾಡುವಾಗ ಕಷ್ಟವನ್ನಷ್ಟೇ ಸಹಿಸ ಬೇಕಾಗುತ್ತದೆ ಆಕಳ ದಾನ ಕೊಟ್ಟರೂ, ಭೂಮಿಯ ದಾನ ಕೊಟ್ಟರೂ, ಎಳ್ಳು ದಾನ ಕೊಟ್ಟರೂ, ಇಲ್ಲವೆ ಸರ್ವ ಧನ-ಧಾನ್ಯದ ದಾನ ಕೊಟ್ಟರೂ ಅವರಲ್ಲಿಯ ಧಾತೃತ್ವದ ಅಭಿಮಾನವು ನಷ್ಟವಾಗುವ ವರೆಗೆ, ನಾನು (ಶ್ರೀಕೃಷ್ಣನು) ಅವರಿಗೆ ವಶವಾಗುವದಿಲ್ಲ ಇಲ್ಲವೆ ಸಂಕಷ್ಟಿ ಚತುರ್ಥಿ, ವಿಷ್ಣುಪಂಚಕ ಬುಧಾಷ್ಟಮಿ ಮುಂತಾದ ಅನೇಕ ವ್ರತ ವೈಕಲ್ಯವನ್ನು ನಿಯಮದಿಂದ ಮಾಡಿದರೂ, ನಾನು (ಶ್ರೀಕೃಷ್ಣನು) ಅವರಿಗೂ ವಶವಾಗುವದಿಲ್ಲ ಇಲ್ಲವೇ ಎಲ್ಲವನ್ನೂ ವ್ಯಯ ಮಾಡಿ ಅಶ್ವಮೇಧ ಮತ್ತು ರಾಜಸೂಯ ಯಜ್ಞವನ್ನು ಯಥಾಸಾಂಗವಾಗಿ ನೆರವೇರಿಸಿದರೂ, ಅವರಿಗೆ ನನ್ನ ಪ್ರಾಪ್ತಿಯನ್ನು ಮಾಡಿಕೊಳ್ಳುವ ಯೋಗ್ಯತೆಯು ಬರುವದಿಲ್ಲ ಅವುಗಳಿಂದ ನಾನೇನೂ ಅವರಿಗೆ ವಶವಾಗುವದಿಲ್ಲ ಅನೇಕ ವಿಶ್ರಾಮ ಧಾಮಗಳನ್ನು ಕಟ್ಟಿಸಿದರೂ, ಇಲ್ಲವೆ ಬೇಕಾದಷ್ಟು ಸ್ಮಾರ್ತ ಕರ್ಮಗಳನ್ನಾಚರಿಸಿದರೂ ಆತ್ಮಾರಾಮನಾದ ನಾನು (ಕೃಷ್ಣನು) ಅವರಿಗೆ ಭೆಟ್ಟಿಯಾಗುವದಿಲ್ಲ ಇಲ್ಲವೆ ಕೆರೆ ಬಾವಿಗಳನ್ನು ಕಟ್ಟಿದರೂ, ತೋಟ ಪಟ್ಟಿಗಳನ್ನು ಮಾಡಿದರೂ ದಾರಿಕಾರರಿಗಾಗಿ ವೃಕ್ಷಗಳನ್ನು ಹಚ್ಚಿದರೂ ವನದಲ್ಲಿ ವಾಂತಸ್ಥರಿಗೋಸ್ಕರ ವಿಶ್ರಾಂತಿ ಗೃಹಗಳನ್ನು ಕಟ್ಟಿದರೂ ಕೂಡ ಅವರಿಗೆ ನನ್ನ ಪ್ರಾಪ್ತಿಯಾಗುವದಿಲ್ಲ—

—ಅನೇಕ ತರಹದ ವೇದ ಮಂತ್ರಗಳಿರಲಿ ಅನೇಕ ಪ್ರಕಾರದ ಗುಪ್ತಮಂತ್ರಗಳಿರಲಿ ಇಲ್ಲವೇ ಚಿತ್ರ ವಿಚಿತ್ರವಾದಂತಹ ವಿಧಿ ವಿಧಾನಗಳಿರಲಿ ಮತ್ತು ಅವುಗಳ ಸಾಮರ್ಥ್ಯ ಮತ್ತು ಪಾವಿತ್ರತೆಯು ಎಷ್ಟು ಬೇಕಾದಷ್ಟಿದ್ದರೂ ಸಹ, ಅವುಗಳಿಗೆ ನನ್ನ (ಶ್ರೀಕೃಷ್ಣನ) ಪ್ರಾಪ್ತಿಯನ್ನು ಮಾಡಿಕೊಡುವ ಸಾಮರ್ಥ್ಯವು, ಸ್ವತಂತ್ರ ರೀತಿಯಾಗಿರುವದಿಲ್ಲ ಪುಷ್ಕರ ಮುಂತಾದ ತೀರ್ಥಗಳಿರುತ್ತವೆ ಮತ್ತು ಅವುಗಳಲ್ಲಿ ಪಾಪಕೃತ್ಯವನ್ನು ನಾಶ ಮಾಡುವ ಸಾಮರ್ಥ್ಯವೂ ಇದೆ ಆದರೆ ಬೇಗನೆ ನನ್ನ ಪ್ರಾಪ್ತಿಯನ್ನು ಮಾಡಿಕೊಡುವ ಸಾಮರ್ಥ್ಯವು ಅವುಗಳಲ್ಲಿಲ್ಲ ಇಲ್ಲವೆ ಯಾರಾದರೂ ಹಗಲಿರುಳೂ ಯಮನಿಯಮದ ಅಭ್ಯಾಸವನ್ನು ಮಾಡುತ್ತಾರೆ ಅಥವಾ ಕೆಲವರು ಅನೇಕ ತರಹದ ಸಾಧನೆಗಳನ್ನು ಮಾಡಿ ದಣಿಯುತ್ತಾರೆ, ಆದರೆ ಆ ಯಮನಿಯಮ ಗಳಿಗೆ ನನ್ನ ಬಾಗಿಲದ ವರೆಗೂ ಬರುವ ಸಾಮರ್ಥ್ಯವಿರುವದಿಲ್ಲ ಉದ್ಧವಾ! ಆ ಯಮ ನಿಯಮಗಳ ನಿರ್ಧಾರವನ್ನು ಹತ್ತೊಂಬತ್ತನೆಯ ಅಧ್ಯಾಯದಲ್ಲಿ ನಾನು ನಿನಗೆ ಸವಿಸ್ತಾರವಾಗಿ ಹೇಳುವೆನು ಏಕೆಂದರೆ ಈ ಹನ್ನೆರಡನೆಯ ಅಧ್ಯಾಯವು ಸಂಕ್ಷಿಪ್ತ ವಾಗಿರುತ್ತದೆ ಈ ಹನ್ನೆರಡು, ಹನ್ನೆರಡು ಯಮನಿಯಮಗಳಿಗೆ ಹಾಗೂ ಇತರ ಎಲ್ಲ ಸಾಧನೆಗಳಿಗೆ, ನನ್ನ (ಶ್ರೀಕೃಷ್ಣ) ನಗರಕ್ಕೆ (ವೈಕುಂಠಕ್ಕೆ) ಬರುವ ಮುಂದಿನ ದಾರಿಯೇ ಸಿಗುವದಿಲ್ಲ ಆದರೆ ಅವುಗಳು ಸಾಧುವನ್ನು ಆಶ್ರಯಿಸಿ, ನಂತರ ಬಾಗಿಲಿಗೆ

ಬಂದರೆ, ಅವುಗಳೆಲ್ಲವೂ ನನ್ನ ಮನೆಗೆ ಬಂದಂತಾಗುವದು ಹೀಗೆ ನನ್ನನ್ನು ಪ್ರಾಪ್ತಿ ಮಾಡಿಕೊಳ್ಳುವದು ರೂಢಿಯಲ್ಲಿದೆ ಆದರೆ ಸತ್ಸಂಗತಿಯು (ಸದ್ಗುರುವಿನ ಸಹವಾಸ) ಹೀಗಿರುವದಿಲ್ಲ ಸದ್ಗುರುವು ತನ್ನ ಸಹವಾಸದಿಂದ ಇತರ ಎಲ್ಲ ಸಹವಾಸದ ನಾಶವನ್ನು ಮಾಡುತ್ತಾನೆ ಮತ್ತು ರೋಖ ರೋಕವಾಗಿ ನನ್ನ ಪ್ರಾಪ್ತಿಯನ್ನು ಮಾಡಿಕೊಡುತ್ತಾನೆ ಸತ್ಸಂಗದಲ್ಲಿರುವ ಭಕ್ತನಿಗೆ, ನನ್ನ ಪ್ರಾಪ್ತಿಗಾಗಿ ಇನ್ನಿತರರ ಮೇಲೆ ಅವಲಂಬಿಸ ಬೇಕಾಗುವದಿಲ್ಲ ಭೃಂಗುರಟೆಯ ಸಹವಾಸದಿಂದ, ಬಾಲಹುಳದ ದೇಹದ ಸ್ಥಿತಿಯು ಹೇಗೆ ಬೇರೆಯಾಗಿ, ಭೃಂಗುರಟೆಯಂತೆಯೇ ಆಗುವದೋ, ಹಾಗೆಯೇ ಸದ್ಗುರುವಿನ ಸಹವಾಸದಿಂದ, ಭಕ್ತನ ಪರಿವರ್ತನೆಯು ಮದ್ರೂಪದಲ್ಲಿ ಆಗುತ್ತದೆ ಅದರಂತೆ ಚಂದನದ ಸುತ್ತುಮುತ್ತಲಿನ ವಾಸನೆಯಿಲ್ಲದ ಮತ್ತು ಉಪಯುಕ್ತವಿಲ್ಲದ ಗಿಡಗಳೂ ಕೂಡ ಚಂದನದ ಸಹವಾಸದಿಂದ ಸುಗಂಧಿತವಾಗಿ, ಅವುಗಳಿಗೆ ಬಹಳ ಮಹತ್ವ ಬರುತ್ತದೆ ಮತ್ತು ಅವುಗಳನ್ನು ದೇವ, ಬ್ರಾಹ್ಮಣರ ಪೂಜಗಾಗಿ ಉಪಯೋಗಿಸುತ್ತಾರೆ

## ಪ್ರಕರಣ ೨೩

ಸ್ತ್ರೀ ಪುತ್ರಾದಿಕಗಳ ಆಸೆಯನ್ನು ಬಿಟ್ಟು ಹಾಗೂ ಯೋಗ, ಯೋಗ್ಯತೆ, ಜಾಣತನ, ಕರ್ಮಠತನ ಮತ್ತು ಕರ್ಮದ ಅಭಿಮಾನವನ್ನು ದೂರಿಟ್ಟು ನನಗೆ ಶರಣು ಬರಬೇಕು ವೇದಾಧ್ಯಯನ, ಶಾಸ್ತ್ರಶ್ರವಣ, ಪ್ರವೃತ್ತಿ ಮತ್ತು ನಿವೃತ್ತಿಯನ್ನು ಬಿಟ್ಟು ನನಗೆ ಶರಣು ಬರಬೇಕು ಧನ ಮತ್ತು ಮಾನದ ಇಚ್ಛೆಯನ್ನು ಬಿಟ್ಟು ಜ್ಞಾತೃತ್ವ ಮತ್ತು ಪ್ರತಿಷ್ಠೆಯನ್ನು ಬಿಟ್ಟು, ನಾನಾ ತರಹದ ನಿಷ್ಠೆಯನ್ನು ಬಿಟ್ಟು, ಶ್ರೇಷ್ಠ ಈಶ್ವರನಾದ ನನಗೆ ಶರಣು ಬರಬೇಕು —

—ವೈದಿಕ ಮತ್ತು ಲೌಕಿಕ ಆಚರಣೆಯನ್ನು ಬಿಟ್ಟು, ಪುರಾಣೋಕ್ತ ಮತ್ತು ತಾಂತ್ರಿಕ ಆಚರಣೆಯನ್ನು ಬಿಟ್ಟು ನನಗೆ' (ಶ್ರೀಕೃಷ್ಣನಿಗೆ) ಶರಣು ಬಂದರೆ, ನನ್ನ ಆತ್ಮಸುಖವು ನಿನಗೆ ಸಿಗುವದು ಕುಲದ ಶ್ರೇಷ್ಠತ್ವವನ್ನೂ, ಜಾತಿಯ ಅಭಿಮಾನ ವನ್ನೂ ಮತ್ತು ಆಶ್ರಮಧರ್ಮದ ದೊಡ್ಡಸ್ತಿಕೆಯನ್ನೂ ಬಿಟ್ಟು ನನಗೆ ಶರಣು ಬರಬೇಕು ಜ್ಞಾನ ವ ಧ್ಯಾನ, ವಿಧಿವಿಧಾನ ಮತ್ತು ದೇಹಾಭಿಮಾನವನ್ನು ಬಿಟ್ಟು ನನಗೆ ಶರಣು ಬರಬೇಕು 'ಅಂತರ್ಯಾಮಿ' ಎಂದು ನನಗೆ ಅನ್ನುತ್ತಾರ ಏಕೆಂದರೆ ಪ್ರಾಮುಖ್ಯವಾಗಿ ಹೃದಯದಲ್ಲಿಯ ಭಾವನೆಯನ್ನು ನಾನು ಅರಿಯುವವನಾಗಿದ್ದೇನೆ ಹೃದಯಸ್ಥನಾದ ನಾನು ಶಬ್ದಜ್ಞಾನದಿಂದ ಎಂದಿಗೂ ಬದಲಾಗುವದಿಲ್ಲ ಆದರೆ ನಿರ್ಮಮತ್ವದಿಂದ ಪರಬ್ರಹ್ಮನಲ್ಲಿ ಶ್ರದ್ಧೆಯನ್ನಿಡಬೇಕು ಉದ್ಧವಾ! ಎಲ್ಲ ತ್ಯಾಗ ವೃತ್ತಿಯಲ್ಲಿಯ ತ್ಯಾಗವು ಹೇಗಿರುತ್ತದೆಂಬುದನ್ನು ನಾನು ನಿನಗೆ ಹೇಳುತ್ತೇನ ಎಲ್ಲ

ಅಭಿಮಾನವನ್ನು ತ್ಯಜಿಸುವದೇ ತ್ಯಾಗದ ಮುಖ್ಯ ಲಕ್ಷಣವಾಗಿದೆ ಎಲ್ಲ ಅಭಿಮಾನದ ತ್ಯಾಗ ಮಾಡಿ ಶರಣು ಬಂದರೆ, ನಿನಗೆ ಜನ್ಮಮರಣವೆಲ್ಲಿಯದು? ನನ್ನ ಸಾಮರ್ಥ್ಯ ದಿಂದಲೇ ನಿನಗೆ ಉದ್ಧಾರಗತಿಯಾಗುವದು ಇದನ್ನು ಲಕ್ಷಪೂರ್ವಕವಾಗಿ ತಿಳಿದುಕೋ "ನಿನಗೆ ಶರಣು ಬರಬೇಕೆಂದರೆ, ಪರ್ವತ–ಗುಹೆಯಲ್ಲಿ ಹೋಗಿ ಕುಳಿತುಕೊಳ್ಳಬೇಕೋ, ಅಥವಾ ಗುಡಸಲಿನಲ್ಲಿರಬೇಕೋ ಇಲ್ಲವೆ ಎಲ್ಲ ದಿಕ್ಕುಗಳಲ್ಲಿ ನಿನ್ನನ್ನು ಶೋಧ ಮಾಡು ತ್ತಿರಬೇಕೋ ಹೇಗೆ? ನೀನಿರುವ ಒಂದು ಊರು ಇಲ್ಲ ನೀನಿರುವ ನಿಯಮಿತವಾದ ಸ್ಥಾನವಾವುದು? ನಿನಗೆ ಶರಣು ಬರುವದಕ್ಕಾಗಿ ಎಲ್ಲೆಲ್ಲಿ ಓಡಾಡಬೇಕು?" ಎಂದು ಕಲ್ಪನೆಯನ್ನು ಮಾಡಿ, ನೀನು ಅನ್ನಬಹುದು "ನಿನಗೆ ಯಾವ ಸ್ಥಳದಲ್ಲಿ ಶರಣು ಬರಬೇಕು" ಆದರೆ ನಾನು ನಿನ್ನ ಹೃದಯಸ್ಥನೇ ಇರುವೆನು ಆ ಹೃದಯಸ್ಥನಿಗೇ ಕೂಡಲೇ ಶರಣು ಹೋಗಬೇಕು—

—ಎಲ್ಲ ಭಾವನೆಗಳಿಂದಲೂ ಮತ್ತು ಸರ್ವಸ್ವದಿಂದಲೂ, ಹೃದಯಸ್ಥನಾದ ನನಗೆ ನೀನು ಯಾವಾಗ ಶರಣು ಬರುವೆಯೋ, ಆವಾಗಲೇ ಎಲ್ಲ ಪ್ರಾಣಿ ಮಾತ್ರಗಳ ಹೃದಯಸ್ಥನಾದ ನನ್ನ ಸರ್ವವ್ಯಾಪಕತ್ವವು ನಿನಗೂ ಪ್ರಾಪ್ತವಾಗುವದು ಒಂದು ಎಳ್ಳುಕಾಳಿನಷ್ಟು ಅಭಿಮಾನವನ್ನು ಬಾಕಿ ಇಟ್ಟು ನನಗೆ ಶರಣು ಬರುವಿಯಾದರೆ, ನಿನಗೆ ನನ್ನ ಪ್ರಾಪ್ತಿಯಾಗಲಾರದು. ಕಾರಣವೇನೆಂದರೆ, ಅಭಿಮಾನವೇ ನನ್ನ ಪ್ರಾಪ್ತಿಗೆ ವಿಘ್ನವಾಗಿರುತ್ತದೆ ನಾಯಿಯು ಮುಟ್ಟಿದ ಪಕ್ವಾನ್ನವನ್ನು ಬ್ರಾಹ್ಮಣರು ಹೇಗೆ ಸೇವಿಸುವದಿಲ್ಲವೋ, ಹಾಗೆಯೇ ಮನಸ್ಸಿನಲ್ಲಿ ಅಭಿಮಾನವಿದ್ದ ಸಾಧಕನನ್ನು ನಾನೂ (ಶ್ರೀಕೃಷ್ಣ) ಸ್ಪರ್ಶಿಸುವದಿಲ್ಲ ರಜಸ್ವಲಾ ಸ್ತ್ರೀಯ ಭಾಷಣವನ್ನು ಕೇಳಿ ಪುರಶ್ಚರಣ ಮಾಡುವವನು ಹೇಗೆ ದೂರ ಓಡಿಹೋಗುತ್ತಾನೋ ಹಾಗೆಯೇ ಅಹಂಕಾರದಿಂದ ಸಾಧನೆ ಮಾಡುವವನನ್ನು ಹತ್ತಿರದಲ್ಲಿಯೇ ಇದ್ದವನಾದ ನಾನು ಅವನಿಂದ ದೂರ ಹೋಗುತ್ತೇನೆ ಅಗಸನಿಂದ ದೂಷಿತವಾದ ನೀರನ್ನು ಯಾವ ಪ್ರಕಾರವಾಗಿ ಸಜ್ಜನರು ಸೇವಿಸುವದಿಲ್ಲವೋ, ಅದರಂತೆ ಉದ್ಧವಾ! ಹೃದಯದಲ್ಲಿ ಅಭಿಮಾನವಿದ್ದಲ್ಲಿ ನಾನು ಭೆಟ್ಟಿಯಾಗುವದಿಲ್ಲವೆಂದು ತಿಳಿ ಕಣ್ಣಿನಲ್ಲಿ ಹೋದ ಹರಳು ಕರಗುವದಿಲ್ಲ, ಘಾಯದಲ್ಲಿ ಮುರಿದ ಬಾಣದ ತುದಿಯು ಅದರಲ್ಲಿಯೇ ಲೋಪವಾಗುವ ದಿಲ್ಲ ಮುತ್ತನ್ನು ಹೊಲಿಯಲಾಗುವದಿಲ್ಲ ಇಲ್ಲವೆ ಪಾಯಸದಲ್ಲಿ ಓತಿಕಾಟವು ಬಿದ್ದಲ್ಲಿ ಅದನ್ನು ಯಾರೂ ಸೇವಿಸುವದಿಲ್ಲ ಅದರಂತೆ ಉದ್ಧವಾ! ನನ್ನಲ್ಲಿಯೂ ಅಭಿಮಾನದ ಸಮಾವೇಶವಾಗುವದಿಲ್ಲ ಇದನ್ನು ಲಕ್ಷ್ಯದಲ್ಲಿಡು—

—ತಾತ್ಪರ್ಯವೇನೆಂದರೆ ಇದೇ ತ್ಯಾಗದಲ್ಲಿಯ ಗುರುತನ್ನು ನಾನು ನಿನಗೆ ಸಂಪೂರ್ಣವಾಗಿ ಹೇಳಿದೆನು ಪರಪುರುಷನಲ್ಲಿ ರತಳಾದ ತನ್ನ ಹೆಂಡತಿಯನ್ನು ನೋಡಿದರೆ ಅವಳ ಗಂಡನು ಅವಳನ್ನು ತ್ಯಜಿಸುತ್ತಾನೆ ಅದರಂತೆ ಅಭಿಮಾನದಲ್ಲಿ ತೊಡಗಿದ ನನ್ನ ಭಕ್ತನನ್ನು ನಾನು ಶ್ರೀಕೃಷ್ಣನು ಸ್ವೀಕರಿಸುವದಿಲ್ಲ, ಆದಕಾರಣ

ಅಭಿಮಾನವನ್ನು ತೊರೆದು, ಹೃದಯಸ್ಥನಾದ ನನಗೆ ಶರಣು ಬರುವೆಯಾದರೆ, ಉದ್ಧವಾ! ದೇವಕಿಯ ಆಣೆಗೂ ನಾನು ನಿನ್ನನ್ನು ಉದ್ಧರಿಸುವೆನು ಆದರೆ ನೀನು ಹೀಗೆ ಅನ್ನಬಹುದು "ನಿನಗೆ ಇಬ್ಬರು ಮಾತೆಯರಿರುವರು ಅವರಲ್ಲಿ ಯಾವ ಮಾತೆಯ ಆಣೆಯು ನಿಜವೆಂದು ತಿಳಿಯಬೇಕು?" ಆದರೆ ನನಗೆ ನಿಜವಾಗಲೂ ನಿನ್ನ ಆಣೆಯೇ ಇರುತ್ತದೆ ನಿನಗೆ ನನ್ನಿಂದಲೇ ನಿರ್ಭಯತೆ ಪ್ರಾಪ್ತವಾಗುವದು "ಆದರೆ ಶಬ್ದದಿಂದ ನಿನ್ನ ಆಕಲನವಾಗುವದಿಲ್ಲ ಮತ್ತು ನಿನಗೆ ಕರ್ತವ್ಯ ಕರ್ಮವೆಂಬುವದು ಯಾವದೂ ಇಲ್ಲ ಅಂದಮೇಲೆ ನಿನ್ನ ಆಣೆಯಾದರೂ ನಿಜವೆಂದು ತಿಳಿಯಬೇಕೇನು?" ಹೀಗೆ ಒಂದು ವೇಳೆ ನೀನು ಕಲ್ಪಿಸಬಹುದು ಮತ್ತು "ನಿನ್ನ ಶಬ್ದಕ್ಕೆ ಬೆಲೆಕೊಟ್ಟು, ಇದ್ದ ಸ್ವಧರ್ಮವನ್ನೂ ತ್ಯಜಿಸಿದೆನು ಹಾಗೂ ನಿನ್ನ ಆಣೆಯೂ ಸುಳ್ಳಾದರೆ. ನಿನ್ನಂತಹ ಸಾಮರ್ಥ್ಯಶಾಲಿಯಾದವನ ಜತೆಗೆ ಯಾರು ಜಗಳ ಕಾಯಬೇಕು?" ಹೀಗೆ ಅನ್ನುವಿ ಯಾದರೆ, ಉದ್ಧವಾ! ಹೀಗೆ ಸರ್ವಥಾ ಅನ್ನಬೇಡ ನಾನು ನಿನ್ನ ಆಣೆಯನ್ನು ಹಾಕಿದೆನೋ, ಅದು ಪರಮಾತ್ಮನ ಆಣೆಯೇ ಆಗಿರುತ್ತದೆಂಬುದನ್ನು ನೀನು ನಿಜ ವಾಗಲೂ ನಿಜವೆಂದು ತಿಳಿ —

—ಉದ್ಧವಾ! ನೀನು ನನ್ನ ಪರಿಪೂರ್ಣ ಆತ್ಮನಿರುವಿ ನನ್ನಲ್ಲಿ ಮತ್ತು ನಿನ್ನಲ್ಲಿ ನಾನು ನೀನು ಎಂಬುವ ಭೇದವಿಲ್ಲ ನಾನು ನಿನ್ನ ಆಣೆ ಹಾಕಿದ್ದಕ್ಕೆ, ಪರಮಾತ್ಮ ತತ್ವವೇ ಸಾಕ್ಷಿಯಾಗಿದೆ ಆದರೆ ನಾನು ಹೇಳಿದ ಸಿದ್ಧಾಂತಕ್ಕೆ ಪ್ರತ್ಯಕ್ಷ ವಸ್ತುಸ್ಥಿತಿಯೇ ಪ್ರಮಾಣವಾಗಿರುವಾಗ, ಆಣೆಯಾದರೂ ಏತಕ್ಕೆ ಬೇಕು? ಎಲ್ಲ ಭಾವನೆಯಿಂದ ನನಗೆ ಶರಣು ಹೋದರೆ, ನೀನು ಈವಾಗಲೆ ಉದ್ಧರಿಸುವಿಯೆಂದು ತಿಳಿ, ನೀನು ಪ್ರೀತಿಯಿಂದ ನನಗೆ ಶರಣು ಬಂದೆಯೆಂದರೆ, ಕಲಿಕಾಳನು ಕೂಡ ನಿನ್ನ ಚರಣಕ್ಕರಗು ವನು ಆಮೇಲೆ ಪಾಪ ಆ ಸಂಸಾರದ ಭಯವೇತರದು? ನಿನ್ನೆಡೆಗೆ ವಕ್ರದೃಷ್ಟಿ ಯಿಂದ ನೋಡುವ ಸಾಹಸವು ಯಾರಿಗಿರುವದು? ನೀನು ನನಗೆ ಶರಣು ಬಂದ ಕೂಡಲೇ ನನ್ನ ಸಾಮರ್ಥ್ಯವೇ ನಿನಗೆ ಪ್ರಾಪ್ತವಾಗುವದು ಆವಾಗ್ಗ ಸಂಸಾರಭಯವು ಇಲ್ಲದಂತಾ ಗುವದು ಮತ್ತು ಕಲಿಕಾಳನೂ ಕೂಡ ನಿನಗೆ ಬೆದರುವನು ಹುಲ್ಲಿನಲ್ಲಿ ಕೆಂಡದ ಒಂದು ಕಿಡಿಯು ಬಿದ್ದರೂ ಕೂಡ, ಅದು ಅರಣ್ಯದಲ್ಲಿಯ ಎಲ್ಲ ಗಿಡಗಳನ್ನು ಸುಟ್ಟು ಭಸ್ಮ ಮಾಡುತ್ತದೆ ಅದರಂತೆಯೇ ಶುದ್ಧ ಅಂತಃಕರಣದಿಂದ ನೀನು ಶರಣಾಗತನಾದಿ ಯೆಂದರೆ, ನೀನು, ನಿನ್ನ ಸಂಸಾರ ರೂಪಿ ಅರಣ್ಯವನ್ನು ಸುಟ್ಟುಬಿಡುವಿ —

—"ಹೃದಯಸ್ಥನಿಗೆ ಶರಣು ಬರಬೇಕು ಇದು ನಿಜ, ಆದರೆ ಆ ಹೃದಯಸ್ಥನು ನಮಗೆ ತಿಳಿಯುವದಿಲ್ಲ" ಎಂದು ನೀನು ಅನ್ನುವಿಯಾದರೆ, ಉದ್ಧವಾ! ಅವನ (ಹೃದಯಸ್ಥನ) ಸ್ವರೂಪವನ್ನು ಹೇಳುತ್ತೇನೆ ಕೇಳು ನಾಮ, ರೂಪ, ಗುಣ ಇವೆಲ್ಲವು ಗಳನ್ನು ಬಿಟ್ಟು, ಉದ್ಧವನೆಂದು ಯಾವನಿಗೆ ಸಂಕೇತವಾಗುತ್ತದೆಯೋ, ಅವನೇ, ಹೃದಯಸ್ಥನಾದ ನನ್ನ ಸ್ವರೂಪವಾಗಿದ್ದಾನೆಂದು ತಿಳಿ ಅವನಿಗೆ ನೀನು ಶರಣು ಹೋಗು

ನಾಮ, ರೂಪ ಮತ್ತು ಗುಣಗಳೆಲ್ಲವೂ ಮಾಯೆಯಿಂದ ಆಚ್ಛಾದಿತವಾಗಿರುತ್ತವೆ ಅವೆಲ್ಲವುಗಳನ್ನು ಬಿಟ್ಟು ಯಾವ ಶಕ್ತಿಯು ಸ್ಮರಣ ಹೊಂದುತ್ತದೆಯೋ, ಅದೇ ಹೃದಯಸ್ಥನಾದ ನನ್ನ ಆತ್ಮಸ್ವರೂಪವಾಗಿರುತ್ತದೆ ಈ ರೀತಿಯಾಗಿ ಹೃದಯಸ್ಥನ ಪ್ರಾಪ್ತಿಯಾಯಿತೆಂದರೆ, ಆ ಸಮಯದಲ್ಲಿ ಎಲ್ಲ ಪ್ರಾಣಿ ಮಾತ್ರಗಳನ್ನು ಅವಲೋಕಿಸು ವಾಗ, ನಿನಗೆ ದೇವನೇ ಕಾಣಿಸುತ್ತಾನೆ ಆಮೇಲೆ ಉದ್ಧವನೆಂದು ಬೇರೆ ಉಳಿಯಲು ಖಾಲಿ ಸ್ಥಳವೇ ಕಾಣುವದಿಲ್ಲ ಆವಾಗ್ಗೆ ಎಲ್ಲ ಪ್ರಾಣಿ ಮಾತ್ರಗಳಲ್ಲಿ ನಾನೇ ಸೃಷ್ಟಿ ಗೋಚರವಾಗುವೆನು ಇದನ್ನು ನಿಶ್ಚಿತವಾಗಿ ಲಕ್ಷ್ಯದಲ್ಲಿಡು ಅನೇಕ ಜನರನ್ನು ಕಂಡಾ ಗಲೂ ಅವರೆಲ್ಲರಲ್ಲಿಯೂ ನಾನೊಬ್ಬನೇ ಒಬ್ಬನು ಕಾಣಿಸುತ್ತೇನೆ ಈ ಪ್ರಕಾರವಾಗಿ ಹೃದಯಸ್ಥನೊಂದಿಗೆ ಐಕ್ಯ ಹೊಂದಿದೆಯೆಂದರೆ, ನೀನು ಮದ್ರೂಪನಾಗಿ ನನ್ನನ್ನು ಕೂಡುವಿ ಉದ್ಧವಾ! ಹೀಗೆ ನನ್ನ ಪ್ರಾಪ್ತಿಯು ನಿರ್ಭಯವೂ ಮತ್ತು ನಿಶ್ಚಲವಾಗಿರು ವದು, ಇಂತಹ ಗುಹ್ಯ ಜ್ಞಾನವನ್ನು ಹೇಳಿ ಶ್ರೀಕೃಷ್ಣನು ಉದ್ಧವನ ಬೆನ್ನು ಚಪ್ಪರಿಸಿದನು ಆವಾಗ್ಗೆ ಅವನೂ ದೇವನ ಚರಣಗಳನ್ನು ಆಲಿಂಗಿಸಿದನು

## ಪ್ರಕರಣ ೨೪

ಅಂದ ಮೇಲೆ, ಆತ್ಮನು ಕರ್ತಾ ಇರುವನೋ, ಇಲ್ಲವೆ ಅಕರ್ತಾ ಇರುವನೋ, ಇದೇ ನಿಜವಾಗಿಯೂ ನಮಗೆ ತಿಳಿಯುವದಿಲ್ಲ ನಾವು ಈಗ ಎಲ್ಲ ತರಹದ ಕರ್ಮ ವನ್ನು ಮಾಡಬೇಕೋ? ಇಲ್ಲವೇ ಬಿಟ್ಟುಬಿಡಬೇಕೋ? ಶ್ರೀಕೃಷ್ಣಾ, ನಿನ್ನ ಉಪದೇಶದ ರೀತಿಯೇ ವಿಲಕ್ಷಣವಾಗಿದೆ ಅದನ್ನು ನೀನು ಹೇಳುತ್ತಿರುವಾಗ, ದುರ್ಬಲವಾದ ನಮ್ಮ ಮನಸ್ಸಿನಲ್ಲಿ ಸಂಶಯ ಮಾತ್ರ ಹೆಚ್ಚಿಗೆಯಾಗುತ್ತದೆ ಶ್ರೀಕೃಷ್ಣಾ ಈಗ ನಾವು ಏನು ಮಾಡಬೇಕು? ಆತ್ಮನು ಅಕರ್ತಾ ಆದರೆ ಕರ್ಮವನ್ನು ಮಾಡುವವರು ಯಾರು? ಮತ್ತು ಆತ್ಮನ ಅಕರ್ತಾತ್ಮನಾದರೆ, ಕರ್ಮವನ್ನು ತ್ಯಾಗಿಸುವ ಪ್ರಸಂಗವೇ ಬರುವದಿಲ್ಲ ಈ ಪ್ರಕಾರವಾದ ಉದ್ಧವನ ಪ್ರಶ್ನೆಯನ್ನು ಕೇಳಿ, ಕಮಲನಯನನಾದ ಘನಶ್ಯಾಮ ಶ್ರೀಕೃಷ್ಣನು ನಕ್ಕು ಏನಂದನೆಂಬುದನ್ನು ಚೆನ್ನಾಗಿ ಕಿವಿಗೊಟ್ಟು ಕೇಳಬೇಕು—

—ಎಲೇ ಉದ್ಧವಾ! ಕೇಳು ಮಾಯೆಯ ಸ್ವಭಾವಕ್ಕನುಗುಣವಾಗಿ ನಾನು ಜೀವದಾಶೆಗೆ ಬಂದಿರುವೆನು, ಜೀವಕ್ಕೆ ಜೀವಧರ್ಮದಿಂದಲೇ ಕರ್ತೃತ್ವವು ಉಂಟಾಗು ತ್ತಿರುತ್ತದೆ ನೀರಿನಲ್ಲಿದ್ದ ಸೂರ್ಯನ ಪ್ರತಿಬಿಂಬವು, ನೀರಿನ ಚಲನವಲನದೊಂದಿಗೆ ಹೇಗೆ ಚಲಿಸಿದಂತೆ ಕಾಣುವದೋ, ಹಾಗೆಯೇ ನಾನು ಅಕರ್ತಾತ್ಮನಿದ್ದರೂ, ಜೀವದ ಅಹಂಕೃತಿಯಿಂದ ನಾನು ಕರ್ತಾತ್ಮನಿದ್ದಂತೆ ತೋರುವೆನು ರಾಜನು ನಿದ್ರಿಸ್ತವಾದಾಗ್ಗೆ, ಒಂದು ವೇಳೆ ಕನಸಿನಲ್ಲಿ ತಾನೆ ಭಿಕ್ಷುಕನಾಗುತ್ತಾನೆ ಅದರಂತೆ ಪ್ರಕೃತಿಯಿಂದಲೇ ನನಗೆ

ಜೀವತ್ವವಿದ್ದಂತೆ ಭಾಸವಾಗುತ್ತದ ಎಂಬುದನ್ನು ಲಕ್ಷ್ಯದಲ್ಲಿಡು ನಿಜವಾಗಲೂ ವಿಚಾರ ಮಾಡಲಾಗಿ ಸ್ವತಃ ರಾಜನಿದ್ದವನೇ ಕನಸಿನಲ್ಲಿ ತಿರುಕನಾಗಿ ಭಿಕ್ಷ ಬೇಡುತ್ತಾನ ಯಾರಾದರೂ ಒಂದು ಮುಷ್ಟಿ ಧಾನ್ಯವನ್ನಿಕ್ಕಿದರೆ, ರಾಜನಿದ್ದು ಅವನು ಅವನನ್ನು "ನೀನು ರಾಜನಿರುವಿ" ಎಂದು ಹೊಗಳುತ್ತಾನೆ ಅವನು ರಾಜನಿದ್ದರೂ ಕನಸಿನಲ್ಲಿ ತಾನು ರಾಜನಿರುವೆನೆಂಬ ಅರಿವು ಅವನಿಗಿರುವದಿಲ್ಲ, ಅದರಂತೆ ಜೀವಾತ್ಮನಿಗೂ ಆಗುತ್ತದೆ ಅವನ ಪರಿಪೂರ್ಣ ಅವಸ್ಥೆಯು ಅವನಿಗೇ ತಿಳಿಯುವದಿಲ್ಲ ಯಾವ ರೀತಿಯಿಂದ ಕನಸಿನಲ್ಲಿ ರಾಜನು ತಿರುಕನಂತೆ ಎಲ್ಲ ವ್ಯವಹಾರ ಮಾಡುವನೋ, ಅದರಂತೆಯೇ ನಿಜವಾಗಿಯೂ ಅಜ್ಞಾನದಿಂದ ನಾನು ಕರ್ಮಕರ್ತನಾಗಿರುವೆನು ಈ ಪರಿಸ್ಥಿತಿಯಲ್ಲಿಯೇ ಜೀವಕ್ಕೆ ವೇದೋಕ್ತ ವಿಧಿವಿಧಾನಗಳನ್ನು ಮಾಡುವ ಪ್ರಸಂಗವು ಬಂದೊದಗುತ್ತದೆ ಆದ್ದರಿಂದ ಎಲ್ಲಿಯವರೆಗೆ ಬ್ರಹ್ಮಜ್ಞಾನವಾಗುವದಿಲ್ಲವೋ, ಅಲ್ಲಿಯವರೆಗೆ ಸ್ವಧರ್ಮಾಚರಣೆಯನ್ನು ಆಚರಿಸಬೇಕು ರಾಜನು ಎಚ್ಚತ್ತು ಎಲ್ಲಿಯವರೆಗೆ ರಾಜ್ಯ ಪದವಿಯ ಮೇಲೆ ಬರುವದಿಲ್ಲವೋ ಅಲ್ಲಿಯವರೆಗೆ ಅವನು ತಿರುಕನಂತೆ ಎಲ್ಲ ಕರ್ಮಾಚರಣೆಗಳನ್ನು ಮಾಡುತ್ತಾನೆ ಅದರಂತೆ ಬ್ರಹ್ಮಜ್ಞಾನವಾಗುವವರೆಗೂ ಸ್ವಧರ್ಮಾಚರಣೆಯನ್ನು ಮಾಡಬೇಕು ಏಕೆಂದರೆ ರಾಜನು ಎಚ್ಚತ್ತು ರಾಜ್ಯ ಪದವಿಯ ಮೇಲೆ ಬಂದನಂದರ 'ಭಿಕ್ಷ' ಎಂಬ ಶಬ್ದವನ್ನುಚ್ಚರಿಸಿದ ತಕ್ಷಣ ಅವನು ನಾಚುತ್ತಾನೆ ಅದರಂತೆ ಯಾವನಿಗೆ ಬ್ರಹ್ಮಜ್ಞಾನವಾಗುವದೋ ಅವನು 'ನಾನು ಕರ್ತಾಪುರುಷನಿರುವೆನು' ಎಂದು ಎಂದಿಗೂ ನುಡಿಯುವದಿಲ್ಲ ರಾಜನಿಗೆ ಕನಸಿನಲ್ಲಿ ಹೇಗೆ ಸುಳ್ಳು ತಿರುಕುತನ ಉಂಟಾಗಿತ್ತೋ ಹಾಗೆಯೇ ಪರಮಾತ್ಮನಿಗೂ ಈ ಜೀವದೆಶೆಯೂ ಸುಳ್ಳಾಗಿರುವದು ಇದನ್ನು ಚೆನ್ನಾಗಿ ಲಕ್ಷ್ಯದಲ್ಲಿಡು

## ಪ್ರಕರಣ ೨೫

ಬೇರೆ ಬೇರ ತರಹದ ಕೋಟ್ಯಾನುಕೋಟಿ ಸಾಧನಗಳನ್ನು ಮಾಡಿದರೂ ಕೂಡ ಸದ್ಗುರುವಿನ ಭಜನೆಯನ್ನು ಮಾಡದಿದ್ದರ, ಸಂಸಾರ ವೃಕ್ಷದ ನಾಶವಾಗಲಾರದು ಯಾವ ಪ್ರಕಾರವಾಗಿ ಶೂರನ ಶೌರ್ಯವೇ ಶತ್ರುಗಳ ನಾಶಮಾಡಲು ನಿಜವಾಗಲೂ ಸಮರ್ಥವಿರುತ್ತದೆಯೋ ಅದರಂತೆ ಸಂಸಾರ ವೃಕ್ಷವನ್ನು ನಾಶಗೊಳಿಸಲು ಗುರುಭಕ್ತಿಯೊಂದೇ ಸಮರ್ಥವಿರುತ್ತದೆಯೆಂದು ತಿಳಿ ಪಾಪವನ್ನು ತೊಳೆಯಲು ಗಂಗಾನದಿಯು ಹೇಗೆ ಸಮರ್ಥವಿರುತ್ತದೆಯೋ ಹಾಗಯೇ ಗುರುಭಕ್ತಿಯೊಂದೇ ಸಂಸಾರದ ಭಯವನ್ನು ಸುಟ್ಟು ಬೂದಿ ಮಾಡುತ್ತದೆಯೆಂಬುದನ್ನು ನಿಶ್ಚಿತವಾಗಿ ತಿಳಿದುಕೋ ಸತ್ಯವ್ರತವನ್ನು ಕೈಗೊಂಡಲ್ಲಿ, ಪಾಪವು ತನ್ನಷ್ಟಕ್ಕೆ ತಾನೇ ಪಲಾಯನ ಮಾಡು

ತ್ತದೆ ಅದರಂತೆ ಗುರು ಭಜನೆಯನ್ನು ಮಾಡಿದಲ್ಲಿ ಸಂಸಾರವು ತನ್ನಷ್ಟಕ್ಕೆ ತಾನೇ ಕ್ಷೀಣವಾಗುತ್ತದೆ

ಹನುಮಂತನು ದೃಷ್ಟಿಗೋಚರವಾದನೆಂದರೆ, ಭೂತಗಳು ದಿಕ್ಕು ತೋಚದೆ ಪಲಾಯನ ಮಾಡುತ್ತವೆ ಅದರಂತೆ ಗುರು ಭಜನೆಯ ಆವರ್ತನೆಯು ಪ್ರಾರಂಭ ವಾಯಿತೆಂದರೆ ಸಂಸಾರವು ಹಾಂ ಹಾಂ ಎನ್ನುವದರಲ್ಲಿ ಓಡಿ ಹೋಗುತ್ತದೆ ಸಾಯುವ ಸಮಯದಲ್ಲಿ ಅಮೃತವನ್ನು ಸೇವಿಸಿದಲ್ಲಿ, ಸಾವಿಗೇ ಸಾವು ಬರುತ್ತದೆ ಗುರುಭಜನೆಯನ್ನು ಮಾಡಿದಲ್ಲಿ, ಜನ್ಮ ಮರಣಕ್ಕೇ ಮರಣವು ಬರುತ್ತದೆ ಮರಣ ಹೊಂದುವ ವೇಳೆಯಲ್ಲಿ ಆಕಸ್ಮಿಕವಾಗಿ 'ಹರಿ' ಎಂದು ಉಚ್ಚರಿಸಿದರೆ, ಅಂತಕನ ದೂತರಿಗೂ ಒದೆ ಬೀಳುತ್ತದೆ ಅದರಂತೆ ಸದ್ಗುರುವಿನ ಭಜನೆಯನ್ನು ಮಾಡಿದಲ್ಲಿ ಭವಭಯಕ್ಕೆ ಒದೆಗಳೇ ಬೀಳುತ್ತವೆ ಭವಭಯದಿಂದ ಮುಕ್ತನಾಗಬೇಕಾದರೆ, ಗುರುವಿನ ಭಜನೆಯನ್ನೇ ಪ್ರಾಮುಖ್ಯವಾಗಿ ಮಾಡಬೇಕು ಇದೇ ಸಾಧನವು ಉತ್ತಮವಾಗಿರುವದು

ಗುರುಭಕ್ತನಿದ್ದವನೇ ಭಾಗ್ಯವಂತನಿರುತ್ತಾನೆ ಸದ್ಗುರುವು ಯಾರು? ಹೇಗೆ ಭಕ್ತಿಯನ್ನು ಮಾಡಬೇಕು? ಎಂಬ ವಿಕಲ್ಪವನ್ನು ಮನದಲ್ಲಿ ತರುವಿಯಾದರೆ, ಅದನ್ನೂ ನಿನಗೆ ಸವಿಸ್ತಾರವಾಗಿ ಮುಂಚಿತವಾಗಿಯೇ ಹೇಳಿದ್ದೇನೆ ಉದ್ಧವಾ! ಯಾವನು ವೇದ ಮತ್ತು ಬ್ರಹ್ಮಜ್ಞಾನದಲ್ಲಿ ನಿಷ್ಣಾತನಿರುವನೋ ಹಾಗೂ ಶಿಷ್ಯ ನಿಗೆ ಜ್ಞಾನೋಪದೇಶ ಮಾಡುವದರಲ್ಲಿ ಸಮರ್ಥನಿರುವನೋ, ಅವನೇ ಸದ್ಗುರುವು ಇರುತ್ತಾನೆಂದು ನೀನು ನಿಶ್ಚಯಪೂರ್ವಕವಾಗಿ ತಿಳಿದುಕೋ. ಯಾವನು ಸ್ವಸ್ವರೂಪ ದಲ್ಲಿಯೇ ಸಮಾಧಾನಪಡಿಸುವನೋ, ಅವನೇ ನಿಜವಾಗಲೂ ಸದ್ಗುರುವು ಇರುತ್ತಾನೆ ಅದರ ಹೊರತಾಗಿ ಸದ್ಗುರುತ್ವವು ಬರಲು ಬೇರೆ ಕಾರಣವೇ ಇರುವದಿಲ್ಲ ಆ ಸದ್ಗುರು ಭಜನದ ರೀತಿಯನ್ನು ನಿನಗೆ ನಿಶ್ಚಿತವಾಗಿ ಹೇಳುವೆನು ಯಾವನು ಗುರು ಭಜನೆಯನ್ನು ಮಾಡುವನೋ, ಅವನು ಎಲ್ಲ ಕರ್ಮ ಮತ್ತು ಧರ್ಮಗಳಿಗಿಂತ ಶ್ರೇಷ್ಠನಿರುವನು

ಗುರುವಿಗೆ ತಂದಯ ಸರಿ ಎನ್ನಬೇಕೆಂದರೆ, ತಂದೆಯು ಒಂದೇ ಜನ್ಮದ ಪೂರ್ತಿ ಇರುವನು ಆದರೆ ಸದ್ಗುರುವು ಜನ್ಮ ಜನ್ಮಾಂತರದ ತಾಯಿ-ತಂದೆಯಾಗಿರುವನು ಅವನು ಎಲ್ಲ ಜಗತ್ತಿನ ತಂದೆಯಾಗಿರುವನು ಗುರುವು ಮಾತೆಯ ಸರಿ ಎಂದು ತಿಳಿದರೆ, ಅವಳಿಗೆ ಗರ್ಭಧಾರಣೆ ಮಾಡಿ ಜನ್ಮ ಕೊಟ್ಟದ್ದರಿಂದಲೇ, ಪ್ರೀತಿಯು ಉತ್ಪನ್ನವಾಗುತ್ತದೆ ಆದರೆ ಗುರುರಾಜನು ಗರ್ಭವಾಸವನ್ನೇ ತಪ್ಪಿಸುತ್ತಾನೆ ಮತ್ತು ಮಗನಿಗಿಂತಲೂ ಹೆಚ್ಚಿಗೆ ಪ್ರೀತಿಸುತ್ತಾನೆ ಪುತ್ರನು ಜನಿಸಿದ ನಂತರ ತಾಯಿಯು ಅವನನ್ನು ಪ್ರೀತಿಸುತ್ತಾಳೆ ಆದರೆ ಗುರುಮಾವುಲಿಯು ಅವನ ಎಲ್ಲ ಗುಣ-ದೋಷಗಳನ್ನು ಹೊಟ್ಟೆಯಲ್ಲಿಟ್ಟುಕೊಂಡು, ಪುತ್ರ ಸ್ನೇಹದಿಂದ ಅವನನ್ನು

ಪ್ರೀತಿಸುತ್ತಾನೆ ಗುರುವನ್ನು ಒಡೆಯನೆಂದು ನಂಬಿದರೆ, ಒಡೆಯನಿಗೇನೂ ಸಾವನ್ನು ತಪ್ಪಿಸಲಾಗುವದಿಲ್ಲ ಆದರೆ ಸದ್ಗುರುವು ಜನ್ಮ ಮರಣದಿಂದ ಅವನನ್ನು ಪಾರು ಮಾಡುತ್ತಾನೆ ಆದ್ದರಿಂದ ಗುರುರಾಜನೇ ಎಲ್ಲ ದೃಷ್ಟಿಯಿಂದಲೂ ಒಡೆಯನಾಗಿದ್ದಾನೆ ಗುರುವನ್ನು ಕುಲದೇವತೆಯೆಂದು ತಿಳಿದರೆ, ಕುಲದೇವತೆಗೆ ಕುಲಧರ್ಮದಲ್ಲಿ ಮಾತ್ರ ಪೂಜ್ಯತೆಯಿರುತ್ತದೆ ಆದರೆ ಗುರುವು ಕುಲದೇವತೆಯ ದೇವನು ಇರುವನು ಅವನು ನಮ್ಮ ಎಲ್ಲ ಕರ್ಮಗಳಲ್ಲಿಯೂ ಪೂಜನೀಯನಿರುವನು ಗುರುವನ್ನು ಕಲ್ಪತರುವಿನ ಸಮಾನನೆಂದೆಣಿಸಿದರೆ, ಕಲ್ಪತರುವು ಕಲ್ಪನೆ ಮಾಡಿದ್ದಷ್ಟನ್ನೇ ದಾನ ಕೊಡುತ್ತದೆ ಆದರ ಸದ್ಗುರುವು ಪರಿಪೂರ್ಣ ನಿರ್ವಿಕಲ್ಪತೆಯನ್ನೇ ಕೊಡುತ್ತಾನೆ ಆ ನಿರ್ಲೋಭತೆಯೇ ಮಹಾನ್ ಶ್ರೇಷ್ಠ ದಾನವಾಗಿರುತ್ತದೆ

ಚಿಂತಾಮಣಿಯಿಂದ ಚಿಂತನೆ ಮಾಡಿದ ಪದಾರ್ಥವಷ್ಟೇ ಪ್ರಾಪ್ತವಾಗುತ್ತದೆ ಆದರೆ ಸದ್ಗುರುವು ಆ ಚಿಂತೆಯನ್ನು ನಾಶಗೊಳಿಸಿ, ಚಿತ್ತಕ್ಕೆ ಚೈತನ್ಯದ ಶಾಶ್ವತವಾದ ನಿಜದಾನವನ್ನು ಕೊಡುತ್ತಾನೆ ಕಾಮಧೇನುವು ಇಚ್ಛೆ ಮಾಡಿದ್ದನ್ನಷ್ಟೇ ಕೊಡುತ್ತದೆ ಆದರೆ ಸದ್ಗುರುವು ಸ್ವಾನಂದದ ರಸವನ್ನು ಕುಡಿಸಿ ಅವನನ್ನು ನಿರಿಚ್ಛನನ್ನಾಗಿ ಮಾಡುತ್ತಾನೆ ಸಮುದ್ರಕ್ಕೆ ಗುರುವಿನ ಉಪಮೆಯನ್ನು ಕೊಟ್ಟರೆ, ಸಮುದ್ರವು ಗಂಭೀರವಾಗಿರುತ್ತದೆ ನಿಜ, ಆದರೆ ನೀರು ಯಾವಾಗಲೂ ಉಪ್ಪಾಗಿರುತ್ತದೆ ಆದರೆ ಗುರುವು ಯಾವಾಗಲೂ ಸ್ವಾನಂದಮಯನಾಗಿದ್ದು ಆತ್ಮಬೋಧದಿಂದ ಸದೈವ ಸಿಹಿಯಾಗಿರುತ್ತಾನೆ ಗುರುವನ್ನು ಬ್ರಹ್ಮನಿಗೆ ಹೋಲಿಸಿದರೆ, ಆ ಉಪಮೆಯು ಕೂಡ ಸ್ವಲ್ಪ ಗೌಣವೆನಿಸುತ್ತದೆ ಏಕೆಂದರೆ ಗುರೂಪದೇಶದಿಂದಲೇ ಬ್ರಹ್ಮನಿಗೆ ಸತ್ಯತ್ವವು ಬಂದಿರುತ್ತದೆ ಇಲ್ಲವಾದರೆ ಬ್ರಹ್ಮ ಇದು ಕೇವಲ ಶಬ್ದವಾಗಿರುತ್ತದೆ

ಶಬ್ದಾರ್ಥವನ್ನು ಶಬ್ದದಲ್ಲಿಯೇ ಲೋಪಗೊಳಿಸಿ, ಗುರುವು ಜ್ಞಾನಭರಿತವಾದ ಅರ್ಥವನ್ನು ಬೋಧಿಸುತ್ತಾನೆ ಆದಕಾರಣ ಗುರುವಿಗಿಂತ ಹೆಚ್ಚಿಗೆ ಪೂಜನೀಯನು ಈ ಮೂರೂ ಲೋಕದಲ್ಲಿ ಯಾರೂ ಇರುವದಿಲ್ಲ ಆದ್ದರಿಂದ ಗುರುವೆ ಮಾತಾ, ಪಿತಾ, ಸ್ವಾಮಿ ಮತ್ತು ಕುಲದೇವತೆಯೂ ಆಗಿರುತ್ತಾನೆ ಗುರುವಿನಃ ಅವನಿಗೆ ಬೇರೆ ದೇವತೆಗಳ ಜ್ಞಾಪಕವೇ ಆಗುವದಿಲ್ಲ ಬಹಳ ಬಿಕ್ಕಟ್ಟಿನ ಪ್ರಸಂಗವು ಬಂದರೂ ಇಲ್ಲವೆ ಆಕಾಶವು ಕಳಚಿ ಬಿದ್ದರೂ ಅವನು ತಪ್ಪಿಕೂಡ ಬೇರೆಯವರ ಕಡೆಗೆ ನೋಡದೆ ಗುರುವಿನ ನಾಮಸ್ಮರಣೆಯನ್ನೇ ಮಾಡುತ್ತಲಿರುತ್ತಾನೆ ದೇಹ, ವಾಣಿ, ಮನಸ್ಸು ಮತ್ತು ಪ್ರಾಣದಿಂದ ಯಾವನು ಬೇರೆ ಯಾರನ್ನೂ ಅರಿಯುವದಿಲ್ಲವೋ ಮತ್ತು ಹಾಗೆಯೇ ಯಾವನು ಅನನ್ಯ ಭಾವನೆಯಿಂದ ಗುರುಭಜನೆಯನ್ನು ಮಾಡುವನೋ, ಅವನ ಆ ಭಕ್ತಿಗೆ 'ಗುರುಭಕ್ತಿ' ಎನ್ನುತ್ತಾರೆ ರೆಕ್ಕೆ ಬಡೆಯದ ಪಕ್ಷಿಯ ಮರಿಗಳಿಗೆ ಹೇಗೆ ಆ ಪಕ್ಷಿಯದೇ ಯಾವಾಗಲೂ ಧ್ಯಾಸವಿರು

ತ್ತದೆಯೋ ಹಾಗೆಯೇ ಅವನು ಜಾಗೃತಾವಸ್ಥೆ, ಸ್ವಪ್ನಾವಸ್ಥೆ ಮತ್ತು ಸುಷುಪ್ತಾವಸ್ಥೆಯಲ್ಲಿಯೂ ಗುರುವಿನ ಹೊರತು ಅನ್ಯರನ್ನು ನೆನೆಸುವದೇ ಇಲ್ಲ "ಹಿಂದಕ್ಕೆ ಭಗವದ್ಭಜನೆಯನ್ನು ಹೇಳಿರುವಿ ಮತ್ತು ಈಗ ಗುರು ಸೇವೆಯನ್ನು ಹೇಳುತ್ತಿರುವಿ ಅಂದ ಮೇಲೆ ನಿನ್ನ ಹೇಳುವಿಕೆಯಲ್ಲಿ ಒಂದೇ ಮಾರ್ಗವಿಲ್ಲ" ಎಂದು ನೀನು ವಿಕಲ್ಪವನ್ನು ಮನಸ್ಸಿನಲ್ಲಿ ತರಬೇಡ ನಿಜವಾಗಲೂ ಸದ್ಗುರುವೇ ನನ್ನ ಮೂರ್ತಿಯಾಗಿದ್ದಾನೆಂದು, ನಿಶ್ಚಿತಾರ್ಥದಿಂದ ಲಕ್ಷ್ಯದಲ್ಲಿಡು ಈ ವಿಷಯದಲ್ಲಿ ಸಂಶಯಪಡಬೇಡ ಇದೇ ನನ್ನ ಅನನ್ಯ ಭಕ್ತಿಯಾಗಿರುತ್ತದೆ ಏಕಾಗ್ರಚಿತ್ತದಿಂದ ಯಾರು ಗುರುವಿನ ಭಜನೆಯನ್ನು ಮಾಡುವರೋ, ಅವರ ಭಜನೆಯೇ ನನ್ನ ಪೂಜೆಯಾಗಿರುತ್ತದೆ ಗುರು ಮತ್ತು ನನ್ನಲ್ಲಿ (ಶ್ರೀ ಕೃಷ್ಣನಲ್ಲಿ) ಕಲ್ಪಾಂತದಲ್ಲಿ ಕೂಡ ಎಂದಿಗೂ ಭೇದವಿರುವದಿಲ್ಲ ಗುರು ಮತ್ತು ಭಗವಂತ ಇವರಿಬ್ಬರೂ ಒಂದೇ ಎಂಬ ಭಾವನೆಯಿಂದ ನಿಶ್ಚಯಪೂರ್ವಕವಾಗಿ ಯಾವನು ಭಜಿಸುವನೋ, ಅವನೇ ಗುರುವಿನ ಸೇವಕನಿರುವವನು ಬೇರೆಯವರೆಲ್ಲರೂ ಅನುಮಾನ ಮಾಡುವವರೆಂದು ತಿಳಿಯಬೇಕು—

—ನನ್ನೊಡನೆ ಏಕರೂಪವಾಗಬೇಕೆಂದು ಯಾವನು ಅತಿಶಯ ಪ್ರೀತಿಯಿಂದ ಗುರುಭಕ್ತಿಯನ್ನು ಸ್ವೀಕರಿಸಿದನೋ, ಅವನೇ ಮೂರೂ ಲೋಕದಲ್ಲಿ ಧನ್ಯ ಧನ್ಯನಿರುತ್ತಾನೆ ಇನ್ನು ಭಜನೆಯನ್ನು ಮಾಡುವ ರೀತಿಯು ಹೇಗಿರುತ್ತದೆಂಬುದನ್ನು ಕೇಳು ಗುರುವಿನ ಸೇವೆಯನ್ನು ಮಾಡುವದಕ್ಕಾಗಿ ಅವನ ದೇಹವು ಮನಸ್ಸಿಗಿಂತಲೂ ಮುಂದೋಡುತ್ತದೆ ಮತ್ತು ಎಲ್ಲ ಸೇವೆಯನ್ನು ನಾನೊಬ್ಬನೇ ಮಾಡುವೆನೆಂಬ ಮಹತ್ವಾಕಾಂಕ್ಷೆಯಿಂದ ತತ್ಪರನಿರುತ್ತಾನೆ ಸೇವೆಯು ಹೇಗೆ ಹೇಗೆ ದ್ವಿಗುಣಿತವಾಗುವದೋ, ಹಾಗೆ ಹಾಗೆ ಅವನು ಸೇವೆಗಾಗಿ ಆನಂದದಿಂದ ಸಿದ್ಧನಾಗುವನು ಎಲ್ಲ ದೇಹವನ್ನು ಕೇವಲ ಸೇವೆಗಾಗಿಯೇ ಅರ್ಪಿಸಿದುದರಿಂದ, ಅವನು ಗುರುಸೇವೆಯಲ್ಲಿಯೇ ವಿಶ್ರಮಿಸುತ್ತಾನೆ ಸೇವೆ ಮಾಡುವ ಹುಮ್ಮಸ್ಸಿನಲ್ಲಿ ಅವನು ಅರ್ಧಕ್ಷಣವೂ ಕೂಡ ವಿಶ್ರಾಂತಿಯನ್ನು ತೆಗೆದುಕೊಳ್ಳುವದಿಲ್ಲ ಪ್ರೀತಿಯುಕ್ತ ಅಂತಃಕರಣದಿಂದ ಗುರುಭಜನೆಯನ್ನು ಮಾಡುತ್ತಿರುವಾಗ, ಅದರ ಅಭಿರುಚಿಯು ಉತ್ತರೋತ್ತರ ಹೆಚ್ಚಿಗೆಯಾಗುತ್ತಲೇ ಇರುತ್ತದೆ ನಿತ್ಯವೂ ಗುರುಸೇವೆಯನ್ನು ಮಾಡುವಾಗ, ದಿನ ನಿತ್ಯವೂ ಪ್ರೇಮವು ಉಕ್ಕೇರುತ್ತದೆ. ಸದ್ಭಕ್ತಿಯ ಇಚ್ಛೆಯಿಂದ ಅವನು ತನ್ನ ಜೀವನವನ್ನೇ ಗುರುಚರಣದಲ್ಲಿ ಮಾರಿಕೊಂಡಿರುತ್ತಾನೆ ಆಲಸ್ಯವು ಅವನನ್ನು ಮರೆಯುತ್ತದೆ ವಿಶ್ರಾಂತಿಗೆ ಸ್ಥಳವೇ ಇಲ್ಲದಂತಾಗುತ್ತದೆ ಗುರುಸೇವೆಯಲ್ಲಿಯೇ ಅವನು ಮಗ್ನನಾಗಿರುವದರಿಂದ ಇತರ ವಿಷಯ ಭೋಗಗಳನ್ನು ಮರೆತುಬಿಡುತ್ತಾನೆ ನೀರಡಿಕೆಗೆ ನೀರಿನ ನೆನಪಾಗುವದಿಲ್ಲ, ಹಸಿವೆಗೆ ಪಕ್ವಾನ್ನಗಳ ನೆನಪಾಗುವದಿಲ್ಲ ಮತ್ತು ಗುರುಗಳವಾದ ಸೇವಿಸುವಾಗ ಅವನು ಹಸಿವೆ, ನೀರಡಿಕೆ ಮತ್ತು ನಿದ್ರೆ ಮಾಡುವದನ್ನೇ ಮರೆತುಬಿಡುತ್ತಾನೆ ಅವನಿಗೆ ಆಕಳಿಸಲು ಕೂಡ ವೇಳೆ ಸಿಗುವದಿಲ್ಲ ಅಂದಮೇಲೆ

ನಿದ್ರೆಗೆ ಅವಕಾಶವೆಲ್ಲಿಯದು? ಮುಖದಲ್ಲಿ ಸದ್ಗುರುವಿನ ನಾಮ, ಹೃದಯದಲ್ಲಿ ಸದ್ಗುರುವಿನ ಪ್ರೇಮ ಮತ್ತು ದೇಹಕ್ಕೆ ಸದ್ಗುರುವಿನ ಕರ್ಮ ಹೀಗೆ ಇದನ್ನೇ ಹಗಲಿರುಳೂ ಬಿಟ್ಟೂ ಬಿಡದೆ ಅವಿಶ್ರಾಂತ ನಡೆಯಿಸಬೇಕು ಮನಸ್ಸು ಗುರುಸೇವೆಯಲ್ಲಿ ತಲ್ಲೀನವಾಗಿರುವದರಿಂದ ಹೆಂಡತಿ ಮಕ್ಕಳು ಮತ್ತು ಧನವನ್ನೂ ಮರೆಯುತ್ತಾನೆ ತನ್ನ ಮನಸ್ಸನ್ನೂ ಮರೆಯುತ್ತಾನೆ ಅವನಿಗೆ ತಾನು ಯಾರು ಎಂಬುವ ಸ್ಮೃತಿಯೇ ಉಳಿಯುವದಿಲ್ಲ ಅವನ ಭಜನದ ಉತ್ಸಾಹವು ಅಚ್ಚರಿಯುಳ್ಳದ್ದಾಗಿರುತ್ತದೆ ಭಜನೆ ಮಾಡುವಾಗ, ಅವನು ತನ್ನನ್ನೇ ತಾನು ಮರೆತು ಬಿಡುತ್ತಾನೆ ಹೀಗೆ ಗುರುಸೇವೆಯ ಮಹತ್ವವು ಅಗಾಧವಾಗಿದೆ ಆದ್ದರಿಂದ ಅವನು ತನ್ನ ಆತ್ಮಭಾವನೆಯನ್ನು ಗುರು ಚರಣದಲ್ಲಿಯೇ ಇಟ್ಟಿರುತ್ತಾನ ಹೀಗಿದ್ದರೂ ದುರ್ದೈವದಿಂದ ಒಂದು ವೇಳೆ ಗುರು ಶಿಷ್ಯನ ಬಿಡುಗಡೆಯಾದರೂ, ಅವರ ಪ್ರೇಮದ ಪಾಶವು ಹರಿಯುವದಿಲ್ಲ ಸದ್ಭಾವದಿಂದ ಭಜನೆಯಲ್ಲಿ ಮಗ್ನನಾಗುತ್ತಾನೆ ಗುರುವಿನ ಪಾದಸದ್ಮದಲ್ಲಿಯೇ ಅವನ ಮನೋ ಧರ್ಮವು ನೆಲೆಸುತ್ತದೆ—

—ಗುರುವಿನ ಧ್ಯಾನವೇ ತನ್ನ ಸ್ವಧರ್ಮ ಕರ್ಮವೆಂದು ತಿಳಿದು ಅವನ ಸೇವೆ ಯನ್ನು ಮಾಡುವ ಪ್ರಯತ್ನವನ್ನು ಬಿಡುವದಿಲ್ಲ ಗುರುವಿನ ಸಹವಾಸದಲ್ಲಿಯೇ ಅವನು ಇದ್ದುದರಿಂದ, ಆ ಗುರುಮೂರ್ತಿಯನ್ನು ತನ್ನ ಹೃದಯ ಮಂಟಪದಲ್ಲಿ ಕುಳ್ಳಿರಿಸು ತ್ತಾನೆ ಮತ್ತು ನಾನಾತರಹದಿಂದ ಅವನ ಭಜನೆಯಲ್ಲಿ ಅನುರಕ್ತನಾಗುತ್ತಾನೆ ಅವನ ಭಜನದ ಅಭಿರುಚಿ ಏನೆಂದು ಹೇಳಲಿ? ಗುರುವೇ ಚಿತ್ಸ್ವರೂಪ ಹುಣ್ಣಿಮೆಯ ಪೂರ್ಣ ಚಂದ್ರನಾಗುವನು ಮತ್ತು ಅವನು ನೀರಡಿಸಿದ ಚಕೋರ ಪಕ್ಷಿಯಾಗಿ, ಚಂದ್ರಾಮೃತದ ದಾರಿಕಾಯುತ್ತ ಕೂಡುವನು ಆ ಮೇಲೆ ಸ್ವಾನಂದರೂಪ ಚಂದ್ರಕಿರಣವನ್ನು ಸದೈವ ಸೇವಿಸುವನು ಇಲ್ಲವೆ ಚಿದಾಕಾಶದಲ್ಲಿ ಸದ್ಗುರುವನ್ನು ಸೂರ್ಯನನ್ನಾಗಿ ಭಾವಿಸಿ, ತಾನು ಸೂರ್ಯಕಾಂತ ಮಣಿಯಾಗುವನು ಮತ್ತು ಅವನ ಪ್ರಖರವಾದ ಪ್ರಕಾಶದಿಂದ ಪ್ರಜ್ವಲಿತನಾಗಿ, ಆ ಪ್ರಭಾವದಿಂದ ಮಾಯಾರೂಪ ವನವನ್ನು ಸುಟ್ಟು ಬಿಡುವನು ಇಲ್ಲವೆ ಸದ್ಗುರುವಿನ ಕೃಪಾಮೃತ ಮಡುವಿನಲ್ಲಿಯ ತರಂಗವು ತಾನಾಗುತ್ತಾನೆ ಮತ್ತು ಒಳ ಹೊರಗೆ ಎಲ್ಲೆಡೆಯಲ್ಲಿಯೂ ಸದ್ಗುರುವಿನ ಸ್ವರೂಪವೇ ಇರುವದೆಂದು ತಿಳಿದು ಹೃದಯದಲ್ಲಿ ಅವನನ್ನೇ ಭಾವಿಸುತ್ತಾನೆ ತನ್ನ ನಿಜವಾದ ಒಡೆಯನೂ ಸದ್ಗುರುವೇ ಇರುವನೆಂದು ನಂಬುತ್ತಾನೆ ಮತ್ತು ಅವನೊಬ್ಬ (ಸದ್ಗುರು) ನಿರ್ವಿಕಲ್ಪ ಕಲ್ಪತರುವು ಇರುವನೆಂದು ಭಾವಿಸಿ, ಅದರ ನೆರಳಿನಲ್ಲಿ ಕುಳಿತು ತನ್ನ ಗುರುಭಕ್ತಿಯು ನಿಜವಾಗಲೂ ಹೆಚ್ಚಿಗೆಯಾಗಲಿ ಎಂದು ವರ ಬೇಡಿಕೊಳ್ಳುತ್ತಾನೆ ಅಥವಾ ಸದ್ಗುರುವನ್ನು ಕಾಮಧೇನು ಎಂದು ತಿಳಿಯುತ್ತಾನೆ ಹಾಗೂ ತಾನು ಅದರ ಕರುವಾಗುತ್ತಾನೆ ಅದು (ಕಾಮಧೇನು) ತನ್ನ ಜ್ಞಾನ ರೂಪ ನಾಲಿಗೆಯಿಂದ, ಪ್ರೀತಿಯಿಂದ ಅವನನ್ನು

ನೆಕ್ಕುತ್ತದೆ ಮತ್ತು ಅವನು ಅದರ ತರಿಯಿಂದ ಬಂದ ಸ್ವಾನಂದರೂಪ ಹಾಲನ್ನು ಕುಡಿಯುತ್ತಾನೆ "ಹೇ ಗುರುದೇವಾ! ನಿನ್ನ ಎಲ್ಲ ಸೇವೆಯನ್ನು ನಾನೇ ಮಾಡುವೆನ' ಎಂದು ಸದ್ಭಕ್ತಿಯಿಂದ ಪ್ರಾರ್ಥನೆ ಮಾಡುತ್ತಾನೆ ಮತ್ತು "ಹೇ ಕೃಪಾನಿಧೆ! ನನಗ ಇದೇ ವರವನ್ನು ಕೊಡು" ಎಂದು ಬೇಡುತ್ತಾನೆ ಆವಾಗ್ಗೆ ಗುರುನಾಥನು ಪ್ರಸನ್ನ ಚಿತ್ತನಾಗಿ ತನ್ನ ವರದ ಹಸ್ತವನ್ನು ಅವನ ತಲೆಯ ಮೇಲಿಟ್ಟು ವರವನ್ನು ಕೊಟ್ಟ ನಂತರ, ಅವನು ಆನಂದಭರಿತನಾಗುತ್ತಾನೆ ಮತ್ತು "ನನಗೆ ವರ ಸಿಕ್ಕಿತು ನಾನು ಧನ್ಯನಾದೆ" ಎಂದು ಹರ್ಷದಿಂದ ರೋಮಾಂಚಿತನಾಗುತ್ತಾನೆ ಹೀಗೆ ಈ ಪ್ರಕಾರ ವಾಗಿ ವರವನ್ನು ಪಡೆದುಕೊಂಡು ಪ್ರೇಮಪುರಸ್ಸರವಾಗಿ ಆದರದಿಂದ ಸೇವೆಯನ್ನು ಮಾಡಲು ಆರಂಭಿಸುತ್ತಾನೆ—

—ಭಾವಾರ್ಥದ ಗುರುಭಕ್ತಿಯು ಧನ್ಯ ಧನ್ಯವಾಗಿರುತ್ತದೆ ಗುರುಭಜನೆಯ ರೀತಿಗಳು ಬಹುವಿಧವಾಗಿರುತ್ತವೆ ಸದ್ಗುರುವಿನ, ಮನಸ್ಸು ಬುದ್ಧಿ, ಅಂತಃಕರಣ ಮುಂತಾದ ಇಂದ್ರಿಯಗಳ ಎಲ್ಲ ವ್ಯಾಪಾರವೂ ತಾನೇ ಆಗಬೇಕೆಂದು ಮನಃಪೂರ್ವಕ ವಾಗಿ ಇಚ್ಛಿಸುತ್ತಾನ ಸದ್ಗುರುವಿನ ಭೋಗವಿಲಾಸಗಳೆಲ್ಲವೂ ನಾನೇ ಆಗುವೆನು ಮತ್ತು ಈ ಪ್ರಕಾರವಾಗಿ ತಾನೊಬ್ಬನೇ ನಿಜವಾಗಿಯೂ ಗುರುಭಕ್ತಿ ಸ್ವರೂಪನಾಗಿ ಬಿಡುವೆನು, ಅದಕ್ಕಿಂತ ಬೇರೆ ಸ್ಥಿತಿಯನ್ನು ಬರಗೊಡುವದಿಲ್ಲವೆಂದನ್ನುತ್ತಾನ ಸದ್ಗುರುವು ಎಲ್ಲಿ ನಿಲ್ಲುವರೋ, ಆ ಭೂಮಿಯೇ ನಾನಾಗುವೆನು ಸದ್ಗುರುವು ಎಲ್ಲೆಲ್ಲಿ ಮಾರ್ಗಕ್ರಮಿಸುವರೋ, ಆ ಮಾರ್ಗದಲ್ಲಿಯ ಮಣ್ಣು ನಾನೇ ಆಗುವೆನು ಅವರು ಕಾಲು ತೊಳೆಯುವ ಎಲ್ಲ ನೀರೂ ನಾನೇ ಆಗುವೆನು ಮತ್ತು ಹರಿವಾಣವೂ ನಾನೇ ಆಗುವೆನು ಕಾಲು ತೊಳೆಯುವವನೂ ನಾನು ಮತ್ತು ಚರಣ ತೀರ್ಥವನ್ನು ಸೇವಿಸುವವನೂ ನಾನೇ ಸದ್ಗುರು ಚರಣದ ಧೂಳಿ ಕಣವೂ ನಾನೇ ಆಗುವೆನು ಮತ್ತು ಸದ್ಗುರುವು ವಿರಾಜಮಾನವಾಗುವ ಆಸನವು ನಾನೇ ಆಗುವನು ಸದ್ಗುರುವಿನ ಸಿಂಹಾಸನ ಮತ್ತು ಆಸನವು ನಾನೇ ಆಗುವೆನೆಂಬುದು ಲಕ್ಷ್ಯದಲ್ಲಿಡು ಸದ್ಗುರುವಿಗೆ, ಲೇಪಿಸುವ ಎಣ್ಣೆಯೂ ಸರ್ವಾಂಗದಿಂದ ನಾನೇ ಆಗುವೆನು ಸದ್ಗುರುವಿಗೆ ಆನಿಸಿ ಕೊಂಡು ಕುಳ್ಳಿರಲು ಇಟ್ಟ ಮಿದುವಾದ ದಿಂಬು, ತೆಕ್ಕೆ ಲೋಡುಗಳೆಲ್ಲವೂ ನಾನೇ ಆಗುವೆನು—

—ಮನದ ಹವಣಿಕೆಯು ಎಷ್ಟೊಂದಿರುವದು, ನೋಡಿರಿ ಸದ್ಗುರುವಿನ ತಯಾರಿಸಿದ ಖಡಾವುಗಳೂ ನಾನೇ ಆಗುವನು ಮತ್ತು ಅವುಗಳನ್ನು ಬೇರೆ ಯಾರಿಗೂ ಕೈಮುಟ್ಟಲು ಕೊಡುವದಿಲ್ಲ ಸದ್ಗುರುವಿನ ಶ್ವಾಸೋಚ್ಛ್ವಾಸವೂ ನಾನೇ ಆಗುವೆನು ಮತ್ತು ಅವರ ನಾಸಿಕದಿಂದ, ತೀವ್ರವಾಗಿ ನಾನೇ ಹೊರ ಬೀಳುವೆನು ಮತ್ತು ಸದ್ಗುರುವು ತೆಗೆದುಕೊಳ್ಳುವ ವಾಸನೆಯ ಸುಗಂಧವೂ ನಾನೇ ಆಗುವೆನು ಗುರುವು ಕೃಪಾ ದೃಷ್ಟಿಯಿಂದ ಎಲ್ಲಿ ಅವಲೋಕನವನ್ನು ಮಾಡುವರೋ, ಆ ದೃಶ್ಯ ಪದಾರ್ಥವೂ

ನಾನೇ ಆಗುವೆನು ಇಲ್ಲವೇ ಗುರುವು ಎಲ್ಲಿಲ್ಲಿ ನೋಡುವರೋ ಅದೆಲ್ಲವೂ ಕೂಡಲೆ ನಾನೇ ಆಗುವೆನು ಗುರುವಿಗೆ ಯಾವ ಭಾಷಣವು ರುಚಿಸುತ್ತದೆಯೋ, ಅದನ್ನು ಕೇಳುವದಕ್ಕಾಗಿ ನಾನು ಗುರುವಿನ ಕಿವಿಯಾಗುವೆನು ಅಥವಾ ಗುರುವು ಯಾವ ಕೀರ್ತನೆಯನ್ನು ಇಷ್ಟಪಡುವರೋ, ಅದನ್ನು ಹಾಡುವ ಗಾಯಕನೂ ನಾನಾಗುವೆನು ಸದ್ಗುರುವು ಹೇಳುವ ಕಥೆಯೂ, ನಿಜವಾಗಲೂ ಆದರದಿಂದ ನಾನೇ ಆಗುವೆನು ಮತ್ತು ಆ ಅಕ್ಷರದಲ್ಲಿಯ ಅಕ್ಷರ ಮತ್ತು ಅಕ್ಷರದಲ್ಲಿಯ ಅರ್ಥವೂ ಕೂಡ ಸರ್ವತೋಪರೀ ನಾನೇ ಆಗುವೆನು—

—ಸದ್ಗುರುವಿನ ಸ್ನಾನದ ನೀರೂ ನಾನೇ ಆಗುವೆನು ಮತ್ತು ಅವರು ಆಚಮನ ಮಾಡುವ ನೀರೂ ನಾನೇ ಆಗುವೆನೆಂದು ತಿಳಿಯಬೇಕು ಗುರುವಿನ ಉತ್ತಮ ಅಂಗ-ವಸ್ತ್ರವೂ ನಾನೇ ಆಗುವೆನು ಮತ್ತು ಗುರುವಿನ ಕಾಲೊರೆಸುವ ಒಗೆದ ಬಟ್ಟೆಯೂ ನಾನೇ ಆಗುವೆನು ಗುರುವಿಗೆ ಲೇಪಿಸುವ ಚಂದನವೂ ನಾನೇ ಆಗುವೆನು ಗುರು ಚರಣಗಳಿಗೆ ಅರ್ಪಿಸುವ ಹೂಗಳು ನಾನೇ ಆಗುವೆನು ಗುರುವು ಊಟ ಮಾಡುವ ತಟ್ಟೆಯೂ ಮತ್ತು ಊಟವೂ ನಾನೇ ಆಗುವೆನು ಆ ಊಟದಲ್ಲಿಯ ರುಚಿ, ಪಕ್ವಾನ್ನ, ಪಂಕ್ತಿಯಲ್ಲಿ ಕೂಡುವವನು ಎಲ್ಲವೂ ನಾನೇ ಆಗುವೆನು ವಂಸರನ್ನು ಮಂಥನ ಮಾಡಿ ತಗೆದ ಬೆಣ್ಣೆಯನ್ನು ವೈರಾಗ್ಯರೂಪ ಅಗ್ನಿಯಲ್ಲಿ ಕಾಸಿದ, ಊಟದಲ್ಲಿಯ ಮುಖ್ಯ ತುಪ್ಪವು ನಾನೇ ಆಗುವನು ಅಡಿಗೆಗೆ ಸ್ವಾದಿಷ್ಟವನ್ನೀಡುವ ಮತ್ತು ಎಲ್ಲ ರುಚಿಗೆ ಕಾರಣವಾದ ಉಪ್ಪು ನಾನೇ ಆಗುವೆನು ಇದರಲ್ಲಿಯ ನ್ಯೂನತೆಯನ್ನು ಗುರುವು ಪೂರ್ಣಮಾಡಿಕೊಳ್ಳುವನು—

—ಗುರುವಿನ ಕುಡಿಯುವ ನೀರು ಮತ್ತು ಅವರ ತೃಪ್ತಿಯ ತೇಗು ನಾನೇ ಆಗುವೆನು ಗುರುವಿಗೆ ರುಚಿಸುವ ಎಲ್ಲ ಪದಾರ್ಥಗಳು ನಾನೇ ಆಗುವೆನು ಅವರ ಎಲ್ಲ ಅಭೀಷ್ಟವು ಸರ್ವಾಂಗದಿಂದ ನಾನೇ ಆಗುವೆನು ಅವರು ಎಲ್ಲಿ ಕೈತೊಳೆಯುವರೋ ಅಲ್ಲಿಯ ಬಿಸಿನೀರು, ನಾನೇ, ಕೈತೊಳೆಯುವಾಗ ಸಿಡಿದ ನೀರೂ ಸಹ ನಾನೇ ಆಗುವೆನು ಗುರುವಿಗೆ ಅರ್ಪಿಸುವ ಹಣ್ಣು ಕೂಡ, ಕೂಡಲೆ ನಾನೇ ಆಗುವೆನು ಗುರುವಿಗೆ ಅರ್ಪಣ ಮಾಡುವದರಿಂದ ಉಂಟಾಗುವ ಸಾರ್ಥಕತೆಯ ಫಲವೂ ನಾನೇ ಆಗುವೆನು ಗುರುವಿನ ಉಚ್ಛಿಷ್ಟವನ್ನು ಸೇವಿಸುವ ಆಸೆಯು ನನಗೆ ಬಹಳವಿರುತ್ತದೆ ನಾನು ಬೆಕ್ಕಾಗಿ ಅವರ ತಾಟನ್ನು ನೆಕ್ಕಿ ಲಕಲಕಿಸುವಂತೆ ಮಾಡುತ್ತೇನೆ ಗುರುಗಳ ಕರೋದ್ವರ್ತನದ ಸುಗಂಧೀಚಂದನವೂ ನಾನಾಗುವೆನು ಮತ್ತು ಮುಖದಲ್ಲಿಯ ಒಳ್ಳೆಯ ಸುವಾಸವೂ ನಾನಾಗುವೆನು. ಫಲೇಚ್ಛೆಯನ್ನು ಒಡೆದು ಮಾಡಿದ ಅಡಿಕೆ ಪುಡಿ, ವಾಸನೆಯ ಎಸಳು ತಗೆದ ಎಲೆ, ಇಂತಹ ಎಲೆ ಅಡಿಕೆಯನ್ನು ಸದ್ಗುರುವಿಗೆ ಅಗಿಯಲು ಕೊಟ್ಟು, ಅದರಲ್ಲಿಯ ತಾಂಬೂಲದ ರುಚಿಯೂ ನಾನಾಗುವೆನು—

—ಅಹಂಕಾರವನ್ನು ಸುಟ್ಟು ನಾನು (ಅವನೇ ನಾನು) 'ಸೋಹಂ' ರೂಪದಿಂದ

ಶುದ್ಧ ಸುಣ್ಣ ಆಗುವೆನು ಮತ್ತು ಶಾಂತಿ ರೂಪದಿಂದ ಪರಿಪಕ್ವವಾದ ಎಲೆಗೆ ಹಚ್ಚಿ ಸದ್ಗುರುವಿನ ಮುಖವನ್ನು ಸೇವಿಸುವೆನು ಎಲ್ಲ ಸಾರದಲ್ಲಿಯ ಶುದ್ಧ ತತ್ವರೂಪ ಕಾಚು ನಾನಾಗುವೆನು ಮತ್ತು ಅದರ ಬಣ್ಣದಿಂದ ಸದ್ಗುರುವಿನ ಮುಖದಲ್ಲಿ ನಾನೇ ಸುಶೋಭಿತನಾಗಿ ಕಾಣುವೆನು ಸದ್ಗುರುವಿನ ಮುಖದಿಂದ ಬೀಳುವ ತಾಂಬೂಲದ ರಸವನ್ನು ನಾನು ಕೆಳಗೆ ಬೀಳಲು ಬಿಡುವದಿಲ್ಲ ಮತ್ತು ಪಿಕದಾಣಿಯ (ಉಗುಳುವ ಪಾತ್ರೆ) ಬಾಯಿಯ ಬಾಯಿ ನಾನು ಆಗುವೆನು ಗುರುವು ಅಗಿದ ತಾಂಬೂಲ ಮತ್ತು ಅವರು ಉಗುಳಿದ ರಸ ಹಾಗೂ ಪಿಕದಾಣಿ ಸಹ ನಾನೇ ಆಗುವೆನು ನೊಣಗಳನ್ನು ಹೋಗಲಾಡಿಸುವ ಚಾಮರವೂ ನಾನೇ ನಿಜಾಂಗದಿಂದಾಗುವೆನು ಗುರುವಿನ ಮುಖ ದಲ್ಲಿಯ ತಾಂಬೂಲವನ್ನು ತೆಗೆದುಕೊಳ್ಳುಪಡಕ್ಕೋಸ್ಕರ, ಆದರದಿಂದ ನಾನು ಅವರ ಸೇವಕನಾಗುವೆನು ಇಲ್ಲವೆ ಗುರುವಿನ ಅಂಕದಲ್ಲಿ ಪ್ರೀತಿಯ ಬಾಲಕನಾಗಿ ಕೂಡ್ರುವೆನು ನನ್ನ ಉತ್ತಮ ಗುಣಗಳಿಂದ ಪೋಣಿಸಿದ ಹೂವಿನ ಮಾಲೆಯನ್ನು ಪ್ರೀತಿಯಿಂದ ಅವರ ಕೊರಳಲ್ಲಿ ಹಾಕುವೆನು ಗುರುಗಳು ಸಹಜವಾಗಿ ಕಮಲದ ಹೂವನ್ನು ಧರಿಸಿದಲ್ಲಿ ಆ ಕರಕಮಲವೂ ನಾನೇ ಆಗುವೆನು ಗುರುವಿಗೆ ಎತ್ತುವ ಆರತಿಯ ನೀಲಾಂಜನದ ಜ್ಯೋತಿಯನ್ನು ನನ್ನ ಪ್ರಕಾಶದಿಂದಲೇ ಪ್ರಕಾಶಿಸುವನು ಮತ್ತು ಗುರುವು ಯಾವ ಬೆಳಕಿನಲ್ಲಿ ನಡೆಯುವರೋ, ಆ ದೀಪದ ಬೆಳಕೂ ನಾನೇ ಆಗುವನು ಗುರುವಿಗೆ ನನ್ನ ಜೀವಭಾವದಿಂದ ನಿವಾಳಿಸುವೆನು ಅವರ ಎಲ್ಲ ದುಃಖವನ್ನೂ ನಾನು ಸಹಿಸುವನು ಆ ನಿವಾಳಿಸುವ ಲಕ್ಷಣವು ನನ್ನಲ್ಲಿಯೇ ಇರಲಿ ಛತ್ರವು ನಾನೇ ಮತ್ತು ಛತ್ರ ಹಿಡಿಯು ವವನೂ ನಾನೇ ಚವರಿಯೂ ನಾನೇ ಮತ್ತು ಚವರಿ ಬೀಸುವವನೂ ನಾನೇ ಮೇಲೆ ತೂಗ್ಹಾಕಿದ ಬೀಸಣಿಕೆಯೂ ನಾನೇ ಆಗುವೆನು. ಬೀಸುವವನೂ ನಾನೇ ಇದರಂತೆ ಗುರುಗಳ ಎಲ್ಲ ಪರಿವಾರವೂ ನಾನೇ ಆಗುವನು ಗುರುಗಳು ಕೂಡ್ರುವ (ಶ್ಯಾಮ ಕರ್ಣ) ಕುದುರೆಯೂ ನಾನೇ ಆಗುವೆನು ಗುರುವಿನ ಎಲ್ಲ ಭಾರವನ್ನು ಹೊರುವದರ ಸಲುವಾಗಿ, ಕುದುರೆಯ ರೂಪದಿಂದ ಅವರ ವಾಹನವೂ ನಾನೇ ಆಗುವೆನು—

—ಗುರುಗಳು ಮಾರ್ಗಕ್ರಮಿಸುವಾಗ, ಅವರ ಸಂರಕ್ಷಕನು ನಾನಾಗುವೆನು ಗುರುವಿನ ಗುಣಗಾನವನ್ನು ಗರ್ಜಿಸುವ ಭಟ್ಟಂಗಿಯು ನಾನಾಗುವನು ಮತ್ತು ಗುರು ಮಂದಿರದಲ್ಲಿ ಶಾಂತಿ ಪಾಠವನ್ನು ಹೇಳುವ ಪುರಾಣಿಕನು ನಾನಾಗುವೆನು ಗುರುವಿಗೆ ಛತ್ರ ಹಿಡಿಯುವವನೂ ನಾನು, ಚವರಿ ಬೀಸುವವನೂ ನಾನು, ತಾಂಬೂಲವನ್ನು ಕೊಡುವವನೂ ನಾನು, ಹೂಗಳನ್ನು ಕೊಡುವವನೂ ನಾನು, ಕಸಗೂಡಿಸುವವನೂ ನಾನು, ಹಾಲಿನವ ನಾನು ಮತ್ತು ಬಾಗಿಲನ್ನು ಕಾಯುವ ಶಿಪಾಯಿಯೂ ನಾನೇ ಆಗುವೆನು ಗುರುವು ಏನನ್ನು ಲಕ್ಷಿಸುವರೋ, ಆ ಲಕ್ಷ್ಯವು ನಾನೇ ಆಗುವೆನು ಪ್ರಾಣ ಹೋದರೂ ಗುರುವನ್ನು ಅಗಲಿ ಅರ್ಧಕ್ಷಣ ಕೂಡ ಬೇರೆಲ್ಲಿಯೂ ದೂರ ಹೋಗುವದಿಲ್ಲ, ಗುರುವು ಹೇಳುವ ಕಥೆಯನ್ನು ಆದರದಿಂದ ಕೇಳುವ ಶ್ರೋತಾ ನಾನಾಗುವೆನು.

ಗುರುಕೃಪೆಯಿಂದ ಅಧ್ಯಾತ್ಮಜ್ಞಾನವನ್ನು ಕೊಡುವ ಭಾಷಣಕಾರನೂ ನಾನಾಗುವೆನು ಗುರುವಿನ ಉದಾತ್ತವಾದ ದಾನವನ್ನು ಸ್ವೀಕರಿಸುವ ನಾನೊಬ್ಬ ಬಡವ ಯಾಚಕನಾಗುವೆನು ಗುರುವು ತನ್ನ ಎಲ್ಲ ಗುಪ್ತ ರಹಸ್ಯವನ್ನು ಹೇಳುವಾಗ, ಏಕಾಂತಸ್ವರೂಪ ನಾನೇ ಆಗುವೆನು ಗುರುವು ಸಿಂಹಾಸನವಾಗಿ ಕೂಡುವ ಅವಕಾಶ ನಾನೇ ಆಗುವೆನು ಮತ್ತು ಗುರುವಿನ ಹೃದಯದಲ್ಲಿಯ ಚಿದಾಕಾಶದ, ನಿರವಕಾಶ ನಾನೇ ಆಗುವೆನು ಗುರುವು ಕೂಡ್ರುವ ಸುಖವಾದ ಆಸನವೂ ನಾನೇ ಆಗುವೆನು ಮತ್ತು ಪಲ್ಲಕ್ಕಿಯ ಸೇವೆಯನ್ನು ಮಾಡುವವನು ನಾನೇ ಆಗುವೆನು ಒಡೆಯನ ಕಡೆಗೆ ಲಕ್ಷ್ಯವಿಟ್ಟು ಬಹಳ ಅಚ್ಚುಕಟ್ಟಾಗಿ ಬೇಗ ಬೇಗನೇ ಹೆಜ್ಜೆಯನ್ನಿಡುತ್ತ ಗುರುವಿನ ಪಲ್ಲಕ್ಕಿಯನ್ನು ಹೊತ್ತು ಒಡೆಯನ ಸಂಗಡ ಮಾತನಾಡುತ್ತ ನಡೆಯುವೆನು ಗುರುವಿನ ಮುಖದತ್ತ ದೃಷ್ಟಿಯಿಟ್ಟು ನಡೆಯುವಾಗ ಕಾಲತೊಡಕಿ ಬೀಳಬಾರದೆಂದು, ಹೆಜ್ಜೆಗಳನ್ನು ಎತ್ತಿ ಎತ್ತಿ ಹಾಕುವೆನು ಭೂಮಿಯಲ್ಲಿಯ ತೆಗ್ಗು ದಿನ್ನೆಗಳನ್ನು ತಪ್ಪಿಸಿ ಸರಿಯಾಗಿ ಹೆಜ್ಜೆಯನ್ನಿಡುತ್ತ ನಡೆಯುವೆನು ಸಂಕಲ್ಪ ಮತ್ತು ವಿಕಲ್ಪಗಳ ಜೋಲಿಯು ಎಡಕ್ಕೆ ಮತ್ತು ಬಲಕ್ಕೆ ಹೋಗಬಾರದೆಂದು ಎಚ್ಚರಿಕೆಯಿಂದ ಗುರುಗಳ ಮುಖದತ್ತ ನೋಡುತ್ತ ನೋಡುತ್ತಲೇ ನಾನು ನಡೆಯುವನು—

—ದಾರಿಯನ್ನು ತಪ್ಪದೆ. ಹೆಗಲ ಮೇಲಿನ ಪಲ್ಲಕ್ಕಿಯ ಮುಂದಿನ ಕಟ್ಟಿಗೆಯು ಅಲ್ಲಾಡದಂತೆ, ಶರೀರದ ಮಧ್ಯಸ್ಥಿ ಇಲ್ಲದ, ನಡೆಯುವ, ಉತ್ಕೃಷ್ಟ ಪಲ್ಲಕ್ಕಿ ಹೊರುವವನಾನಾಗುವೆನು ಆ ಸುಖಮಯವಾದ ಪಲ್ಲಕ್ಕಿಯ ಆಶ್ರಯದಿಂದ ನಡೆಯುವಾಗ ಉತ್ತರೋತ್ತರ ಸುಖವು ಬೆಳೆಯುತ್ತಲೇ ಹೋಗುವದು ಹಿಂದಿರುವ ಅಂದಾಜನ್ನು ಲಕ್ಷಿಸಿ ಬಹಳ ಸಂತೋಷದಿಂದ ಮುಂದೆ ನಾಗುವೆನು ಏರಿಳಿತವನ್ನು, ಬೀಳುವದನ್ನು, ಸಿಕ್ಕು ಬೀಳುವದನ್ನು ಮತ್ತು ಓಡುವದೆಲ್ಲವನ್ನೂ ರಕ್ಷಿಸುತ್ತ ಚೆನ್ನಾಗಿ ಲಕ್ಷ್ಯಗೊಟ್ಟು ಉಲ್ಲಾಸದಿಂದ ನಡೆಯುವೆನು ಏರಿಳಿತಗಳನ್ನು ಹತ್ತುವಾಗ, ಇಳಿಯುವಾಗ ಗುರುಗಳಿಗೆ ಪಲ್ಲಕ್ಕಿಯಲ್ಲಿ ಕೂಡ್ರಲು ತೊಂದರೆಯಾಗಬಾರದೆಂದು, ಆ ಪಲ್ಲಕ್ಕಿಯ ದಂಡವನ್ನು ಎದೆಯ ಮೇಲೆ, ತಲೆಯ ಮೇಲೆ ಹೆಗಲ ಮೇಲೆ ಮತ್ತು ಮಳಕೈ ಮೇಲೆ ಹೀಗೆ ಎಲ್ಲ ಪ್ರಕಾರದಿಂದ ಬದಲಿಸುತ್ತ, ಕಾಲಿನತ್ತ ದೃಷ್ಟಿಯನ್ನಿಟ್ಟು, ಬಾಯಿ ಮುಚ್ಚಿಕೊಂಡು ನಡೆಯುವೆನು—

—ಮುಂದ ದಿನ್ನೆಯು ಬರಲಿ, ತೆಗ್ಗು ಬರಲಿ, ಏರಿಳಿತ ಬರಲಿ, ದಮ್ಮು ಹತ್ತಲಿ, ಮೈನಡುಗಿ ಜೀವಕ್ಕೆ ಕಸಿವಿಸಿಯಾಗಲಿ, ಆದರೂ ದಷ್ಟಪುಷ್ಟ ಮನುಷ್ಯನ ಹಾಗೆ ಧೈರ್ಯದಿಂದ, ಏರಿಕೆಯನ್ನು ಏರುವೆನು ಕಾಮನೆಗಳ ಕಾಲುವೆಯನ್ನು ದಾಟಿ, ಕ್ರೋಧದ ಆವೇಶವನ್ನು ತಡೆಹಿಡಿದು ಮತ್ತು ತಗ್ಗುಗಳಿದ್ದ ದಾರಿಯನ್ನು ತಪ್ಪಿಸಿ, ಪಲ್ಲಕ್ಕಿಯ ಮುಂದಿನ ದಂಡವನ್ನು ಹೆಗಲ ಮೇಲಿಟ್ಟುಕೊಂಡು ನಾನು ಮಾರ್ಗ ಕ್ರಮಿಸುವೆನು ಮಮತೆಯ ರೊಜ್ಜು ಬಹಳ ಪ್ರಬಲವಾಗಿರುತ್ತದೆ ಆ ರೊಜ್ಜಿನಲ್ಲಿ ಸಂಪೂರ್ಣ ಸಿಕ್ಕುಬೀಳಬೇಕಾಗುತ್ತದೆ. ಆದರೆ ಆ ರೊಜ್ಜಿನಲ್ಲಿ ನನ್ನ ಒಂದು ಪಾದವೂ

ಕೂಡ ಮಲೀನವಾಗದಂತೆ, ನಾನು ಕೂಡಲೇ ದಾಟಿ ಹೋಗುವೆನು ಮೋಹರೂಪ ನದಿಯ ಜಾಲವು ಬಹಳ ಭಯಂಕರವಾಗಿದೆ ಅದರಲ್ಲಿ ತೀವ್ರತೆಯಿಂದ ಹರಿಯುವ ನೀರಿನ ವೇಗವೂ ಅತಿಶಯವಾಗಿರುತ್ತದೆ! ಆದರೆ ನಾನು, ನನ್ನ ಸ್ವಾಮಿಗೆ ಒಂದು ನೀರಿನ ಹನಿಯೂ ಕೂಡ ಸಿಡಿಯದಂತೆ, ತತ್‌ಕ್ಷಣ ಅವರನ್ನು ಒಂದು ದಂಡೆಯಿಂದ ಮತ್ತೊಂದು ದಂಡಗೆ ಮುಟ್ಟಿಸುತ್ತೇನೆ ಒಡೆಯನತ್ತ ದೃಷ್ಟಿಯನ್ನಿಟ್ಟು ವೇಗದಿಂದ ನಡೆಯುವಾಗ ಎರಡೂ ಕಡೆಯ ದಂಡವನ್ನು ಹೊರುವವನು ನಾನೇ ಆಗುವೆನು ಈ ಪ್ರಕಾರವಾಗಿ ಹಿಂದೆ ಮತ್ತು ಮುಂದೆ ನಾನೇ ಇದ್ದು, ಸುಖವಾಗಿ ನಿದ್ರಿಸ್ತರಾದ ಗುರುಗಳ ನಿದ್ರೆಯು ನಾಶವಾಗದಂತೆ, ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗುವೆನು ಉಚ್ಛಿಷ್ಟದ ಮೇಲೆ ಪ್ರೋಷಿಸುವ, ಎಂಟೂ ಪ್ರಹರ ಎಚ್ಚರದಿಂದಿರುವ ಮತ್ತು 'ಗುರು ಗುರು' ಎನ್ನುತ್ತ ಗುರುಗಳ ಬಾಗಿಲವನ್ನು ಕಾಯುವ ನಾಯಿಯು ನಾನೇ ಆಗುವೆನು ಕಣ್ಣಿಗೆ ಬೇರೆ ಯಾರಾದರೂ ಕಂಡರೆ, 'ಸೋಹಂ' ಭಾವನೆಯಿಂದ ಬೊಗಳುವೆನು ಮತ್ತು ಭಜನರೂಪ ತೆಗ್ಗಿನಲ್ಲಿ ಜಿಗಿದು, ಗುರುವಿನ ಬಾಗಿಲಿನಲ್ಲಿಯೇ ಕೂಡ್ರುವ ನಾಯಿಯು ನಾನಾಗುವೆನು ಗುರು ಸೇವೆಯನ್ನು ಮಾಡುವ ಪ್ರೀತಿಯಿಂದ, ಶಿಷ್ಯನು ಹೀಗೆ ಅನೇಕ ಪ್ರಕಾರದ ವಿಚಾರವನ್ನು ಮನಸ್ಸಿನಲ್ಲಿ ಮಾಡುತ್ತಾನೆ—

—ದೈವಯೋಗದಿಂದ ಅವನು ದೂರಿದ್ದರೂ ಭಕ್ತಿಯೋಗದಿಂದ ಹತ್ತಿರವೇ ಇರುತ್ತಾನ ಗುರುಸೇವೆಗಾಗಿ ಯಾವನು ತನ್ನನ್ನು ತಾನೇ ಮಾರಿಕೊಳ್ಳು ತ್ತಾನೋ, ಅವನಿಗೆ ಸದ್ವಿದ್ಯಾ ವ ಶಾಸ್ತ್ರಗಳು ಸುಲಭವಾಗಿ, ಗುರುಕೃಪೆಯಿಂದ ಅವಗತವಾಗುತ್ತವೆ ಅವನು ಗುರುವಿನ ಹತ್ತಿರವೇ ಇರಲಿ ಇಲ್ಲವೇ ದೂರವಿರಲಿ, ಅವನಿಗೆ ಗುರುಭಕ್ತಿಯ ಅತಿಶಯ ಅಭಿರುಚಿಯಿರುವದರಿಂದ ಅವನು ತನ್ನ ಪ್ರಾಣ ವನ್ನು ಗುರುಸೇವಗಾಗಿ ಮತ್ತು ಭಜನೆಗಾಗಿ ಸಮರ್ಪಣೆ ಮಾಡಿರುತ್ತಾನ ಹೀಗೆ ಗುರುಭಕ್ತಿಪರಾಯಣನಾಗಿರುವದರಿಂದಲೇ ಮತ್ತು ಏಕಾಗ್ರತೆಯನ್ನು ಸಾಧ್ಯ ಮಾಡಿ ಕೊಳ್ಳುವ ಆಸೆಯಿಂದಲೇ, ಗುರುಕೃಪಾಕುಠಾರರೂಪ ಸದ್ವಿದ್ಯಾ ಲಕ್ಷಣಶಸ್ತ್ರವು ಅವನ ಕೈ ಸೇರುತ್ತದೆ ಆ ಶಸ್ತ್ರವನ್ನು ವೈರಾಗ್ಯರೂಪ ಸಾಣೆಗಗೆ ಹಚ್ಚಿ ಸ್ವಸ್ವರೂಪಾ ಕಾರ ವೃತ್ತಿಯಿಂದ ಮಸೆದು ತೀಕ್ಷ್ಣವಾಗಿ ಲಕಲಕಿಸುವಂತೆ ತಯಾರಿಸಿದನು ಹೀಗೆ, ತನ್ನ ದೃಷ್ಟಿಯಿಂದ ಶಸ್ತ್ರವನ್ನು ಸಿದ್ಧಗೊಳಿಸಿ, ಶಸ್ತ್ರ ಮತ್ತು ಶಸ್ತ್ರ ಹಿಡಿಯುವ ವನನ್ನು ದೃಢವಾಗಿ ಐಕ್ಯಭಾವನೆಯಿಂದ ಮುಷ್ಟಿಯಲ್ಲಿ ಹಿಡಿದು, ಆಮೇಲೆ ಸಂಸಾರ ವೃಕ್ಷವನ್ನು ಛೇದಿಸಲು ಸಿದ್ಧನಾಗುತ್ತಾನ ಚೆನ್ನಾಗಿ ಗುರಿಯನ್ನು ಸಾಧಿಸಿ, ಬಹಳ ಜೋರಿನಿಂದ ಸಂಸಾರ ವೃಕ್ಷವನ್ನು ಛೇದಿಸಲು ಸಿದ್ಧನಾದ ಕೂಡಲೇ ಅದರ (ಸಂಸಾರ ವೃಕ್ಷದ) ನಾಶವಾಗುತ್ತದೆ ಮತ್ತು ಅದು ಪ್ರತ್ಯಕ್ಷ ಕಡಿಯದೆಯೇ ಕತ್ತರಿಸಿ ಬೀಳುತ್ತದೆ ಜೀವದ ಇಚ್ಛಾರೂಪ ವಾಸನೆಯ ಕಲ್ಪನೆಯನ್ನು ಕಡಿದು ಹಾಕಬೇಕು ಮತ್ತು ಧೈರ್ಯದಿಂದ ಎಚ್ಚರಿರಬೇಕು ಇದೇ ಸಂಸಾರರೂಪ ವೃಕ್ಷದ ಛೇದವು ಇರುತ್ತದೆ ಆತ್ಮಸಾಕ್ಷಾತ್ಕಾರವಾದ ನಂತರ ಎಲ್ಲ ಸಾಧನೆಗಳು ತಾವಾಗಿಯೇ ಲೋಪ

ಹೊಂದುತ್ತವೆ ಭೋಜನದಿಂದ ಸಂಪೂರ್ಣ ತೃಪ್ತಿಯಾದ ಮೇಲೆ ಇತರ ವ್ಯಂಜನಗಳ ಅವಶ್ಯಕತೆಯು ಇರುವದಿಲ್ಲ ಹೊಟ್ಟೆ ತುಂಬಿ ತೃಪ್ತಿಯಾದ ಮೇಲೆ, ಅಮೃತವನ್ನೂ ಕೂಡ ಯಾರೂ ಸೇವಿಸುವದಿಲ್ಲ ಅದರಂತೆ ಬ್ರಹ್ಮವಾದಪ್ರಾಪ್ತಿಯಾದ ನಂತರ ಈ ಸಾಧನೆಗಳ ಪ್ರಯತ್ನವನ್ನು ಬಿಟ್ಟುಬಿಡಬೇಕು ಇದೇ ಭಾವಾರ್ಥವನ್ನು ಮನಸ್ಸಿನಲ್ಲಿಟ್ಟು ನಾನು ನಿನಗೆ, ಹಿಂದಕ್ಕೆ ಈ ಸಾಧನೆಗಳ ಹವ್ಯಾಸವನ್ನು ಪ್ರವೃತ್ತಿ ನಿವೃತ್ತಿ ಸಹಿತವಾಗಿ ಬಿಡಲು ಹೇಳಿರುವನು ಪರಬ್ರಹ್ಮತ್ವವು ಪ್ರಾಪ್ತವಾಯಿತೆಂದರೆ, ವೇದೋಕ್ತ ಕರ್ಮಗಳೆಲ್ಲವೂ ಸುಳ್ಳಾಗುತ್ತವೆ ಮತ್ತು ವರ್ಣಾಶ್ರಮಧರ್ಮಗಳೂ ಸುಳ್ಳಾಗುತ್ತವೆ ಇದು ಕರ್ಮತ್ಯಾಗದ ಗುಟ್ಟಾಗಿರುತ್ತದೆ—

—ಕನಸಿನಲ್ಲಿ ತ್ವರೆಯಿಂದ ನಡೆಯುವಾಗ ಕಾಲು ತೊಡಕಿ ಬಾವಿಯಲ್ಲಿ ಬೀಳುತ್ತಾನೆ ಮತ್ತು ಎಚ್ಚತ್ತನಂತರ ಅವನು ಅಲ್ಲಿಂದ ಮೇಲೆ ಬರುತ್ತಾರೆ ಅದರಂತೆ ಸಾಧನೆಗಳ ಜಗ್ಗಾಟವು ವ್ಯರ್ಥವಾಗಿರುವದು ಹೊಲದಲ್ಲಿ ಬೆಳೆಯು ನಾಶವಾಗಿ ಬಂದ ನಂತರ, ಅದರಲ್ಲಿ ಯಾರು ರಂಟೆ ಹೊಡೆಯುವರು? ಮನೆಯಲ್ಲಿ ಗಜಾಂತಲಕ್ಷ್ಮಿಯು ಪ್ರವೇಶವಾಯಿತೆಂದರೆ, ಮನೆ ಮನೆಗೆ ಹೋಗಿ ಯಾರು ಭಿಕ್ಷೆ ಬೇಡುವರು? ನಿಧಾನವೇ ಕೈಗೆ ಸಿಕ್ಕ ಮೇಲೆ ಕಣ್ಣಿಗೆ ಕಾಡಿಗೆ ಯಾರು ಹಾಕುವರು? ಅದರಂತೆ ಆತ್ಮಜ್ಞಾನವು ಪ್ರಾಪ್ತವಾದ ನಂತರ ಸಾಧನೆಗಳ ಕಷ್ಟವನ್ನು ಯಾರು ಸಹಿಸುವರು? ಉದ್ಧವಾ! ಆತ್ಮಜ್ಞಾನದಿಂದ ಸಂಸಾರದ ನಿವೃತ್ತಿಯನ್ನು ಹೇಳಿದೆನು ಅದೇನೆಂದರೆ ನಿಜವಾಗಲೂ ತನ್ನ ನಿಜವೃತ್ತಿಯನ್ನು ಬಿಟ್ಟುಬಿಡಬೇಕು ಅಗ್ನಿಯಿಂದ ಅನ್ನವು ಬೆಂದು ಸಿದ್ಧವಾಗುತ್ತದೆ ಆದರೆ ಆ ಉತ್ತಮವಾದ ಅನ್ನವು ಸಿದ್ಧವಾದರೂ ಕೂಡ, ಅದರಲ್ಲಿಯೆ ಉಗಿಯು ಉಮಗೊಯ್ಯುವಿದ್ದರೆ ಅದರ (ಉಗಿಯ) ಉಷ್ಣತೆಯ ಮೂಲಕ ಊಟ ಮಾಡುವವನ ಬಾಯಿಯು ಸುಡುತ್ತದೆ ಮತ್ತು ಅಡಿಗೆ ಮಾಡುವವನಿಗೂ ಕೂಡ ಅದರ ರುಚಿಯು ತಿಳಿಯುವದಿಲ್ಲವೆಂಬುದನ್ನು ಲಕ್ಷ್ಯದಲ್ಲಿಡು—

—ಮಾವಿನಕಾಯಿಯ ವಾಡಾದರೂ ಕೂಡ ಅದರಲ್ಲಿಯ ಹುಳಿಯ ಅವಶೇಷವು ಉಳಿದೇ ಉಳಿಯುತ್ತದೆ. ಆದರೆ ಅದೇ ಮಾವಿನಕಾಯಿಯನ್ನು ಅಡಿಯಲ್ಲಿಟ್ಟು ಪಕ್ವವಾದ ಮೇಲೆ, ತಿನ್ನದೆಯೇ ನಾಸಿಕವು ಅದರ ರುಚಿಯನ್ನು ಹೇಳುತ್ತದೆ ಮಾವಿನ ಹಣ್ಣುಗಳನ್ನು ಅಡಿಗೆ ಹಾಕುವದರಲ್ಲಿ ಜಾಣತನವಿದೆ ಅದೇನೆಂದರೆ ಒಂದು ಹಣ್ಣಿಗೆ ಇನ್ನೊಂದು ಹಣ್ಣು ತಗಲಬಾರದು ಏಕೆಂದರೆ ಎರಡು ಹಣ್ಣುಗಳು ಒಂದೆಡೆಗೆ ಕೂಡಿದವೆಂದರೆ ಅವೆರಡೂ ಹತ್ತುತ್ತವೆ ಮತ್ತು ಹೀಗೆ ಹತ್ತಿದ ಹಣ್ಣುಗಳನ್ನು ಹಾಗಯೇ ಅಡಿಗೆ ಹಾಕಿದಲ್ಲಿ,ಅವುಗಳ ಸಂಗತಿಯಿಂದ ಅವುಗಳ ಜತೆಗೆ ಇದ್ದ ಇನ್ನುಳಿದಹಣ್ಣುಗಳೂ ಕೆಡುತ್ತವೆ ಆದರೆ ಅವುಗಳನ್ನು ಒಂದೊಂದೆ ಬೇರೆ ಬೇರೆಯಾಗಿ ಅಡಿಗೆ ಹಾಕಿದಲ್ಲಿ, ಅವು ಸಂಪೂರ್ಣ ಪಕ್ವವಾದದ್ದನ್ನು (ಅದರ ವಾಸನೆಯಿಂದ, ನಾಸಿಕವೇ ಹೇಳುವದು ಸಾಹಸದಿಂದ ಶತ್ರುವನ್ನು ಗದ್ದು, ಯುದ್ಧಭೂಮಿಯಲ್ಲಿ, ವಿಜಯ ಹೊಂದಿದ

ಬಾವುಟವನ್ನೇರಿಸಿದರೂ, ಎಲ್ಲಿಯವರೆಗೆ ಆಯುಧಸಹಿತ, ವೈರಿಯಲ್ಲಿಯ ಕವಚವನ್ನು ತಗೆಯುವದಿಲ್ಲವೋ, ಅಲ್ಲಿಯವರೆಗೆ ನಿಜವಾದ ವಿಶ್ರಾಂತಿಯು ಸಿಗುವದಿಲ್ಲ ಗರ್ಭಿಣಿ ಸ್ತ್ರೀಯು ಪ್ರಸೂತಳಾಗಿ, ಪುತ್ರ ಜನಿಸಿದನೆಂದು ಆನಂದ ಹೊಂದಿದರೂ, ಯಾವಾಗ್ಗೆ ಆ ಮಗುವನ್ನು ತೊಟ್ಟಿಲಲ್ಲಿಡುವರೋ, ಆವಾಗಲೇ ಅವಳು ಮಗುವಿನ ನಿಜಸುಖವನ್ನು ಅನುಭವಿಸುವಳು ಪುರುಷನ ಮರಣದ ನಂತರ, ಅವನ ದೇಹವು ಸುಟ್ಟುಹೋಗುತ್ತದೆ ಆದರೆ ಯಾವಾಗ್ಗೆ ವೈಲಿಗೆಯ ಶೇಷವು ಸಮಾಪ್ತವಾಗುವದೋ, ಆವಾಗಲೇ ಇತರರ ಶುದ್ಧಿಯಾಗುತ್ತದೆ ಅದರಂತೆ ಅಜ್ಞಾನವು ನಾಶಹೊಂದಿ ಉಳಿದ ಜ್ಞಾನಾಭಿಮಾನ ವನ್ನು ತ್ಯಜಿಸಿದಾಗಲೇ ಸ್ವಾನಂದದ ಆತ್ಮ ಸಮಾಧಾನವು ಲಭಿಸುತ್ತದೆ ಕಬ್ಬಿಣದ ಶೂಲಕ್ಕೇರಿಸಿದಲ್ಲಿ ನಿಜವಾಗಲೂ ಮರಣ ಬರುತ್ತದೆ ಆದರೆ ಅದೇ ಚಂದನದ ಶೂಲಕ್ಕೇರಿಸಿದಲ್ಲಿ ಮರಣ ಬಾರದೆ ಮತ್ತೆ ಬೇರೆ ಏನಾಗುವದು? ಅದರಂತೆಯೇ ಜ್ಞಾನ ಇಲ್ಲವೇ ಅಜ್ಞಾನ ಇವೆರಡರ ಅಭಿಮಾನವು ಬಾಧಕವೇ ಆಗಿರುತ್ತದೆ ಕಬ್ಬಿಣದ ಬೇಡಿ ಹಾಕಿದರೇನು, ಹುರುಪಿನಿಂದ ಚಿನ್ನದ ಬೇಡಿ ಹಾಕಿಕೊಂಡರೇನು, ನಡೆಯುವಾಗ ಕಾಲಿಗೆ ತೊಡಕು ಹಾಕಿ ಆಗುವ ಪೀಡೆಯು (ದುಃಖವು) ಆಗುತ್ತಲೇ ಇರುತ್ತದೆ 'ಬ್ರಹ್ಮಾಹಮಸ್ಮಿ' 'ಬ್ರಹ್ಮನೇ ನಾನು' ಎಂಬ ಅಭಿಮಾನವೇನೂ ಶುದ್ಧ ಬ್ರಹ್ಮನಲ್ಲ ವೆಂಬುದನ್ನು ಧ್ಯಾನದಲ್ಲಿಡು ಅಹಂಕಾರದಿಂದ ಅದು ಕಠಿಣವೇ ಆಗಿದೆ ಅದರ ಲಕ್ಷಣವನ್ನೂ ಹೇಳುತ್ತೇನೆ ಕೇಳು ಸಮುದ್ರದ ನೀರಿನಿಂದ ಉಪ್ಪು ಸಿದ್ಧವಾಗುತ್ತದೆ ಮತ್ತು ಅದು ನೀರಿನಲ್ಲಿ ಕರಗಿ ನೀರಾಗುತ್ತದೆ ಆದರೆ ಮುತ್ತು ಕೂಡ ನೀರಿನಿಂದ ತಯಾರಾಗುತ್ತದೆ ಆದರೆ ಅದು ಕಠಿಣವಾಗಿರುವದರಿಂದ ನೀರಿನಲ್ಲಿ ಕರಗುವದಿಲ್ಲ ಅದು ಮುಕ್ತತೆಯಿಂದ, ಮೌಲ್ಯವಾನವಾದರೂ ಹೆಂಗಸಿನ ತುಟಿಯ ಹತ್ತಿರ ಬಂಗಾರದ ತಂತಿಯಲ್ಲಿ ಪೋಣಿಸಿ ನೇತಾಡುತ್ತದೆ (ನತ್ತು) ಅದು ಮುಕ್ತವಾದರೂ ಮೂಗಿನ ಒಡವೆಯಾಯಿತು ಇಷ್ಟೊಂದು ಬಿಕ್ಕಟ್ಟಿನ ಪರಿಸ್ಥಿತಿಯನ್ನು ಅಭಿಮಾನವು ತಂದಿತು, ಅದರಂತೆಯೇ ಅಜ್ಞಾನದ ಅಭಿಮಾನವು ಕೂಡಲೆ ಇಲ್ಲದಂತಾಗುತ್ತದೆ ಆದರೆ ಜ್ಞಾನಾಭಿಮಾನವು ಬಹಳ ಕಠಿಣವಾಗಿರುತ್ತದೆ ಅದು ಮುಕ್ತತ್ವದಿಂದ ಬಂಧನ ಕ್ಕೊಳಗಾಗುತ್ತದೆ—

—ಮಣ್ಣಿನ ಕೊಡವು ಅಪಕ್ವ ಇರುವದರಿಂದ ಅದು ಕೂಡಲೇ ಸೋರುತ್ತದೆ ಮತ್ತು ಮಣ್ಣಿನಲ್ಲಿ ಅದರ ಮಣ್ಣು ಒಂದಾಗುತ್ತದೆ ಆದರೆ ಅದೇ ಸುಟ್ಟ ಮೇಲೆ ಕಠಿಣ ವಾಗುವದರಿಂದ ಅದನ್ನು ಬೇಕಾದಷ್ಟು ದಿನ ಮಣ್ಣಿನಲ್ಲಿಟ್ಟರೂ, ಅದರೊಡನೆ ಅದು ಒಂದಾಗುವದಿಲ್ಲ (ಮಣ್ಣಾಗುವದಿಲ್ಲ) ಅದರಂತೆ ಪ್ರಪಂಚವು ಅಜ್ಞಾನದಿಂದ ಬಲಾಢ್ಯ ವಾಗಿದೆ ಆದ್ದರಿಂದ ಜ್ಞಾನ ಮತ್ತು ಅಜ್ಞಾನದ ಅಭಿಮಾನವನ್ನು ಬಿಟ್ಟು, ಮುಳ್ಳಿನಿಂದ ಮುಳ್ಳನ್ನು ತಗೆದಂತೆ, ಅವೆರಡನ್ನೂ ಅಡ್ಡಹಾದಿಯಲ್ಲಿ ಎಸೆಯಬೇಕು ಕಾರಣವೇನೆಂದರೆ

ಜ್ಞಾನ ಮತ್ತು ಅಜ್ಞಾನವನ್ನೆರಡೂ ದಾರಿಯಲ್ಲಿ ಎನಿದರೆ, ಒಂದು ವೇಳೆ ಅವು ನಮ್ಮನ್ನೇ ತೊಂದರೆಗೀಡುಮಾಡಬಹುದೆಂದು, ಅವುಗಳನ್ನು ದೂರ ಚೆಲ್ಲಬೇಕು. ಇದೇ ನಿಜವಾದ ತ್ಯಾಗವಿರುವದು ಅಹಂಕಾರವೆಂಬುದೆಲ್ಲವೂ ಬಾಧಕವೇ ಇರುತ್ತದೆ ಆದಕಾರಣ, ಸ್ವಾಭಿಮಾನವೇ ಇಲ್ಲವೆ ದುಷ್ಟರಭಿಮಾನವೇ ಇರಲಿ, ಅವೆರಡನ್ನೂ ಜ್ಞಾನಿಗಳು ಸಂಪೂರ್ಣವಾಗಿ ತ್ಯಜಿಸುತ್ತಾರೆ ಉದ್ಧವಾ! ನಿನಗೆ ನನ್ನ ಭಕ್ತಿಯಿಂದಲೇ ನನ್ನ ಪದಪ್ರಾಪ್ತಿಯಾಗಿರುತ್ತದೆ ಅಂದಮೇಲೆ, ನಾನಾ ತರಹದ ಸಾಧನೆಗಳ ನ್ಯಾಯವನ್ನು ಮತ್ತು ಶಾಸ್ತ್ರಗಳ ವಿಚಾರವನ್ನು ಏಕೆ ಮಾಡುವಿ? ಸದ್ಭಕ್ತಿಯಿಂದ ನನ್ನ ಭಜನೆಯನ್ನು ಮಾಡಿರುವದರಿಂದಲೇ ನೀನು ಬ್ರಹ್ಮಸ್ವರೂಪನಾಗಿರುವಿ ಆದ್ದರಿಂದ ಇನ್ನು ಮೇಲೆ ಸದ್ವಿದ್ಯಾ ಮೊದಲಾದವುಗಳನ್ನು, ಶಾಸ್ತ್ರಶ್ರವಣದೊಂದಿಗೆ ಬಿಟ್ಟು ಬಿಡು 'ತಸ್ಮಾತ್ತ್ವಮುದ್ಧವ ಉತ್ಸೃಜ್ಯ' ಈ ಶ್ಲೋಕದಲ್ಲಿಯು ತ್ಯಾಗದ ಮುಖ್ಯ ಮರ್ಮವು ಇದೇ ಇರುವದು—

—ಈ ನನ್ನ ಅಂತಃಕರಣದಲ್ಲಿಯ ಗುಟ್ಟನ್ನು ನಾನು ನಿನಗೆ ಸ್ಪಷ್ಟವಾಗಿ ಹೇಳಿದೆನು ಶಿಷ್ಯನಿಗೆ, ಗುರುಭಜನೆಯ ಸಾಧನವೇ ಎಲ್ಲ ಸಾಧನಗಳಲ್ಲಿ ಶ್ರೇಷ್ಠ ಸಾಧನವಾಗಿದೆ ಉದ್ಧವಾ! ಅದರಿಂದಲೇ ಬ್ರಹ್ಮ ಸಮಾಧಾನವು ಉಂಟಾಗುತ್ತದೆ ಇದು ನಿಜವೆಂದು ತಿಳಿ, ಯಾವನು ಗುರುಚರಣಗಳನ್ನು ಭಕ್ತಿಭಾವನೆಯಿಂದ ಭಜಿಸುವನೋ, ಅವನು ಸಚ್ಚಿದಾನಂದ ಮಂದಿರದಲ್ಲಿ ವಾಸ ಮಾಡುತ್ತಾನೆ, ಈ ನನ್ನ ಭಾಷಣವು ನಿಜವಾಗಲೂ ಸತ್ಯವಿದೆ ಇದರ ವಿಷಯವಾಗಿ ಯಾರೂ ಸಂದೇಹ ಪಡಬಾರದು ಹೀಗೆ ನುಡಿದು ಶ್ರೀಕೃಷ್ಣನು ಪ್ರೀತಿಯಿಂದ ಮತ್ತು ಅತೀವ ಆನಂದದಿಂದ, ತನ್ನ ನಾಲ್ಕೂ ಕೈಗಳಿಂದ ಉದ್ಧವನನ್ನು ತಬ್ಬಿಕೊಂಡನು ಇಬ್ಬರ ಆಲಿಂಗನದಿಂದ ಎರಡೂ ಹೃದಯಗಳು ಏಕ ರೂಪವಾದವು ಅಲ್ಲಿಗೆ ಹೇಳುವ ಮತ್ತು ಕೇಳುವ ಭಾಷೆಯು ಇಲ್ಲದಂತಾಯಿತು ಮತ್ತು ಶಬ್ದಗಳೇ ಶಬ್ದಗಳನ್ನು ಪ್ರಾಶನ ಮಾಡಿದವು ನಾಲ್ಕೂ ವಾಣಿಗಳು ಮೌನ ತಾಳಿದವು ಜೀವವು ಜೀವತ್ವವನ್ನು ಮರೆಯಿತು ಮತ್ತು ಸದ್ಭಕ್ತರಿಗೆ ಸ್ವಾನಂದ ಘನನಾದಂತಹ ಏಕನಾಥರೂಪಿ ಜನಾರ್ದನನೂ ಸಂತುಷ್ಟನಾದನು ಭಕ್ತರಿಗ ಅವರ ಭಕ್ತಿಯಿಂದಲೇ ಶ್ರೀಕೃಷ್ಣನು ಒಲಿಯುತ್ತಾನೆ ಆತ್ಮಪ್ರಾಪ್ತಿಗೆ ಮುಖ್ಯ ಭಾವಾರ್ಥವೇ ಕಾರಣವಾಗಿರುತ್ತದೆ ಭಾವಾರ್ಥವಿಲ್ಲದ ಸಾಧನಯು ಕೇವಲ ಕಷ್ಟವೇ ಆಗಿರುತ್ತದೆಯೆಂದು ತಿಳಿ ಜಪ, ತಪ, ಯಜ್ಞ, ಇಲ್ಲವ ದಾನವನ್ನು ಭಾವಾರ್ಥಕ್ಕಾಗಿಯೇ ಮಾಡುವದಿರುತ್ತದೆ ಯಾವನು ಭಾವಾರ್ಥಿಯಿರುವನೋ ಅವನ ಜನ್ಮವು ಧನ್ಯ ಧನ್ಯವಾಗಿದೆ ನರದೇಹದಲ್ಲಿ ಜನಿಸಿದ್ದು ಧನ್ಯವಿರುವದು ಸಾಧುವಿನ ಸಹವಾಸವೂ ಧನ್ಯವಾಗಿರುವದು

## ಪ್ರಕರಣ ೨೬

ಗುಣವೃದ್ಧಿಯ ಕಾರಣ ಆಗಮ ಅಂದರೆ ಶಾಸ್ತ್ರವೆಂಬುದನ್ನು ಲಕ್ಷ್ಯದಲ್ಲಿಡು ಆಪವೆಂದರೆ ನೀರು ಇಚ್ಛಿಸುವ ಸ್ಥಾನವೆಂದರೆ ದೇಶ ಇನ್ನು ಪ್ರಜೆಯ ಲಕ್ಷಣವನ್ನು ಕೇಳು ಪ್ರಜಾ ಎಂದರೆ ಮೂರು ತರಹದ ಜನರು ಯಾರ ಸಂಗಡ ಅವರ ಸಹ ವಾಸವು ಹೇಗೆ ಇರುತ್ತದೆಯೋ ಹಾಗೆಯೇ ಅವರಿಗೆ ಗುಣಗಳು ಪ್ರಾಪ್ತವಾಗುತ್ತವೆ ಕಾಲವೆಂದರೆ ದಿವಸದ ವಿಭಾಗ ಕರ್ಮವೆಂದರೆ ಶರೀರದ ಚಲನವಲನೆಗಳು ಜನ್ಮವೆಂದರೆ ಉತ್ತಮವಾದ ದೀಕ್ಷ (ದೀಕ್ಷಯಂತೆ ಇಷ್ಟದೇವತೆಯ ಧ್ಯಾನ) ತಮ್ಮ ಇಚ್ಛೆಯಂತೆ ಮಂತ್ರದ ಲಕ್ಷಣವು ಕರ್ಮದಲ್ಲಿ ಕರ್ತನ ಆದರವು ಏತರಲ್ಲಿ ಇರುವದೋ, ಅದಕ್ಕೆ ಸಂಸ್ಕಾರವೆನ್ನುತ್ತಾರೆ ಇವು ಹತ್ತು ಲಕ್ಷಣಗಳ ಪ್ರಕಾರವಾಗಿರುತ್ತವೆ ಇನ್ನು ಮೇಲೆ ಗುಣವೃದ್ಧಿಯ ವಿಚಾರವನ್ನು ಕೇಳು ಸದ್ಯಕ್ಕೆ ಇಲ್ಲಿ ಸತ್ವವೃದ್ಧಿಯೇ ಸಾಧಕರಿಗೆ ನಿವೃತ್ತಿಶಾಸ್ತ್ರ (ವೇದಾಂತಶಾಸ್ತ್ರ)ವು ಮುಖ್ಯವಾಗಿದೆ ಉಪನಿಷದ್ಭಾಗ ಸಹಿತವಾಗಿ ವೇದಾಂತದ ಮತಿತಾರ್ಥವನ್ನು ಸೇವಿಸಬೇಕು ನೀರಿನ ಪಾವಿತ್ರತೆಯು ಹೇಗಿರುತ್ತದೆಂಬುದನ್ನು ಕೇಳು ಗೋದಾವರೀ ಭಾಗಿರಥೀ ಮುಂತಾದ ನದಿಗಳ ನೀರಿನ ಒಂದು ಹನಿ ಮೈಮೇಲೆ ಸಿಡಿದರೂ, ಎಲ್ಲ ಪಾತಕದ ನಾಶವಾಗುತ್ತದೆ ಇಲ್ಲವೇ ಬ್ರಹ್ಮಾದಿಕ ದೇವತೆಗಳೂ ಕೂಡ ಸೇವಿಸಲು ಉತ್ಸುಕರಾದಂತಹ, ನನ್ನ ಪ್ರತಿಮೆಯ ಚರಣ ತೀರ್ಥ ಅಥವಾ ಸಾಲಿಗ್ರಾಮದ ತೀರ್ಥಗಳಿಂದಲೂ, ಎಲ್ಲ ಪಾಪ ನಿಷ್ಕೃತಿಯಾ ಗುತ್ತದೆ, ಶ್ರೀ ಮನ್ನಾರಾಯಣನು ತನ್ನ ವಕ್ಷಸ್ಥಲದ ಮೇಲೆ ಧರಿಸಿದ ಬ್ರಾಹ್ಮಣರ ಚರಣ ತೀರ್ಥದಿಂದ ಎಲ್ಲ ತೀರ್ಥಗಳು ಪವಿತ್ರವಾಗುತ್ತವೆ ನೀರು ಎಂತಹದಿದ್ದರೇನು? ಯಾವ ನೀರು ಸದ್ಗುರುವಿನ ಚರಣವನ್ನು ಸ್ಪರ್ಶಿಸಿರುವದೋ, ಆ ನೀರು, (ತೀರ್ಥ) ಎಲ್ಲ ತೀರ್ಥಗಳಿಗಿಂತಲೂ ಶ್ರೇಷ್ಠವಿರುವದು, ಗುರುಚರಣ ತೀರ್ಥವನ್ನು ಸೇವಿಸಿದಲ್ಲಿ ಕೂಡಲೆ ಅದು ಉದ್ಧಾರ ಮಾಡುವದು ನೀರಿನಿಂದ ಸತ್ವವೃದ್ಧಿಯಾಗುತ್ತದೆ ಅದು ಈ ತೀರ್ಥದಿಂದ ಪರಮಪಾವನವಾಗುತ್ತದೆ ಮತ್ತು ಅದನ್ನು ಸೇವಿಸಿದಲ್ಲಿ, ಸತ್ವವೃದ್ಧಿಯ ಸ್ವರೂಪವು ತಾನಾಗಿಯೇ ಪ್ರಕಟವಾಗುತ್ತದೆ—

—ಪ್ರಜಾ ಎಂದರೆ ಶ್ರೇಷ್ಠ ಜನರು ಸಾಧು ಮತ್ತು ಸಜ್ಜನರ ಸೇವೆಯನ್ನು ಮಾಡಬೇಕು ಏಕೆಂದರೆ ಅವರ ಸಹವಾಸದಿಂದ ಜಡಮೂಢರ ಉದ್ಧಾರವಾಗುತ್ತದೆ ಸತ್ಸಂಗತಿಯೇ ಪ್ರಾಮುಖ್ಯವಾಗಿ ಸತ್ವವೃದ್ಧಿಯ ಕಾರಣವಾಗಿದೆಯೆಂದು ತಿಳಿಯಬೇಕು ಇನ್ನು ದೇಶವೆಂದರೆ ನೈಮಿಷಾರಣ್ಯಾದಿ ಪುಣ್ಯಭೂಮಿ ಇಲ್ಲವೆ ಸತ್ಪುರುಷರು ಸಿದ್ಧಿ ಪ್ರಾಪ್ತಿಗಾಗಿ ವಿನಿಯೋಗಿಸಿದ ಸಿದ್ಧಿಸ್ಥಾನವಾಗಿರುತ್ತದೆ ಆ ಸ್ಥಾನಗಳು, ನಿರ್ಜನ,

ಏಕಾಂತವಾಸ ಮಾಡಲು ಯೋಗ್ಯ ಮತ್ತು ಅಲ್ಲಿ ಕುಳಿತಲ್ಲಿ, ಕೂಡಲೆ ಸತ್ವಕ್ಕೆ ಹೆಚ್ಚಿಗೆ ಬಲವು ಬೆಳೆಯುವಂತಹದು ಇರಬೇಕು ಏಕಾಂತದಲ್ಲಿ ಆಸನವು ಸ್ಥಿರವಾದ ನಂತರ ಮತ್ತು ಚಿದ್ರೂಪ ಪರಬ್ರಹ್ಮನ ಪ್ರಾಪ್ತಿಯ ಇಚ್ಛೆಯು ಉಂಟಾಯಿತೆಂದರೆ ಸತ್ವಗುಣದ ವೃದ್ಧಿಯು ತಾನಾಗಿಯೇ ಆಗುತ್ತದೆ ಹಾಗೆಯೇ ಸಾಧಕನಿಗೆ ಯೋಗ್ಯ ಕಾಲ ಯಾವುದೆಂದರೆ ಬ್ರಾಹ್ಮ ಮುಹೂರ್ತವು (ರಾತ್ರಿಯ ಹದಿನಾಲ್ಕನೆಯ ಮುಹೂರ್ತದ ವೇಳೆ) ನಸುಕು ಇದೇ ಕಾಲವು ಸಂಪೂರ್ಣವಾಗಿ ಯೋಗ್ಯವಾಗಿರುತ್ತದೆ ಅಥವಾ ಯಾವ ಕಾಲದಲ್ಲಿ ಮನಸ್ಸು ಉದ್ವೇಗರಹಿತವಿದ್ದು ಪ್ರಫುಲ್ಲಿತವಾಗಿರುತ್ತದೆಯೋ ಆ ಕಾಲವೂ ಯೋಗ್ಯವಾಗಿರುತ್ತದೆ ಪ್ರೀತಿಯುಕ್ತ ಅಂತಃಕರಣದಿಂದ ಕೇಳುವವರಲ್ಲಿ ಯಾವ ವೇಳೆಯ ಖರ್ಚಾಗುವದೋ ಇಲ್ಲವ ಜಯಂತ್ಯಾದಿ ಮಹೋತ್ಸವಗಳನ್ನು ಮಾಡುವದು, ಏಕಾದಶಿಗೆ ಜಾಗರಣೆಯನ್ನು ಮಾಡುವದರಲ್ಲಿ ಯಾವ ವೇಳೆಯು ವ್ಯತಿತವಾಗುವದೋ, ಅದೇ ವೇಳೆಯ ಉತ್ಕೃಷ್ಟ ಸಾರ್ಥಕತೆಯಿರುವದು ಹರಿಕೀರ್ತನೆಯಲ್ಲ ಹಾಡುವಾಗ ಮತ್ತು ಕುಣಿಯುವಾಗ ಯಾವ ವೇಳೆಯು ಹೋಗುವದೋ, ಆ ಕಾಲದ ಮಹತ್ವವನ್ನೂ ನನಗೂ ಕೂಡ ಸಂಪೂರ್ಣವಾಗಿ ಹೇಳಲಕ್ಕಾಗುವದಿಲ್ಲ ಯಾವನು ಅಭಿಮಾನವಿಲ್ಲದೆಯೇ ಲೋಭವಿಲ್ಲದೆಯೇ, ಕೀರ್ತನೆ ಮಾಡುವದರಲ್ಲಿ, ಗಾಯನ ಮತ್ತು ಕುಣಿಯುವದರಲ್ಲಿ ವೇಳೆಯನ್ನು ಕಳೆಯುವನೋ, ಆ ಕಾಲಕ್ಕೆ ಶ್ರೀಕೃಷ್ಣನಾದ ನಾನು ತಲೆಬಾಗಿ (ಶಿರಸಾ) ವಂದಿಸುತ್ತೇನೆ ಅದರ ಮಹತ್ವವನ್ನು ಯಾರು ವರ್ಣಿಸಬೇಕು? ಯಾವ ಕ್ರಿಯೆಯು ಫಲೇಚ್ಛಾದಿರಹಿತ ಮತ್ತು ನಿಷ್ಕಾಮವಿರುವದೋ, ಅದಕ್ಕೇ ಕರ್ಮವೆನ್ನಬೇಕು ಪರೋಪಕಾರಾರ್ಥ ಮಾಡುವ ಕ್ರಿಯೆಯೇ ನಿಜವಾಗಲೂ ಸಾತ್ವಿಕ ಕರ್ಮವಾಗಿರುತ್ತದೆ—

—ಗುರುವಿನಿಂದ ದೀಕ್ಷೆಯನ್ನು ತೆಗೆದುಕೊಳ್ಳುವದಿದೊಂದು ಪುರುಷನ ನೂತನ ಜನ್ಮವೇ ಆಗಿರುತ್ತದೆ ಇದು ಲಕ್ಷ್ಯದಲ್ಲಿರಲಿ ಉದ್ಧವಾ! ಗುರುವೇ ಎಲ್ಲ ರೀತಿಯಿಂದಲೂ ತಾಯಿ ತಂದೆಯಾಗಿರುವನು ಅದರ ಲಕ್ಷಣವನ್ನೂ ಕೇಳು ನಿಜವಾಗಲೂ, ಜನಿಸಿದ ಮಗುವಿಗೂ ಕೂಡ ಐದು ಪ್ರಕಾರದ ತಂದೆಗಳು ಇರುತ್ತಾರೆ ಒಬ್ಬನು ಜನ್ಮಕೊಡುವವನು, ಎರಡನೆಯವನು, ಉಪನಯನ ಮಾಡುವವನು ಮತ್ತು ಮೂರನೆಯವನು ಅನ್ನ ಹಾಕಿ ಪೋಷಿಸುವವನು ಇರುತ್ತಾನೆ ಯಾವನು, ಭಯವನ್ನು ನಿವಾರಿಸುವನೋ ಯಾವನು ಬಂಧನದಿಂದ ಮುಕ್ತ ಮಾಡುವನೋ ಮತ್ತು ಯಾವನು ಮರಣವನ್ನು ತಪ್ಪಿಸುವನೋ, ಅವನೂ ಶಾಸ್ತ್ರಾಧಾರದಿಂದ ತಂದೆಯೇ ಇರುವನು ಇದಲ್ಲದೆ ಐದನೆಯ ತಂದೆಯೂ ಒಬ್ಬನು ಇರುವನು ಅವನು ಪಂಚಮಹಾಭೂತಗಳ ನಿರಸನೆಯನ್ನು ಮಾಡುತ್ತಾನ ಮೃತ್ಯುವಿನ ದವಡೆಯಿಂದ ಬಿಡಿಸುತ್ತಾನೆ. ಗರ್ಭವಾಸದ ದುಃಖವನ್ನು ಪರಿಹರಿಸುತ್ತಾನೆ ಮತ್ತು ಯಾವನ ಚರಣಗಳನ್ನು ಕಂಗಳಿಂದ ನೋಡಿದಲ್ಲಿ ಸಂಸಾರಬಂಧನದ ದುಃಖವು ಆಗುವದಿಲ್ಲವೋ, ಅವನೇ ಸದ್ಗುರು, ಎಂದರೆ, ಐದನೆಯ

ತಂದೆಯಾಗಿರುವನು ಭಾಗ್ಯವಂತರಿಗೇ ಅವನ ಭೆಟ್ಟಿಯಾಗುತ್ತದೆ ಜನಿಸಿದ ಬಾಲಕನಿಗೆ ತಾಯಿ-ತಂದೆಗಳು ಬೇರೆ ಬೇರೆಯಾಗಿರುತ್ತಾರೆ ತಂದೆಯ ವೀರ್ಯದಿಂದ, ಗರ್ಭಧಾರಣೆ ಮಾಡಿ ಅದರ ಪಾಲನ ಪೋಷಣ ಮಾಡುವ ಕೆಲಸವು ತಾಯಿಯದು ಇರುತ್ತದೆ ಸದ್ಗುರುವೇನೂ ಅಂತಹ ತಂದೆ ಇರುವದಿಲ್ಲ ಅವನು ತನ್ನ ವೀರ್ಯಸ್ಖಲನ ಮಾಡದೇ, ಯೋನಿದ್ವಾರದಿಂದ ಜನ್ಮ ನೀಡದೆ, ತಾಯಿ ಮತ್ತು ತಂದೆಯಾಗಿರುವನು ಮಗುವಿನ ಜನ್ಮವಾದ ನಂತರ ಮಾತೆಗೆ ಪುತ್ರಸ್ನೇಹದ ತಳಮಳ ಉಂಟಾಗುತ್ತದೆ ಆದರೆ ಹೊರಗಿನದೆಲ್ಲವನ್ನೂ ತನ್ನಲ್ಲಿ ಬಚ್ಚಿಟ್ಟ ಗುರುಮಾತೆಯು ಅವನನ್ನು ಬೆಳೆಸುತ್ತಾಳೆ ಆದ್ದರಿಂದಲೇ, ಗುರುವೇ ಶಿಷ್ಯನಿಗೆ, ನಿಜವಾಗಿಯೂ ತಾಯಿ-ತಂದೆಯಾಗಿರುವನು ಅವನೇ ಮಮತೆಯಿಂದ ಅವನನ್ನು ಬೆಳೆಯಿಸುತ್ತಾನೆ ಮತ್ತು ಅಭಿನ್ನ ಭಾವನೆಯಿಂದ ಗುರುಶಿಷ್ಯರ ತಾದಾತ್ಮ್ಯವಾಗುತ್ತದೆ ಹಿಂದಕ್ಕೆ ಹೇಳಿದ ನಾಲ್ಕು ಜನ ತಂದೆಯರು, ಇವನ ಮಲ-ತಂದೆಯರೆಂದು ತಿಳಿಯಬೇಕು ತಾಯಿ ಮತ್ತು ತಂದೆ ಇಬ್ಬರೂ ಬೇರೆ ಬೇರೆಯಾಗಿರುವದರಿಂದ, ಅವರಿಗೆ ನಿಜತ್ವವು ಎಂತಹದು? ಆದ್ದರಿಂದ ಪಯೆಯುಳ್ಳವನೇ, ಸತ್-ಶಿಷ್ಯನ ನಿಜವಾದ ತಂದೆಯಾಗಿರುವನು ಆದಕಾರಣ ಆ ತಂದೆ-ಮಕ್ಕಳಲ್ಲಿ ಸ್ವಲ್ಪು ಕೂಡ ವಿಕಲ್ಪ ಉತ್ಪನ್ನವಾಗುವದಿಲ್ಲ ಆ ಸದ್ಗುರುವಿನಿಂದ ಶೈವೀ ಇಲ್ಲವೆ ವೈಷ್ಣವೀ ದೀಕ್ಷಯು ಪ್ರಾಪ್ತವಾಗುತ್ತದೆ ಅಥವಾ ಅವನು ಚೈತನ್ಯಘನನಾದ ನಿರ್ಗುಣ ಆತ್ಮಬೋಧವನ್ನು ಉಪದೇಶಿಸುತ್ತಾನೆ ಈಗ ದೀಕ್ಷಯ ಲಕ್ಷಣವನ್ನೂ ಕೇಳು ದೀಕ್ಷಯು ನಾಲ್ಕೂ ಪುರುಷಾರ್ಥಗಳನ್ನೂ ಮತ್ತು ನಾಲ್ಕೂ ಮುಕ್ತಿಗಳನ್ನು ಕೊಡುತ್ತದೆ ಹಾಗೂ ಅವಿದ್ಯೆಯನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡುತ್ತದೆ ಈ ಪ್ರಕಾರವಾಗಿ ಉದ್ಧವಾ! ದೀಕ್ಷಾರೂಪ ಜನ್ಮದ ಕಥೆಯನ್ನು ನಾನು ನಿನಗ ಯಥೋ-ಚಿತವಾಗಿ ಹೇಳಿದೆನು ಇನ್ನು ಧ್ಯಾನನಿಷ್ಠ ಸತ್ವಗುಣದ ಲಕ್ಷಣವನ್ನು ಹೇಳುವೆನು ಕೇಳು ನಿಜವಾಗಲೂ ಯಾವನಶರೀರವು ಸತ್ವೋಪಾಧಿಕವಿರುವದೋ ಮತ್ತು ಯಾವನ ಸ್ವರೂಪವು ಚೈತನ್ಯಘನವಾಗಿರುವದೋ,ಆ ಶ್ರೀವಿಷ್ಣುವೇ ಸಾತ್ವಿಕ ಜನರ ಧ್ಯೇಯವಾಗಿರುತ್ತಾನೆ ಅವನ ಧ್ಯಾನವನ್ನು ಮಾಡಬೇಕು ಅಥವಾ ಆಕಳ ಹಾಲಿನಂತೆ ಶುಭ್ರವಾಗಿರುವ ಇಲ್ಲವೆ ಕರ್ಪೂರದಂತೆ ಬಿಳಿಯ ಬಣ್ಣವು ಯಾವನದಿರುವದೋ, ಅಂತಹ ಐದು ಮುಖವುಳ್ಳ ಶ್ರೀ ಶಂಕರನನ್ನು, ಸಂಸಾರ ಸಮುದ್ರವನ್ನು ದಾಟಿ ಹೋಗುವದಕ್ಕಾಗಿ, ಧ್ಯಾನಿಸಬೇಕು ಈ ಮೂರ್ತಿಗಳ ಧ್ಯಾನ ಮಾಡಿದಲ್ಲಿ, ಧ್ಯೇಯ ಧ್ಯಾನ ಮತ್ತು ಧ್ಯಾತಾ ಇವೆಲ್ಲವೂ ಇಲ್ಲದಂತಾಗುತ್ತದೆ ಮತ್ತು ಅಂತಃಕರಣದಲ್ಲಿ ಜ್ಞಾನ ಸ್ವರೂಪವು ಬಿಂಬಿಸುತ್ತದೆ ಇದೇ ಸತ್ವಗುಣದ ಧ್ಯಾನವಿರುತ್ತದೆ ಹೇಗೆ ದೀಕ್ಷೆಯು ಇರುತ್ತದೆಯೋ ಹಾಗೆಯೇ ಧ್ಯಾನವಿರುತ್ತದೆಯೆಂಬುದು ಆಗಮಶಾಸ್ತ್ರದಲ್ಲಿಯ ಸಿದ್ಧಾಂತವಾಗಿರುತ್ತದೆ ಮತ್ತು ಜ್ಞಾನ ಸ್ವರೂಪವಾಗುವದೇ ಆ ಧ್ಯಾನದ ಪರಿಣಾಮವಾಗಿರುವದು—

—ಕೇವಲ ಜ್ಞಾನದ ಭಾಂಡಾರವೇ ಸದ್ಗುರುವಿನ ಸ್ವರೂಪವಾಗಿರುವದು ಅದರದೇ ಸದೈವ ಆತ್ಮನಿಷ್ಠೆಯಿಂದ ಅನುಸಂಧಾನನನ್ನಿಟ್ಟು ಧ್ಯಾನ ಮಾಡಬೇಕು ಪಂಚಮಹಾಭೂತದಿಂದ ಉತ್ಪನ್ನವಾದ ದೇಹದಲ್ಲಿ ಅಚ್ಚಿನಲ್ಲಿ ಅದು ಬ್ರಹ್ಮರೂಪ ರಸದಿಂದ ತುಂಬಿತೆಂದರೆ ಸುಂದರವಾದ ಗುರುಸ್ವರೂಪವು ತಯಾರಾಗುತ್ತದೆ ಅದಕ್ಕೋಸ್ಕರ ಹಗಲಿರುಳೂ ಅದರದೇ ಧ್ಯಾನ ಮಾಡಬೇಕು ಉದ್ಧವಾ! ಸಾತ್ವಿಕ ಜನರ ಧ್ಯಾನವು ಹೀಗೆಯೇ ಇರುವದು ಇನ್ನು ಮಂತ್ರದ ಮಂತ್ರಗ್ರಹಣವು ಹೇಗಿರುತ್ತದೆಂಬುದನ್ನು ಕೇಳು ಎಲ್ಲ ಮಂತ್ರಗಳ ಜನನಿ, ಯಾವಳಿಂದ ಬ್ರಾಹ್ಮಣರಿಗೆ ಬ್ರಾಹ್ಮಣತ್ವವು (ದ್ವಿಜನ್ಮತ್ವ) ಬರುತ್ತದೆಯೋ, ಆ ಗಾಯತ್ರೀ ಮಂತ್ರದ ಗ್ರಹಣ ಮಾಡಿದಲ್ಲ, ಬ್ರಾಹ್ಮಣರಿಗ ದ್ವಿಜನ ಅಧಿಕಾರವು ಲಭಿಸುತ್ತದೆ ಎಲ್ಲ ಮಂತ್ರಗಳಲ್ಲಿ ಶ್ರೇಷ್ಠವಾದ ಗಾಯತ್ರೀ ಮಂತ್ರವು ಬ್ರಾಹ್ಮಣರ ಪಾಲಿಗ ಬಂದಿರುತ್ತದೆ ಆ ಮಂತ್ರದ ಭಯದಿಂದ, ಶ್ರೀಕೃಷ್ಣನಾದವನಿಗೂ ಕೂಡ ಬ್ರಾಹ್ಮಣರ ಪೂಜೆ ಮಾಡಬೇಕಾಗುತ್ತದೆ ಆ ಗಾಯತ್ರಿಯು ಸಹಜವಾಗಿ ಬ್ರಾಹ್ಮಣರಿಗೆ ಲಭಿಸಿದ್ದಾಳೆ ಅವಳನ್ನು ಲೋಭದಿಂದ ಅಲ್ಲಗಳೆದುದರಿಂದ ಬ್ರಾಹ್ಮಣರಿಗೆ ದಾರಿದ್ರ್ಯ ಉಂಟಾಗಿದೆ ಗಾಯತ್ರಿ ಮಂತ್ರದಲ್ಲಿ ನಿಷ್ಠೆಯಿಡುವ ಬ್ರಾಹ್ಮಣನನ್ನು ನಾನು ತಲೆಬಾಗಿ ನಮಸ್ಕರಿಸುವೆನು—

—ಮಂತ್ರಗಳಲ್ಲಿ ಗಾಯತ್ರಿ ಮಂತ್ರವು ಶ್ರೇಷ್ಠವಾಗಿರುವದು ಇದಕ್ಕೆ ವೇದಗಳು ಪ್ರಮಾಣಪರುತ್ತವ (ಸಾಕ್ಷಿಯಾಗಿರುತ್ತವೆ) ಗಾಯತ್ರಿ ಮಂತ್ರದ ಪ್ರವೇಶದ ಮುನ್ನ ಇತರ ಮಂತ್ರಗಳಿಗೆ ವೇದದಲ್ಲಿ ಪ್ರವೇಶಿಸಲು ಅವಕಾಶವೇ ಇರಲಿಲ್ಲ ಮುಖ್ಯವಾಗಿ ಗಾಯತ್ರೀ ಮಂತ್ರದಲ್ಲಿಯೇ ಎಲ್ಲ ಮಂತ್ರಗಳ ಸಮಾವೇಶವಾಗುತ್ತದೆ ಗಾಯತ್ರಿ ಮಂತ್ರದ ಸಂಬಂಧವಿಲ್ಲದಿದ್ದರೆ, ವೇದಗಳು ಬ್ರಾಹ್ಮಣರಿಗೆ ಮುಖೋದ್ಗತವಾಗುತ್ತಿದ್ದಿಲ್ಲ ಅಂದ ಮೇಲೆ ಇನ್ನುಳಿದ ಮಂತ್ರಗಳ ಗತಿ ಏನು? ತಾತ್ಪರ್ಯವೇನಂದರೆ, ವೇದಗಳಿಗೆ ಗಾಯತ್ರಿಯು ವಂದ್ಯಳಾಗಿರುವಳು ಗಾಯತ್ರೀ ಮಂತ್ರದಲ್ಲಿಯ ಗುಪ್ತ ರಹಸ್ಯವೆಂದರೆ ಜ್ಞಾನಸ್ವರೂಪ ಪರಬ್ರಹ್ಮನೊಬ್ಬನೇ ಸರಿ ಆ ಮಂತ್ರವು ಬ್ರಾಹ್ಮಣರಿಗೆ ಮಾತ್ರ ಸುಲಭವಾಗಿದೆ ಆದರೆ ಅವರು ಕೂಡ ಅದರಲ್ಲಿಯ ಮರ್ಮವನ್ನು ತಪ್ಪಿದರು

ಈ ಪ್ರಕಾರವಾಗಿ ಗಾಯತ್ರಿ ಮಂತ್ರವು ಪೂರ್ಣಬ್ರಹ್ಮಸ್ವರೂಪವಾಗಿರುವದು ಮತ್ತು ಎಲ್ಲ ಸಿದ್ಧಿಗಳಿಗೆ ಕಾರಣವಾಗಿರುವದು ಶೈವೀ ಮತ್ತು ವೈಷ್ಣವೀ ದೀಕ್ಷೆಯನ್ನು ತೆಗೆದುಕೊಂಡರೂ ಕೂಡ ಗಾಯತ್ರೀ ಮಂತ್ರದಿಂದಲೇ, ಕೂಡಲೇ ಸತ್ವ ಶುದ್ಧಿಯಾಗುವದು ಸತ್ವ ಶುದ್ಧಿಯಾಯಿತೆಂದರೆ, ಕೋಟ್ಯಾನುಕೋಟಿ ಶೈವ ಮಂತ್ರ ಇಲ್ಲವೇ ವೈಷ್ಣವ ಮಂತ್ರಗಳು ಪ್ರಾಪ್ತವಾಗುತ್ತವೆ ಮತ್ತು ಆ ಸತ್ವಶುದ್ಧಿಯಿಂದಲೇ ಸಾಧಕರಿಗ ಕೂಡಲೇ ಆತ್ಮದೃಷ್ಟಿಯು ಲಭಿಸುತ್ತದೆ ಉದ್ಧವಾ!

ಮಂತ್ರಗ್ರಹಣ ಮಾಡುವ ನಿಜವಾದ ವಿಚಾರವು ಹೀಗಿರುವದೆಂಬುದನ್ನು ನೀನು ಚೆನ್ನಾಗಿ ಲಕ್ಷ್ಯದಲ್ಲಿಡು ಇನ್ನು ಸಂಸ್ಕಾರವು ಹೇಗಿರುತ್ತದೆಂಬುದರ ರೀತಿಯನ್ನು ಕೇಳು ಮನಸ್ಸಿನಲ್ಲಿ ಸಂಕಲ್ಪ ವಿಕಲ್ಪಗಳನ್ನು ಹೊಡೆದು ಹಾಕುವ ಉತ್ಕಟ ಇಚ್ಛೆಯಿಂದ ಯಾವನು ಬಹಳ ಪ್ರಯಾಸದಿಂದ ಪ್ರಯತ್ನ ಮಾಡುವನೋ, ಅವನಿಗೆ ಮೊಟ್ಟ ಮೊದಲು ಸಂಕಲ್ಪವೇ ಉತ್ಪನ್ನವಾಗುವದಿಲ್ಲ ಮತ್ತು ಒಂದು ವೇಳೆ ಉತ್ಪನ್ನವಾದರೂ ಕೂಡ, ಅವನು ಅದನ್ನು ಅಲ್ಲಿಯೇ ಬಗ್ಗುಬಡಿಯುತ್ತಾನೆ ಅವನು ಯಾವಾಗಲೂ ವಿಚಾರಿಯಾಗಿರುವದರಿಂದ, ಸ್ವಚ್ಛ ಮನಸಿನವನಿರುತ್ತಾನೆ ಪರಮಾತ್ಮನಿಷ್ಠೆಯಿಂದ ಅವನು ಯಾವಾಗಲೂ ಮನಸ್ಸಿಗೆ ಮೇಲೇಳಲು ಕೊಡುವ ದಿಲ್ಲ ಮತ್ತು ಅದರ ವ್ಯತಿರಿಕ್ತ ಒಂದರ್ಧ ಕ್ಷಣ ಕೂಡ ಮನಸ್ಸನ್ನು ನೈಲು ಬಿಡುವ ದಿಲ್ಲ ಅತಿಶಯ ಕುಶಲತೆಯಿಂದ ಅನನು ಮನಸ್ಸನ್ನು ಹರಿಸ್ಮರಣದಲ್ಲಿ ತೊಡಕಿಸು ತ್ತಾನ ಅವನು ವೈರಾಗ್ಯದ ಬಲದಿಂದ ಮನಸ್ಸಿನ ದಮನ ಮಾಡುತ್ತಾನೆ ಮತ್ತು ಅದರ ಭಯದಿಂದಲೇ ಹರಿಚಿಂತನೆಯನ್ನು ಮಾಡುತ್ತಾನೆ ಒಡೆಯನ ಆಜ್ಞೆಯನ್ನು ದಾಸಿಯು ಹೇಗೆ ಮೀರುವದಿಲ್ಲವೋ, ಹಾಗಯೇ ಅವನ ಮನಸ್ಸು ಈಶ್ವರ ನಾಮಸ್ಮರಣದ ದಾಸ್ಯತ್ವವನ್ನು ಅಂಗೀಕಾರ ಮಾಡುತ್ತದೆ ಇಂದ್ರಿಯಗಳು ನಾನಾ ತರಹದ ಪದಾರ್ಥಗಳನ್ನು ನೋಡುತ್ತಲಿರುತ್ತವ ಆದರೆ ಮನಸ್ಸು ಮಾತ್ರ ಬೇರೆ ಯಾವ ವಿಷಯಗಳನ್ನೂ ನೋಡುವದಿಲ್ಲ ಅದು ಜಾಗೃತಿಯಲ್ಲಿ ಮತ್ತು ಸ್ವಪ್ನ ದಲ್ಲಿಯೂ ಕೂಡ ಸ್ವಾಭಾವಿಕವಾಗಿ ಹರಿಯ ಸ್ಮರಣೆಯನ್ನೇ ಮಾಡುತ್ತದೆ ಇಂತಹ ಸಂಸ್ಕಾರದಿಂದ ಮನಸ್ಸು ಸುಸಂಸ್ಕೃತವಾಯಿತೆಂದರೆ ಅದು ಪ್ರತಿನಿಮಿಷವೂ ಹರಿಚಿಂತನೆಯನ್ನೇ ಮಾಡಲು ಪ್ರಾರಂಭಿಸುತ್ತದೆ ಶ್ವಾಸ ಮತ್ತು ಉಚ್ಛ್ವಾಸ ದಲ್ಲಿಯೂ ಕೂಡ 'ಪರಬ್ರಹ್ಮನು ನಾನ' ಎಂಬ ಧ್ಯಾನವಿರುತ್ತದೆ ಸ್ವಾಭಾವಿಕ ವಾಗಿ ಭಗವಂತನ ನಾಮಸ್ಮರಣದ ಆದರವಿರುವದಕ್ಕೇನೇ ಆತ್ಮಸಂಸ್ಕಾರವೆಂದು ಅನ್ನುತ್ತಾರೆ ಹೀಗೆ ಸತ್ವವೃದ್ಧಿಯ ರೀತಿಯನ್ನು ಶ್ರೀ ಕೃಷ್ಣನು ಹೇಳಿದನು ಆತ್ಮ ಶುದ್ಧಿಗೆ ಕಾರಣವಾದ ಈ ಹತ್ತು ಲಕ್ಷಣಗಳನ್ನು ನಾನು ನಿನಗೆ ಹೇಳಿದೆನು ಅದರಂತೆ ಸಾಧಕ ಜನರೂ ಅದನ್ನು ಆಚರಿಸಬೇಕೆಂದು ಚೆನ್ನಾಗಿ ನಾನು ಸ್ಪಷ್ಟೀ ಕರಿಸಿದೆನು

## ಪ್ರಕರಣ ೨೭

ಮಾನವನು ತಾನು ಪರಪೂರ್ಣ ಆತ್ಮಸ್ವರೂಪನಿರುವನೆಂಬುದನ್ನು ಮರೆತ ಹಣಕ್ಕಾಗಿ ಅತೀ ಹೀನ ದೀನನಾಗುತ್ತಾನೆ ಅವನಿಗೆ ದೇಹವೆಂದರೆ ತಾನೇ ಎಂಬ

ದೇಹಾಭಿಮಾನವು ದೃಢವಾಗುತ್ತದೆ ಅದರಿಂದ ಕರ್ಮಾಕರ್ಮದ ಆಘಾತಗಳಾಗಿ ಅನೇಕ ತರಹದ ನರಕಯಾತನೆಗಳುಂಟಾಗುತ್ತವೆ ಮತ್ತು ಜನ್ಮಮರಣದ ಚಕ್ರದಲ್ಲಿ ಸಿಕ್ಕು ಬಹಳ ದುಃಖದಿಂದ ವ್ಯಾಕುಲನಾಗುತ್ತಾನೆ ಆ ದುಃಖವನ್ನನುಭವಿಸುವಾಗ ಅವನ ಮನಸ್ಸಿಗೆ ತೊಂದರೆಯಾಗುತ್ತದೆ ಮತ್ತು ಸಂಸಾರದ ಸುಳಿಗೆ ಸಿಕ್ಕು ಒದ್ದಾಡುತ್ತಾನೆ ಇಂಥವನು ದೇಹಾಭಿಮಾನವನ್ನು ಬಿಟ್ಟು ಬಿಡಬೇಕು ಆದರೆ ಈ ದೇಹಾಭಿಮಾನವು ಬಿಡಲು ಹೋದರೆ ಬಿಡುವದಿಲ್ಲ ಇದೇ ದೊಡ್ಡ ವ್ಯಥೆಯಾಗಿರುತ್ತದೆ ಆದ್ದರಿಂದಲೇ ಸಾಧನ ಮಾಡುವವರಿಗೆ ಸಾಧನೆಗಳ ಸಂಕಟಗಳನ್ನು ಅನುಭವಿಸಬೇಕಾಗುತ್ತದೆ (ಸಹಿಸಬೇಕಾಗುತ್ತದೆ) ಆದರೆ ಯಾವ ಯಾವ ಸಾಧನವನ್ನು ಮಾಡುತ್ತಾರೋ, ಆ ಸಾಧನೆಯಲ್ಲಿ ಸಾಧನಾಭಿಮಾನವು ಉತ್ಪನ್ನವಾಗುತ್ತದೆ ಯಾವ ಪ್ರಕಾರವಾಗಿ ಕಳ್ಳರ ಹಾವಳಿಯು ಬಂದಿತೆಂದರೆ, ಅವರು ಎಲ್ಲವನ್ನೂ ಹೇಗೆ ಅಪಹರಿಸಿಕೊಂಡು ಒಯ್ಯುವರೋ 'ಹಾಗೆಯೇ ಸಾಧನದಲ್ಲಿ ಅಹಂಕಾರವು ಸೇರಿತೆಂದರೆ ಎಲ್ಲ ಸಾಧನೆಗಳನ್ನು ನಾಶಗೊಳಿಸುತ್ತದೆ ಹೀಗೆ ಸಾಧನಮಾರ್ಗದಲ್ಲಿ ಅಹಂಕಾರವು ಒಂದು ವಿಘ್ನವಾಗಿದೆ ಇನ್ನು ಸಾಧಕನ ಸಾಧನೆಯನ್ನು ಕೇಳು ವೇದೋಕ್ತ ಸ್ವಧರ್ಮಾಚರಣೆಯನ್ನು ಮಾಡಬೇಕು ಪೂರ್ಣ ವೈರಾಗ್ಯದಿಂದಿರಬೇಕು ಮತ್ತು ಅತಿಶಯ ಪ್ರೇಮದಿಂದ ಅವನು ನನ್ನ ಭಜನೆಯನ್ನು ಮಾಡಬೇಕು ತತ್ಕಾಲ ದೇಹಾಭಿಮಾನದ ನಾಶವಾಗಬೇಕೆಂದರೆ, ಅವನು ಅಖಂಡ ನನ್ನ ನಾಮ ಸ್ಮರಣೆಯನ್ನು ಮಾಡುತ್ತಲೇ ಇರಬೇಕು ಗಾಯನ ಮತ್ತು ನೃತ್ಯದಿಂದ ಕೂಡಿದ ಹರಿ ಕೀರ್ತನೆಯನ್ನು ಮಾಡಬೇಕು ಮತ್ತು ಎಲ್ಲ ಪ್ರಾಣಿಮಾತ್ರಗಳಲ್ಲಿ, ನನ್ನದೇ (ಶ್ರೀಕೃಷ್ಣನ) ಸ್ವರೂಪದ ಭಾವನೆಯನ್ನಿಡಬೇಕು ಎಲ್ಲ ಪ್ರಾಣಿಗಳಲ್ಲಿ ನನ್ನ ಸ್ವರೂಪವೇ ಇರುವದೆಂಬ ಭಾವನೆಯು ದೃಢವಾಯಿತೆಂದರೆ, ಜ್ಞಾನಸ್ವರೂಪ ಮತ್ತು ಸರ್ವವ್ಯಾಪಿಯಾದ ನನ್ನಲ್ಲಿ ಅವನ ಚಿತ್ತವು ಪ್ರವೇಶ ಮಾಡುವದು ನಾನು ಮೂರೂ ಅವಸ್ಥೆಯಲ್ಲಿ ಯಾವಾಗಲೂ ಇರುತ್ತೇನೆ ಮೂರೂ ಅವಸ್ಥೆಗಳನ್ನು ನಾನು ಪ್ರಕಾಶಿಸುತ್ತೇನೆ ಮತ್ತು ಮೂರೂ ಅವಸ್ಥೆಗಳಿಂದ ಬೇರೆಯಾಗಿರುವ ನಾನು ನಿಜವಾಗಲೂ ಜ್ಞಾನಸ್ವರೂಪನಾಗಿರುವೆನು ಮೂರೂ ಗುಣಗಳ ಆಚೆಗಿದ್ದ, ನಾಲ್ಕನೆಯದಲ್ಲದೆ ನಾಲ್ಕನೆಯದಾದ ತೂರ್ಯಾವಸ್ಥೆಯು ಇರುವದು ಅದರಲ್ಲಿ ಚಿತ್ತವನ್ನಿಟ್ಟ ಜೀವವು ಮದ್ರೂಪವಾಗುತ್ತದೆ ಮತ್ತು ಸಂಸಾರದ ಚಿಂತೆಯು ಇಲ್ಲದಂತಾಗಿ, ವಿಷಯವಾಸನೆಯು ಸಂಪೂರ್ಣವಾಗಿ ನಷ್ಟವಾಗುತ್ತದೆ ಆವಾಗಲೇ ಚಿತ್ತ, ಚಿಂತಾ, ಚಿಂತನ, ವಿಷಯವಾಸನೆ ಮತ್ತು ಅಭಿಮಾನ, ಇವೆಲ್ಲವುಗಳ ನಾಶವಾಗಿ, ಸ್ವಾನಂದಘನನಾದ ನಾನು ಸ್ವತಃ ಪ್ರಕಟನಾಗುವೆನು

## ಪ್ರಕರಣ ೨೪

ನಾನು ಹೇಳಿದ ಎಲ್ಲ ಯುಕ್ತಿಗಳಿಗೆ ಶ್ರುತಿಶಾಸ್ತ್ರಗಳ ಅನುಮತಿಯಿರುವದು ಅದರ ಬಗ್ಗೆ ವಿಚಾರಿಸಿ ಪರಮಾರ್ಥ ಮಾರ್ಗದಲ್ಲಿಯ ಸಂಸಾರದ ಸಮಸ್ಯೆಯನ್ನು ಬಿಡಿಸಬೇಕು ಸಂಸಾರ ಬಂಧನಕ್ಕೆ ಕಾರಣವು ಗುಣಗಳಾಗಿರುತ್ತವೆ ಆ ಗುಣ ಗಳಿಂದಲೇ ಮನಸ್ಸು ವಿಸ್ತಾರವಾಗಿದೆ ಅದು ನನ್ನ ಮಾಯೆಯಿಂದಲೇ ಮುಸುಕಿ ರುತ್ತದೆ ಇದೇ ಮುಖ್ಯ ಕಾರಣವಾಗಿದೆ ಯಾವ ಪ್ರಕಾರವಾಗಿ ಕಣ್ಣಿನಲ್ಲಿಯ ನೀರು ಹೆಪ್ಪುಗಟ್ಟಿ ಅದರದೇ ಪರಿಯಾಗುತ್ತದೆಯೋ ಮತ್ತು ಅದು ಕಣ್ಣನ್ನು ಮುಚ್ಚಿ ಕಣ್ಣು ಕಾಣಿಸದಂತೆ ಮಾಡುತ್ತದೆಯೋ ಹಾಗಯೇ ನನ್ನ ಮಾಯೆಯು ನನ್ನಿಂದಲೇ ಬಲಶಾಲಿಯಾಗಿ, ನನ್ನನ್ನೇ ಮರೆ ಮಾಡಿರುತ್ತದೆ (ಕಾಣಿಸದಂತೆ ಮಾಡಿ ರುತ್ತದೆ) ಇಲ್ಲವೆ ಹುಣ್ಣಿಮೆಯ ಶುಭ್ರವಾದ ಪೂರ್ಣಚಂದ್ರನು ಉದಯಿಸಿದ ನೆಂದರೆ, ಅವನ ಮೇಲೆ ಪೃಥ್ವಿಯ ನೆರಳು ಬೀಳುತ್ತದೆ ಮತ್ತು ಅದರಿಂದ ಚಂದ್ರ ಬಿಂಬದ ಮೇಲೆ ಕಪ್ಪುಕಲೆ ಬಿದ್ದಂತೆ, ಎಲ್ಲ ಜನರಿಗೂ ಕಾಣಿಸುತ್ತದೆ ಪೃಥ್ವಿ ಮತ್ತು ಚಂದ್ರನ ಅಂತರದ ವಿಚಾರ ಮಾಡಲಾಗಿ, ಅದು ಬಹಳೇ ವಿಸ್ತೀರ್ಣವಾ ಗಿದೆ ಅಂದ ಮೇಲೆ ಚಂದ್ರನ ಕಲೆಯು ಸುಳ್ಳಿಂದಾಯಿತು ಆದರೆ ಜನರು ಅದನ್ನೇ ನಿಜವೆಂದು ತಿಳಿಯುತ್ತಾರೆ ಈ ರೀತಿಯಾಗಿ ನನ್ನ ಮಾಯೆಯ ಸ್ವರೂಪ ವಿರುವದು ನನಗೆ ಮಾಯೆಯ ಸಂಸರ್ಕವೂ ಕೂಡ ಇರುವದಿಲ್ಲ ಆದರೂ ಜನರು ಸುಳ್ಳು ಆಭಾಸದಿಂದ ಮಾಯೆಗೆ ಮೋಸ ಹೋಗುತ್ತಾರ ಅದರಿಂದಲೇ ಸುಳ್ಳಾಗಿದ್ದ ಗುಣದ ಹೊರೆಯನ್ನು ಕರ್ತೃತ್ವಾಭಿಮಾನದಿಂದ ತಮ್ಮ ತಲೆಯ ಮೇಲೆ ಹೊರುತ್ತಾರೆ ಆದ ಕಾರಣದಿಂದ, ಅದರಿಂದಲೇ ವಿಷಯಭೋಗದ ವಾಸನೆಗಳಿಗೆ ಗುರಿಯಾಗುತ್ತಾನೆ ಒಟ್ಟಿಗೆ ವಿಚಾರ ಮಾಡಲಾಗಿ, ಎರಡೂ ದೇಹದ ಬಂಧನವು ಜೀವಕ್ಕೆ ಇಲ್ಲದೆಯೇ ಬೆನ್ನಟ್ಟಿವೆ ಆದುದರಿಂದ ಆ ಬಂಧನಗಳನ್ನು ಹರಿದೊಗೆಯಲು ನನ್ನ ಯುಕ್ತಿಗಳ ವಿಚಾರವನ್ನೇ ಮಾಡಬೇಕು ಯುಕ್ತಿಯ ಬರಿ ಸಂದೇಹವನ್ನೇ ಮಾಡುತ್ತ ಕುಳಿತರೆ, ಅನುಮಾನಿಕ ಜ್ಞಾನ ಉಂಟಾಗುತ್ತದೆ ಅದರಿಂದ ಅವಿದ್ಯೆಯ (ಅಜ್ಞಾನ) ಬಂಧನವು ನಾಶವಾಗುವದಿಲ್ಲ ಅದಕ್ಕಾಗಿಯೇ ಸಾಧು ಸಜ್ಜನರ ಸೇವೆಯನ್ನು ಮಾಡಬೇಕು ಸಾಧುಗಳಲ್ಲಿಯೂ ಕೂಡ ಪರಿಪೂರ್ಣ ಸಾಧುತ್ವವು ಸದ್ಗುರುವಿನೊಬ್ಬನಲ್ಲಿಯೇ ಇರುತ್ತದೆ ಆದ್ದರಿಂದ ಸದ್ಗುರುವಿನ ಚರಣಗಳನ್ನು ಸೇವಿಸಬೇಕು ಅವನ ಸೇವೆಯಿಂದ ಸಂಸಾರ ಪಾಶವು ಇಲ್ಲದಂತಾ ಗುವದು ಕಾರಣವೇನೆಂದರೆ ಸದ್ಗುರುವೇ ನಿಜವಾದ ಸಾಧು-ಸಜ್ಜನನಾಗಿರುವನು ಅವರ ಮಧುರ ವಚನೋಕ್ತಿಯೇ ಶ್ರುತಿಯ ಅರ್ಥದ ಉಪದೇಶವಿರುವದು ಅದ ರಿಂದ ಜ್ಞಾನರೂಪ ತಲವಾರದ ಪ್ರಾಪ್ತಿಯಾಗುತ್ತದೆ ಮತ್ತು ಅದನ್ನು ಬುದ್ಧಿಯ

ಕೈಯಲ್ಲಿಡಲು ದೊರಕುತ್ತದೆ ಆಮೇಲೆ ಅದೇ ಶಸ್ತ್ರವನ್ನು ವೈರಾಗ್ಯ ಮತ್ತು ನಿರಾಶಾ ರೂಪ ನಾಣಿಗೆಗೆ ಹಚ್ಚಿ ಲಕ ಲಕ ಹೊಳೆಯುವಂತೆ ಮಾಡಬೇಕು ಮತ್ತು ಧೈರ್ಯದಿಂದ ಸಂದೇಹವಿಲ್ಲದೆಯೇ ಮುಷ್ಟಿಯಲ್ಲಿ ಗಟ್ಟಿಯಾಗಿ ಹಿಡಿಯಬೇಕು ಶಸ್ತ್ರದ ಜತೆಗೆ ತಾನೂ ಏಕಾಗ್ರಚಿತ್ತನಾಗಿ, ಸರಿಯಾಗಿ ಗುರಿಯಿಟ್ಟು ದೇಹಾಭಿಮಾನವನ್ನು ಖಂಡಿಸಬೇಕು ಯಾವದು ಸರ್ವ ಸಂಶಯದ ಆಗರ ಆಗಿರುತ್ತದೆಯೋ, ಯಾವದರಿಂದ ದೇಹಕ್ಕೆ ದುಃಖವುಂಟಾಗುತ್ತದೆಯೋ ಯಾವುದರಿಂದ ಯಾವಾಗಲೂ ವಿಷಯದ ಅಭಿಲಾಷೆ ಯುಂಟಾಗುತ್ತದೆಯೋ, ಯಾವದು ಕಾಮ ಕ್ರೋಧಗಳನ್ನು ಪೋಷಿಸುತ್ತದೆಯೋ, ಯಾವದು ಮೂರೂ ಗುಣಗಳನ್ನು ಬೆಳೆಸುತ್ತದೆಯೋ, ಯಾವದು ಆತ್ಮನನ್ನು ಜೀವದೆಶೆಗೆ ತರುತ್ತದೆಯೋ, ಯಾವುದರ ಸಹವಾಸದಿಂದ ಜೀವಕ್ಕೆ ದುರ್ನಿವಾರ ಜನ್ಮ ಮರಣವು ಬೆನ್ನಟ್ಟಿದೆಯೋ, ಎಲ್ಲಿ ಅನರ್ಥಕ್ಕೆ ಕಾರಣವಾದ ಮಮತೆಯು ಯಾವುದರ ಪ್ರಿಯ ಪುತ್ರಿಯಾಗಿರುವಳೋ, ಅದೇ ಈ ದೇಹಾಭಿಮಾನವಾಗಿರುವದು ಮಾಯೆಯೆ ಮಾತೆಯಂತೆ ಮಮತೆಯನ್ನು ಬೆಳೆಸುತ್ತಾಳೆ ಮಾಯೆಯ ಸಾಮರ್ಥ್ಯದಿಂದಲೇ ಮಮತೆಯು ಬಲಾಢ್ಯವಾಗಿದೆ ಆದಕಾರಣ ಶೂರನಿದ್ದವನು ರಣಾಂಗಣದಲ್ಲಿ, ತೀಕ್ಷ್ಣವಾಗಿ ಮಸೆದ ಶಸ್ತ್ರವನ್ನು ಧೈರ್ಯದಿಂದ ಹಿಡಿದು, ಅದರ ಮೇಲೆ ಚೆನ್ನಾಗಿ ಪ್ರಹಾರ ಮಾಡಬೇಕು ಒಂದೇ ಹೊಡೆತದಲ್ಲಿ, ಮಾಯಾ, ಮಮತಾ ಮತ್ತು ಅಭಿಮಾನ ಇವೆಲ್ಲವೂ ತುಂಡು ತುಂಡಾಗುವಂತೆ, ಕತ್ತರಿಸಬೇಕು—

—ಭೋಗ್ಯ, ಭೋಗ ಮತ್ತು ಭೋಕ್ತಾ, ಕರ್ಮ, ಕಾರ್ಯ ಮತ್ತು ಕರ್ತಾ, ಧ್ಯೇಯ, ಧ್ಯಾನ ಮತ್ತು ಧ್ಯಾತಾ, ಈ ಎಲ್ಲ ತ್ರಿಪುಟಿಗಳ ಖಂಡನ ಮಾಡಬೇಕು 'ನಾನು ಇರುವೆನು' 'ನಾನು ಯಾರು?' ಇಲ್ಲವೇ 'ಬ್ರಹ್ಮನೇ ನಾನು' ಇಂತಹ ಆತ್ಮೀಯತೆಯ ಅಭಿಮಾನವನ್ನು ತ್ಯಜಿಸಿರುವದರಿಂದಲೇ ಸಾಧಕರಿಗೆ ನನ್ನ ನಿಜಪದವು ಪ್ರಾಪ್ತವಾಗುತ್ತದೆ ಮತ್ತು ಸ್ವತಃ ಬ್ರಹ್ಮಸ್ವರೂಪವಾಗುತ್ತಾರೆ ಆಮೇಲೆ ನೀವು ಹೀಗ ಅನ್ನಬಹುದು "ನೀವು ಹೇಳಿದ ಈ ಪ್ರಕಾರವು ಕೇವಲ ಶಬ್ದಜ್ಞಾನದ ಪ್ರಯೋಗವಾಗಿದೆ ಬಾಯಿಗೆ ಬಂದಂತೆ ಬಡಬಡಿಸಿದರೇನು ಅಹಂಕಾರವನ್ನು ಬಿಡಲಾಗುತ್ತದೆಯೇ? ಬರಿ ಕೇವಲ ಶಬ್ದಮಾತ್ರದಿಂದ ಅಭಿಮಾನವು ನಷ್ಟವಾಗುತ್ತದೆ ಯಾದರೆ, ದೊಡ್ಡ ದೊಡ್ಡ ವಿದ್ವಜ್ಜನರು ಅಭಿಮಾನದಲ್ಲಿ ಏಕೆ ಮುಳುಗುತ್ತಾರೆ? ಅಭಿಮಾನವು ಎದುರು ಬದುರಿನಲ್ಲಿ ಗೋಚರವಾಗುತ್ತಿದ್ದರೆ, ಅದನ್ನು ಕೊಡಲಿ ಶಸ್ತ್ರದಿಂದ ನಾಶ ಮಾಡಲು ಬರುತ್ತಿತ್ತು ಆದರೆ ಅದು ಸರ್ವತೋಪರಿ ಅತರ್ಕ್ಯ ವಾಗಿದೆ ಆದುದರಿಂದ ಶಬ್ದದಿಂದ ಅಭಿಮಾನವು ನಷ್ಟವಾಗಲಾರದು ಮತ್ತು ಹಾಗೆಯೇ ಆತ್ಮಾನುಭವದ ಸಾಕ್ಷಾತ್ಕಾರವು ಯಾವಾಗ ಆಗುವದೋ ಅದು ಕೂಡ ಶಬ್ದಗಳ ಆಟವಲ್ಲ" ಇಂತಹ ಸಂದೇಹದ, ಸಮಾಧಾನವನ್ನು ಕೇಳು ಯಾವನು ಎಲ್ಲ ವೇಳೆ

ಎಚ್ಚರದಿಂದಿದ್ದು, ಅನನ್ಯ ಭಾವನೆಯಿಂದ ನನ್ನ ಭಜನೆಯನ್ನು ಮಾಡುವನೋ ಇಲ್ಲವೆ ನನ್ನ ಭಾವನೆಯಿಂದಲೇ ಸದ್ಗುರುವಿನ ನಿರ್ಮಲವಾದ ಚರಣಗಳ ಸೇವೆಯನ್ನು ಮಾಡುವನೋ ಮತ್ತು ಯಾರು ನನ್ನಲ್ಲಿ ಮತ್ತು ಸದ್ಗುರುವಿನಲ್ಲಿ ಕಲ್ಪಾಂತದಲ್ಲಿ ಕೂಡ ಭೇದವನ್ನೆಣಿಸದೆ ಐಕ್ಯಭಾವನೆಯಿಂದ ನನ್ನ ಭಜನಯೆನ್ನು ಮಾಡುವರೋ, ಅವರಿಗೆ ಸುಲಭವಾಗಿ ನನ್ನ ಜ್ಞಾನಪ್ರಾಪ್ತಿಯಾಗುತ್ತದೆ ಅವರು ಮೂಲತಃ ನನ್ನ ಭಜನೆಯಲ್ಲಿ ಮಗ್ನರಿರುವದರಿಂದ ಅವರಿಗೆ ಜ್ಞಾನರೂಪ ತಲವಾರದ ಪ್ರಾಪ್ತಿಯಾಗುತ್ತದೆ ಯಾವ ಶಸ್ತ್ರದ ಉಜ್ವಲ ತೇಜವನ್ನು ಕಂಡು ಕಲಿಕಾಳನ ಹೃದಯದಲ್ಲಿ ಕೂಡ ಹುಡ ಹುಡಿ ತುಂಬುತ್ತದೆಯೋ, ಅಂತಹ ಶಸ್ತ್ರವು ತಾನಾಗಿಯೇ ಅವನ ಕೈಸೇರುತ್ತದೆ ಆ ಶಸ್ತ್ರದ ಭಯದಿಂದಲೇ ಮಾಯಾ, ಮಮತಾ ಮತ್ತು ಅಭಿಮಾನವು ಜೀವಾತ್ಮನನ್ನು ಬಿಟ್ಟು ಯಃಪಲಾಯನ ಮಾಡುತ್ತವೆಯೆಂದು ನೀನು ತಿಳಿದುಕೋ ಅಹಂ ಮಮತಾ ಮತ್ತು ಅವಿದ್ಯೆಯನ್ನು ನಾಶಗೊಳಿಸಬೇಕೆಂದು ಸಿದ್ಧವಾದರೆ, ಅವುಗಳು ಭಯದಿಂದ ತಮ್ಮಷ್ಟಕ್ಕೆ ತಾವೇ ಓಡಿಹೋದುದರಿಂದ, ಅಹಂ ಮಮತೆಗೆ ಸ್ಥಾನವೇ ಉಳಿಯಲಿಲ್ಲ ಮತ್ತು ಅವಿದ್ಯೆಗೂ ಕೂಡ ಅಸ್ತಿತ್ವವು ಉಳಿಯಲಿಲ್ಲವೆಂದು ಕಂಡು ಬಂದಿತು ಅತಿಶಯ ಉತ್ತಮ ರೀತಿಯಿಂದ ನನ್ನ ಭಜನೆಯನ್ನು ಮಾಡಲು, ಇಷ್ಟೊಂದು ಜ್ಞಾನಪ್ರಾಪ್ತಿ ಯಾಗುತ್ತದೆ ಈವಾಗ್ಗೆ ಮನಸ್ಸಿಗೆ, 'ಭಜನೆಯನ್ನು ಎಲ್ಲಿ ಮಾಡಬೇಕು?' ಎಂದು ಸಂದೇಹ ಉತ್ಪನ್ನವಾಗಬಹುದು ಕಾರಣವೇನೆಂದರೆ ನಿನ್ನ ಸ್ವರೂಪವು, ಅತ್ಯಂತ ಸೂಕ್ಷ್ಮ, ಅತರ್ಕ್ಯ ಮತ್ತು ನಿರ್ಗುಣವಾಗಿರುವದು ನಿನ್ನ ಭಜನೆಯನ್ನು ಮಾಡುವ ಸ್ಥಾನವಾವುದೆಂಬುದೇ ನಮಗೆ ತಿಳಿಯದಾಗಿದೆ ಹೀಗೆಂದು ಮನಸ್ಸಿನಲ್ಲಿ ನೀನು ಕಲ್ಪನೆಯನ್ನು ಮಾಡುವಿಯಾದರೆ, ಅದರ ಉತ್ತರವನ್ನೂ ಚೆನ್ನಾಗಿ ಕಿವಿಗೊಟ್ಟು ಕೇಳು ಅತಿ ಸುಲಭವಾದ ನನ್ನ ಭಜನದ ಸ್ಥಾನವನ್ನು ಹೇಳುವೆನು ಕೇಳು ಕೋಟ್ಯಾನು ಕೋಟಿ ಪರ್ವತಗಳನ್ನುಲ್ಲಂಘಿಸದೆ, ಗಿರಿಕಂದರಗಳನ್ನಾಶ್ರಯಿಸದೆ, ದೂರ ಹೋಗಿ ಕಷ್ಟಗಳನ್ನು ಸಹಿಸದೆ, ಯಾವ ಸ್ಥಳದಲ್ಲಿ ನಿರಂತರ ನನ್ನ ಭೆಟ್ಟಿಯಾಗುವದೋ, ಎಲ್ಲಿ ಪುರುಷೋತ್ತಮನಾದ ನಾನು ಇರುವೆನೋ ಆ ಭಜನಸ್ಥಾನವು ಉಪಮೆಯಿಲ್ಲ ದಾಗಿರುತ್ತದೆ ನನ್ನ ಪ್ರಾಪ್ತಿಗಾಗಿ ಅದು ಭಕ್ತರ ಸುಲಭವಾದ ವಿಶ್ರಾಂತಿ ಗೃಹವಾಗಿರುತ್ತದೆ

ಎಲ್ಲ ಸುಖದ ವಿಶ್ರಾಂತಿಯ ಸ್ಥಾನವಾದಂತಹ, ಆತ್ಮಾರಾಮನಾದ ನಾನು ನಿಮ್ಮ ಹೃದಯದಲ್ಲಿಯೇ ಯಾವಾಗಲೂ ಸಮತ್ವದಿಂದ ಇರುವೆನು ಅಲ್ಲಿಯೇ ಪ್ರೀತಿಯಿಂದ ಭಜಿಸಬೇಕು ಯಾವನು ಬ್ರಹ್ಮದೇವನಿಂದ ನೊಣದವರೆಗೂ ಎಲ್ಲರ ಹೃದಯದಲ್ಲಿ ನಾನೇ (ಶ್ರೀಕೃಷ್ಣನು) ಇರುವೆನೆಂದು ತಿಳಿಯುವನೋ ಅವನೇ ಭಾಗ್ಯವಂತನಿರುವನು ಮತ್ತು ನನ್ನ ಪ್ರಾಪ್ತಿಗಾಗಿ ಇದೇ ಭಜನೆಯು ಉತ್ಕೃಷ್ಟವಾಗಿರುವದು ಹೃದಯಸ್ಥ ನಾದ, (ಶ್ರೀಕೃಷ್ಣ) ನನ್ನ ಪ್ರಕಾಶದಿಂದಲೇ ಮನಸ್ಸು ಹಾಗೂ ಬುದ್ಧಿ ಇತ್ಯಾದಿಗಳ

ವ್ಯಾಪಾರವು ನಡೆಯುತ್ತದೆಯೋ ಮತ್ತು ನನ್ನ ಸ್ಫುರಣದ ಸ್ಫೂರ್ತಿಯಿಂದಲೇ ಎಲ್ಲಿ ಜ್ಞಾನವು ಚರಣವಂದಿಸುವದೋ, ಅಂತಹ ಹೃದಯಸ್ಥನಾದ ನನ್ನನ್ನು ಯಾರೂ ತತ್ಪರತೆಯಿಂದ ಭಜಿಸುವದಿಲ್ಲವೋ ಅವರು ಇನ್ನಿತರ ಪ್ರಯತ್ನಗಳಿಂದ ನಿರರ್ಥಕವಾಗಿ ದಣಿದು, ನಾನಾ ತರಹದ ಸಂಕಟಕ್ಕೊಳಗಾಗುತ್ತಾರೆ ಇಂತಹ ಜನರಲ್ಲಿಯೂ ಕೂಡ, ಯಾವನಾದರೊಬ್ಬನು ಸುದೈವಿಯೂ, ಭಾಗ್ಯವಂತನೂ ಇರುವನೋ, ಅವನೇ ಹೃದಯಸ್ಥನಾದ ನನ್ನ ಬಗ್ಗೆ ವಿಚಾರ ಮಾಡಿ, ನಿಶ್ಚಯಪೂರ್ವಕವಾಗಿ ಭಜನೆಯನ್ನು ಮಾಡುತ್ತಾನೆ ಅವನು ಹೃದಯಸ್ಥನಾದ ನನ್ನನ್ನು ಭಜಿಸುವದರಿಂದ ಅವನಿಗೆ ಅಧೋಗತಿಯಾಗದಂತಹ, ನನ್ನ ವೈರಾಗ್ಯಸಮೇತ ಸಂಪೂರ್ಣ ಜ್ಞಾನವು ಪ್ರಾಪ್ತವಾಗುತ್ತದೆ ಆ ಜ್ಞಾನದ ಭಯದಿಂದಲೇ ಅಭಿಮಾನವು ಓಡಿಹೋಗುತ್ತದೆ ಆ ನನ್ನ ಜ್ಞಾನವು ಯಾರು ಯಾವಾಗಲೂ ಹೃದಯಸ್ಥನಾದ ನನ್ನನ್ನು ಭಜಿಸುವರೋ, ಅವರಿಗೆ ಲಭಿಸುತ್ತದೆ (ಅವರಿಗೆ ನಾನು ಕೊಡುತ್ತೇನೆ) ಆ ಜ್ಞಾನದ ಜ್ಞಾನ ಸಿದ್ಧಿಯಾಯಿತೆಂದರೆ ಎಲ್ಲ ಆಧಿವ್ಯಾಧಿಗಳು ಇಲ್ಲದಂತಾಗುತ್ತವೆ ಮತ್ತು ನಿಜವಾಗಿಯೂ ಎಲ್ಲ ಸಂದೇಹಗಳು ನಷ್ಟವಾಗುತ್ತವೆ ಆ ಜ್ಞಾನದ ಸಹಾಯದಿಂದಲೇ ಭಕ್ತನು ಆತ್ಮ ಪದವನ್ನು ಹೊಂದುತ್ತಾನೆ ಆದ್ದರಿಂದಲೇ ಬಲಾಢ್ಯನಾದ ಶೂರನು ಲಕಲಕಿಸುವ ಶಸ್ತ್ರದಿಂದ, ಅದನ್ನು ಕಡಿದು ಹಾಕಬೇಕೆಂದು ನಾನು ಬಲವತ್ತರವಾಗಿ ಹೇಳಿದೆನು ಇದಕ್ಕೂ ನೀವು ಹೀಗೆ ಮನಸ್ಸಿನಲ್ಲಿ ವಿಚಾರ ಮಾಡಬಹುದು ಸಂಸಾರವು ಪ್ರಾಪ್ತವಾದ ಮೇಲೆ, ಕೈಯಲ್ಲಿ ಶಸ್ತ್ರವನ್ನು ಹಿಡಿದು, ಆ ಸಂಸಾರ ವೃಕ್ಷವನ್ನು ಯಾವ ರೀತಿಯಿಂದ ಸಂಹಾರ ಮಾಡಬೇಕು? ಆದರೆ ಸಂಸಾರವೆಂಬುವದೆಲ್ಲವೂ ಕೇವಲ ಭ್ರಮೆಯಾಗಿದೆ ಇದನ್ನೇ ದೃಷ್ಟಾಂತರೂಪದಿಂದ ಮುಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ರಸಭರಿತವಾಗಿ ಹೇಳಿದ್ದಾನ ದೇಹದಿಂದ ಅಹಂಕಾರದವರೆಗೂ ಯಾವ ಪಿಂಡ ಬ್ರಹ್ಮಾಂಡವು ಭಾಸಿಸುತ್ತಿದೆಯೋ, ಅದೆಲ್ಲವೂ ಮನಸ್ಸಿನ ಆಟವೇ ಆಗಿದೆ ಸಂಸಾರವೇ ಸುಳ್ಳಾಗಿರುವದು ಯಾವ ಪ್ರಕಾರವಾಗಿ ಕನಸಿನಲ್ಲಿ ಸ್ವತಃ ಮನಸ್ಸು ಮೂರೂ ಲೋಕಗಳನ್ನು ನೋಡುತ್ತದೆಯೋ, ಅದರಂತೆಯೇ ಅವಿದ್ಯೆ (ಅಜ್ಞಾನ)ಯಿಂದ ಸಂಸಾರ ರೂಪಿ ದೀರ್ಘಸ್ವಪ್ನವು ವಿಕಸಿತವಾಗುತ್ತದೆ ಇರುವದು ಒಂದು ಮತ್ತು ನೋಡುವದು ಬೇರೊಂದು ಇದಕ್ಕೆ ಆಭಾಸವೆನ್ನುತ್ತಾರೆ ಶಿಂಪಲಿಯಲ್ಲಿ ಬೆಳ್ಳಿಯಿದ್ದಂತೆ ಭಾಸವಾಗುತ್ತದೆ ಹಗ್ಗಕ್ಕೇ ದೊಡ್ಡ ಹಾವು ಎಂದೆನ್ನುತ್ತಾರೆ ಇಲ್ಲವೆ ಸೂರ್ಯನ ಕಿರಣಗಳಲ್ಲಿ ಮೃಗಜಲವನ್ನು ನೋಡುತ್ತಾರ (ಭಾಸವಾಗುತ್ತದೆ) ಅದರಂತೆ ಕೇವಲ ಶುದ್ಧ ಪರಬ್ರಹ್ಮನಿಗೇ ಭ್ರಾಂತಿಷ್ಟ ಜನರು ಸಂಸಾರವೆಂದನ್ನುತ್ತಾರ ಆದರೆ ನಿಜವಾಗಲೂ ಇದಕ್ಕೆ ನಾನೇ ಕಾರಣನಾಗಿರುವೆನು

## ಪ್ರಕರಣ ೨೯

ಯಾರು ಯಾವ ಬೇಕಾದ ಜಾತಿಯಲ್ಲಿ ಜನಿಸಿರಲಿ, ಯಾರಿಗೆ ನನ್ನ ಭಾವಾರ್ಥ ಯುಕ್ತ ಭಕ್ತಿಯು ಲಭಿಸುತ್ತದೆಯೋ, ಅವನೇ ಪರಮ ಪವಿತ್ರನಾದವನೆಂದು ತಿಳಿ ನನ್ನ ಭಜನೆಯಿಂದಲೇ ನನ್ನ ಪ್ರಾಪ್ತಿಯಾಗುತ್ತದೆ ನನ್ನ ಭಕ್ತಿಯನ್ನು ಬಿಟ್ಟು, ಅನೇಕ ಸಾಧನೆಗಳನ್ನು ಇಲ್ಲವೆ ವಾದ ವಿವಾದವನ್ನು ಮಾಡಿದಲ್ಲಿ ನನ್ನ ಪ್ರಾಪ್ತಿಯು ಆಗುವದಿಲ್ಲ. ಅದನ್ನೇ ಶ್ರೀಕೃಷ್ಣನು ಹೇಳುತ್ತಾನೆ ನನ್ನ ಭಕ್ತಿಯಿಲ್ಲದೆಯೇ ಯಾವದೇ ಕರ್ಮ ಇಲ್ಲವೆ ಆಚರಣೆ ಮಾಡುವದು ಶುದ್ಧ ಭ್ರಮೆಯಾಗಿರುತ್ತದೆಯೆಂದು ತಿಳಿ ಅದರಲ್ಲಿ ನನ್ನ ಪ್ರಾಪ್ತಿಯ ದಾರಿಯು ತಪ್ಪುತ್ತದೆ ಮತ್ತು ಆ ಧರ್ಮದ ಪರಿಣಾಮವು ಅಧರ್ಮದಲ್ಲಿಯಾಗುತ್ತದೆ ಇಲ್ಲವೆ ನನ್ನ ಭಕ್ತಿಯ ವಿನಃ ನಿಜವಾದ (ಸತ್ಯ) ಭಾಷಣ ವನ್ನು ಮಾಡುವದೂ, ಹುಟ್ಟುಗುರುಡನಂತೆಯೇ ತಿಳಿಯಬೇಕು ಏಕೆಂದರೆ ಅದರಲ್ಲಿ ಹೆಜ್ಜೆ ಹೆಜ್ಜೆಗೂ ತಪ್ಪುಗಳೇ ಆಗುತ್ತವೆ ಮತ್ತು ತಾನು ಅಧಃಪತನಕ್ಕೇ ಹೋಗುತ್ತಿರುವ ನೆಂಬುದನ್ನು ಅವನು ನೋಡುವದಿಲ್ಲ ಭಕ್ತಿಯಿಲ್ಲದೆಯೇ ದಯೆಯ ವರ್ಣನೆಯನ್ನು ಮಾಡುವದೆಂದರೆ, ಯಾವ ಪ್ರಕಾರವಾಗಿ ಪುರುಷನಿಲ್ಲದ ಅವನ ಸುಂದರನಾರಿಯು ವಿಧವೆಯಾಗಿರುವದರಿಂದ ಎಲ್ಲ ಧರ್ಮಕೃತ್ಯಗಳಿಗೆ ತ್ಯಾಜ್ಯಳಿರುವಳೋ, ಅದರಂತೆ ಆ ದಯೆಯ ಸ್ಥಿತಿಯಾಗಿರುತ್ತದೆ ನನ್ನ ಭಕ್ತಿಯಿಲ್ಲದ ವಿದ್ಯೆಯು ಕೇವಲ ಅಜ್ಞಾನ ವೆಂದು ತಿಳಿ ಯಾವ ಪ್ರಕಾರವಾಗಿ ಕಾಗೆಯು ಚಂದ್ರನನ್ನು ಗುರುತಿಸುವದಿಲ್ಲವೋ, ಅದರಂತೆಯೇ ಅವರು ನನ್ನ ಆತ್ಮಬೋಧವನ್ನು ಗುರುತಿಸುವದಿಲ್ಲ ಕತ್ತೆಯು ಚಂದನದ ಕಟ್ಟಿಗೆಗಳ ಒಜ್ಜೆಯನ್ನು ಹೊರುತ್ತದೆ ಆದರೆ ಆ ಚಂದನದ ಒಳ್ಳೆವಾಸನೆಯ ರಹಸ್ಯ ವನ್ನು ಅದು ತಿಳಿಯುವದಿಲ್ಲ ಅದರಂತೆ ನನ್ನ ಭಕ್ತಿಯಿಲ್ಲದೆಯೇ ವಿದ್ಯಾ ಮತ್ತು ಶಾಸ್ತ್ರಗಳನ್ನೋದುವದೆಂದರೆ, ಕತ್ತೆಯಂತೆ ಬರೀ ಒಜ್ಜೆಯನ್ನು ಹೊರುವದೇ ಆಗಿರುತ್ತದೆ ನನ್ನ ಭಕ್ತಿಯಿಲ್ಲದೆಯೇ, ಶರೀರವನ್ನು ಕೃಶಮಾಡುತ್ತ ಯಾವ ಮನುಜನು ತಪಶ್ಚರ್ಯೆಯನ್ನು ಮಾಡುತ್ತಾನೆಯೋ, ಅವನು ತನ್ನ ಪೂರ್ವ ಪ್ರಾರಬ್ಧಾನುಸಾರ ವಾಗಿ ಪಾಪವನ್ನೇ ಅನುಭವಿಸುತ್ತಿರುವನೆಂದು ತಿಳಿಯಬೇಕು ಏಕೆಂದರೆ ಆ ತಪಶ್ಚರ್ಯೆಯಿಂದ ಸತ್-ಸ್ವರೂಪವಾಗುವದಿಲ್ಲ ನನ್ನ ಭಕ್ತಿಯಿಲ್ಲದೆಯೇ ಯಾವ ಯಾವ ಸಾಧನೆಗಳನ್ನು ಮಾಡುವರೋ, ಅವೆಲ್ಲವೂ ತನ್ನ ಪೈಸುತ್ತ ಮನೆಯನ್ನು ಕಟ್ಟಿ ಅದರಲ್ಲಿರುವ ಜೇಡು ಹುಳದಂತೆ ತಿಳಿಯಬೇಕು ಏಕೆಂದರೆ ಭಕ್ತಿಯು ಇಲ್ಲದೆಯೇ ಮಾಡಿದ ಕ್ರಿಯೆಗಳೆಲ್ಲವೂ, ಅವನಿಗೆ ಬಂಧನಕಾರಕವಾಗಿರುವವು ತಾತ್ಪರ್ಯ ವೇನೆಂದರ ನನ್ನ ಭಕ್ತಿಯಿಲ್ಲದೆಯೇ ಮಾಡಿದ ಕಾರ್ಯಗಳಿಗೆಲ್ಲ ಸಾಕ್ಷಿಯೇ (ಪ್ರಮಾಣವೇ) ಇರುವದಿಲ್ಲ

## ಪ್ರಕರಣ ೩೦

ಸರ್ವಾಂತರ್ಯಾಮಿಯಾದ ಈಶ್ವರ, ವಿಶ್ವಾತ್ಮಾ, ವಿಶ್ವಂಭರ, ಅನಂತ ಮತ್ತು ಅಪರಂಪಾರನಾದ ನಾನು ಶಿಷ್ಯನ ಶ್ರೀಗುರು ಆಗಿರುವೆನು ಗುರುವಿನ ನಾಮದ ಖ್ಯಾತಿಯು ಎಷ್ಟಿರುವದೋ ಅದೆಲ್ಲವೂ ನಿಜವಾಗಿಯೂ ಭಗವಂತನೇ ಇರುವನು. ಭಜನೆಯ ಭಕ್ತಿಭಾವವನ್ನರಿತು ಶಿಷ್ಯನ ಮನದಾಸೆಯನ್ನು ನಾನೇ ಪೂರ್ತಿಗೊಳಿಸುವೆನು ಯಾವ ಸದ್ಗುರುವಿನ ಅಂಗುಷ್ಟ ಮಾತ್ರದಲ್ಲಿ, ಕೋಟ್ಯಾನು ಕೋಟಿ ಬ್ರಹ್ಮಾದಿಕಗಳು ಇರುತ್ತಾರೆಯೋ, ಯಾವನ ಚರಿತ್ರೆಯು ವೈಕುಂಠ ಮತ್ತು ಕೈಲಾಸದಲ್ಲಿಯೂ ವಂದನೀಯವಾಗಿರುತ್ತದೆಯೋ, ಯಾರ ಹೆಸರನ್ನು ಕಿವಿಯಿಂದ ಕೇಳಿದ ತಕ್ಷಣ ಯದುಧರ್ಮ ಮತ್ತು ಕಾಳಪುರುಷನು ಗದಗದ ನಡುಗುತ್ತಾರೆಯೋ ಮತ್ತು ಬ್ರಹ್ಮ, ವಿಷ್ಣು, ಮಹೇಶ್ವರರಾದ ತ್ರಿಮೂರ್ತಿಗಳು ಕೈಜೋಡಿಸಿಕೊಂಡು ಅವನೆದುರು ನಿಂತಿರುತ್ತಾರೆಯೋ ಹಾಗೂ ಯಾವದು ವೇದದ ಗುಪ್ತ ರಹಸ್ಯವಿರುವದೋ, ಅದೇ ನಿಜವಾದ ಸದ್ಗುರು ಸ್ವರೂಪವಿರುವ ದೆಂದು ಶಿಷ್ಯನ ನಿಶ್ಚಯವು ಯಾವಾಗಲೂ ಇರಬೇಕು ಅವನನ್ನು ಮನುಷ್ಯನೆಂದು ತಿಳಿದು ಎಂದಿಗೂ ಅವನ ಅನಾದರವನ್ನು ಮಾಡಬಾರದು ಗುರುವಿನ ನಿಂದೆ ಯನ್ನು ಮುಖದಿಂದ ನುಡಿದಲ್ಲಿ ಅವನು (ಶಿಷ್ಯನು) ಸಂಪೂರ್ಣವಾಗಿ ನಾಶ ಹೊಂದಿದನೆಂದು ತಿಳಿಯಬೇಕು ಯಾವನಾದರೊಬ್ಬ ಬಳಗದವನು, ಏಕಾಂತದಲ್ಲಿ ಸದ್ಗುರುವಿನ ನಿಂದೆಯನ್ನು ಮಾಡುವದಕ್ಕಾಗಿ ಬಂದರೆ, ಅವನನ್ನು ಬಹಿಷ್ಕರಿಸಿದ ಮನುಷ್ಯನನ್ನು ಧಿಕ್ಕರಿಸುವಂತೆ ತ್ಯಜಿಸಬೇಕು ಅದು ಸಾಧ್ಯವಾಗದಿದ್ದರೆ ಅಲ್ಲಿಂದ ತಾನು ಓಡಿಹೋಗಬೇಕು ಸದ್ಗುರುವಿನ ನಿಂದೆಯನ್ನು ಕೇಳಿದಲ್ಲಿ, ಕಿವಿಯನ್ನು ಮುಚ್ಚಿಕೊಳ್ಳಬೇಕು ಭಕ್ತಿಭಾವನೆಯಿಂದ ಸದ್ಗುರುವನ್ನು ನೆನೆದು ಆ ಸ್ಥಳವನ್ನು ಬಿಟ್ಟು ತೊಲಗಬೇಕು ಶಿಷ್ಯನು ಸ್ವತಃ ಸದ್ಗುರುವನ್ನು ನಿಂದಿಸಿದರಂತೂ, ಅವನು ಎಲ್ಲ ರೀತಿಯಿಂದಲೂ ಮುಳುಗಿದಂತೆಯೇ, ಪರಮಾರ್ಥವೆಲ್ಲವೂ ಧೂಳು ಮುಸುಕಿ ದಂತೆ ಮತ್ತು ಎಲ್ಲ ಪ್ರಕಾರವಾಗಿ ಅಪಘಾತವಾಯಿತೆಂದು ತಿಳಿಯಬೇಕು ಇಂತಹ ಸದ್ಗುರುವಿನಲ್ಲಿ ಶಿಷ್ಯನು ಪತ್ರಿ, ಪುಷ್ಪ, ಅನ್ನ ಹಾಗೂ ಧನದಿಂದ ಎಂದಿಗೂ ವಂಚಿಸ ಬಾರದು ಇದನ್ನೇ ಶ್ರೀಕೃಷ್ಣನು (ಮುಂದಿನ ಶ್ಲೋಕದಲ್ಲಿ) ಹೇಳುತ್ತಿದ್ದಾನ ಮುಂಜಾನೆ, ಮಧ್ಯಾಹ್ನ, ಸಾಯಂಕಾಲ ಅನ್ನ, ದ್ರವ್ಯ, ಹೂಗಳು, ಹಣ್ಣುಗಳು ಇವುಗಳಲ್ಲಿ ಯಾವ ಭಿಕ್ಷೆಯು ಸಿಗುವದೋ, ಅವುಗಳೆಲ್ಲವನ್ನೂ ಗುರುವಿಗೆ ಅರ್ಪಿಸಿ ಕೈಮುಗಿದು ಅವರ ಮುಂದೆ ನಿಲ್ಲಬೇಕು ಆ ಮೇಲೆ ಗುರುಗಳು ಆಜ್ಞಾಪಿಸಿದ ನಂತರ, ತನ್ನ ಹೊಟ್ಟೆ ತುಂಬುವಷ್ಟೇ ಅದರಲ್ಲಿಯ ಅನ್ನವನ್ನು ಸ್ವೀಕರಿಸಬೇಕು ಬ್ರಹ್ಮಚಾರಿಗಳಂತೂ ಅನ್ನದ ಹೊರತಾಗಿ ಬೇರೆ ಯಾವ ಪದಾರ್ಥವನ್ನೂ ಸ್ವೀಕರಿಸ

ಬಾರದು ಮುಂಜಾನ ಮತ್ತು ಸಾಯಂಕಾಲ ಊಟ ಮಾಡುವದು ಬ್ರಹ್ಮಚಾರಿಗಳಿಗೆ ಯೋಗ್ಯವಾಗಿದೆ ಗುರುವಿನ ಆಜ್ಞೆಯಂತೆ ಎಷ್ಟು ಅನ್ನವು ಸಿಗುವದೋ ಅಷ್ಟರಲ್ಲಿಯೇ ಅವನು ತನ್ನ ಹಸಿವೆಯನ್ನು ಹಿಂಗಿಸಿಕೊಳ್ಳಬೇಕು ಅದರಲ್ಲಿ ಛಲೋ ಕೆಟ್ಟ ಇದಾವದನ್ನೂ ಎಣಿಸಬಾರದು, ನಾಲಿಗೆಯ ರುಚಿಗೆ ಬಲಿಬೀಳಬಾರದು ವಿಷಯದ ವಿಸ್ತಾರವನ್ನು ಬೆಳೆಯಿಸಬಾರದು ಉದರ ನಿರ್ವಾಹವಾದರೆ ಸಾಕು ಎಂಬುದೇ ಶಿಷ್ಯನ ಇಚ್ಛೆಯಾಗಿರಬೇಕು ಊಟ ಮಾಡುವಾಗ ಏನೊಂದೂ ಬೇಡಬಾರದು, ಅದಕ್ಕಾಗಿ ಮೌನದಿಂದಿರಬೇಕು ಬಹಳ ಊಟ ಮಾಡಿದರೆ ಗುರುಸೇವೆಯಲ್ಲಿ ಅಡ್ಡಿಯಾಗುತ್ತದೆ ಊಟ ಮಾಡುವಾಗ್ಗೆ ಬಹಳ ಅನ್ನವನ್ನು ಸೇವಿಸಿದಲ್ಲಿ, ನಿದ್ರೆ ಮತ್ತು ಆಲಸ್ಯವುಂಟಾಗುತ್ತದೆ ಮತ್ತು ಅತಿಶಯ ಸ್ವಲ್ಪ ಊಟವನ್ನುಂಡರೆ ದೇಹಕ್ಕೆ ಅಶಕ್ತತೆಯುಂಟಾಗುತ್ತದೆ ಗುರುಸೇವೆಗಾಗಿ ಯಾವಾಗಲೂ ಎಚ್ಚರದಿಂದಿರಬೇಕು ಆದ್ದರಿಂದ ಶಿಷ್ಯನ ಆಹಾರವು ಯಾವಾಗಲೂ ನಿಯಮಿತವಾಗಿರಬೇಕು ಗುರುವಿನ ಸೇವೆಗಾಗಿ ಶರೀರವನ್ನೂ ಚೆನ್ನಾಗಿ ಪೋಷಿಸಬೇಕು ಗುರುಸೇವೆಯ ಲಕ್ಷಣವನ್ನು ಸ್ವತಃ ಜನಾರ್ಧನನು (ಶ್ರೀಕೃಷ್ಣನು) ಹೇಳುತ್ತಿದ್ದಾನೆ ಗುರುಸೇವೆಯಲ್ಲಿ ಎಳ್ಳಷ್ಟೂ ಬೇಸರಿಯದೆ ಮೈಗಳ್ಳನಾಗದೇ ಸಂತೋಷದಿಂದ ಸದಾ ಸರ್ವಕಾಲ ತತ್ಪರರಾಗಿರಬೇಕು ಗುರುವು ವಾಹನದಲ್ಲಿ ಕುಳಿತಿದ್ದರೆ, ನಾವು ಅವರ ಮುಂದೆ ಆನಂದದಿಂದ ನಡೆಯಬೇಕು ಮತ್ತು ಅವರು ಕಾಲ್ನಡಿಗೆಯಲ್ಲಿದ್ದರೆ, ಅವರ ಸಾಮಾನುಗಳನ್ನು ಹೊತ್ತುಕೊಂಡು ಅವರ ಹಿಂದೆ ನಡೆಯಬೇಕು ಸಮಯಕ್ಕನುಸರಿಸಿ ಅವರಿಗೆ ನೀರು, ತಾಂಬೂಲವನ್ನೀಯಬೇಕು, ಅವರು ಎಲ್ಲಿ ಕುಳಿತುಕೊಳ್ಳುವರೋ ಅಲ್ಲಿ ಆಸನವನ್ನು ಹಾಕಬೇಕು ಮತ್ತು ಅವರ ಕಾಲನ್ನು ಒತ್ತಬೇಕು ಸದ್ಗುರುವು ಆಸನದಲ್ಲಿ ಕುಳಿತ ನಂತರ ಶಿಷ್ಯನು ತೀರ ಅವರ ಹತ್ತಿರ ಕೂಡಬಾರದು ಇಲ್ಲವೇ ಬಹಳ ದೂರವೂ ಹೋಗಬಾರದು ಕಣ್ಣಿಗೆ ಕಾಣುವಂತೆ ಇರಬೇಕು ಕೈಮುಗಿದು ಮುಂದೆ ನಿಲ್ಲಬೇಕು ಗುರುವು ಸಂಜ್ಞೆ ಮಾಡಿದ ತಕ್ಷಣ ಆ ಕೆಲಸವನ್ನು ಮಾಡಬೇಕು ಗುರುವು ಶಯ್ಯೆಯ ಮೇಲೆ ನಿದ್ರಿಸ್ಥರಾದರೆಂದರೆ ಅವರ ಹತ್ತಿರವಿರಬಾರದು ಅವರ ಧ್ವನಿಯು ಕೇಳುವಷ್ಟು ಅಂತರದಲ್ಲಿದ್ದು ರಾತ್ರಿಯನ್ನು ಕಳೆಯಬೇಕು ಸೇವೆ ಮಾಡುವವನೆಂದರೆ ನಾನೊಬ್ಬನೇ ಎಂದು ಮನಸ್ಸಿನಲ್ಲಿ ಅಭಿಮಾನವನ್ನು ತಾಳಿದನೆಂದರೆ ಮಾಡಿದ ಎಲ್ಲ ಸೇವೆಯೂ ವ್ಯರ್ಥವಾಗುವದು

## ಪ್ರಕರಣ ೩೧

ಗುರುವು ಅಚಳ, ನಿರ್ಮಳ, ಅವಿನಾಶ, ಮಾಯೆಯ ಆಚೆಗಿದ್ದ ಶ್ರೇಷ್ಠ ಈಶ್ವರ, ಪರಬ್ರಹ್ಮ ಮತ್ತು ಈಶ್ವರನಿದ್ದಾನೆಂಬ ದೃಢತರವಾದ ವಿಶ್ವಾಸವನ್ನು ಶಿಷ್ಯನು

ಇಡಬೇಕು ಹೀಗೆ ದೃಢತರವಾದ ವಿಶ್ವಾಸವನ್ನಿಡುವದರಿಂದಲೇ, ಗುರುಚರಣದಲ್ಲಿ ಶಿಷ್ಯನಿಗೆ ಅತಿಶಯ ಅಭಿರುಚಿಯುಂಟಾಗಿ, ಅವನ ಭಜನೆಯಲ್ಲಿ ಪ್ರೇಮವು ನಿತ್ಯ ನೂತನ ಮತ್ತು ಉತ್ತರೋತ್ತರ ಬೆಳೆಯುವ ಪ್ರೀತಿಯು ತಲೆದೂಗುತ್ತದೆ ಈ ತೆರವಾಗಿ ಭಜನೆಯಲ್ಲಿ ಅಭಿರುಚಿಯುಂಟಾಯಿತೆಂದರೆ ಅಂತಃಕರಣದಲ್ಲಿ ಶ್ರದ್ಧೆಯು ತುಂಬಿ ತುಳುಕುತ್ತದೆ ಒಂದೆಳೆಯಷ್ಟು ಕೂಡ ಗುರುವಿನ ಆಜ್ಞೆಯನ್ನು ಮೀರುವದಿಲ್ಲ ಮತ್ತು ಆಲಸ್ಯವನ್ನು ದೂರ ನಾರುತ್ತಾನೆ ಗುರುವಚನದ ಶ್ರವಣದಿಂದ ವಿಕಲ್ಪದ ಗೊಬ್ಬರವನ್ನು ಅಗಿಯುತ್ತಾನ ಮತ್ತು ಸಂಕಲ್ಪವನ್ನು ಗಲ್ಲಿಗೇರಿಸುತ್ತಾನೆ ಹಾಗೂ ಅಭಿಮಾನವನ್ನು ಕೊಂದುಬಿಡುತ್ತಾನೆ ಆವಾಗ್ಗೆ ಮತ್ಸರವು ಹೇಗೆ ತಲೆಯೆತ್ತುವದು? ಅದು ಭಯದಿಂದ ಅಲ್ಲಿಂದಲ್ಲಿಯೇ ಸಾಯುತ್ತದೆ ಈ ಪ್ರಕಾರವಾಗಿ ಗುರುವಿನಲ್ಲಿ ಅವನಿಗೆ ಅತೀವ ಶ್ರದ್ಧೆಯುಂಟಾಗಿ, ಅವನು ಗುರುವನ್ನು ಪರಬ್ರಹ್ಮ ದೃಷ್ಟಿಯಿಂದಲೇ ನೋಡುತ್ತಲಿರುತ್ತಾನ ಯಾವನು ನಿರ್ಗುಣ ಮತ್ತು ನಿರಾಕಾರ ನಿರುವನೋ, ಅವನೇ ನನ್ನ ಮೂರ್ತಿಮಂತ ಗುರುವಾಗಿರುವನು ಕ್ರಿಯೆಯನ್ನಾಚರಿಸಿ ಆಚರಿಸದಂತಿರುವನೋ (ಅಕರ್ತಾ ಇರುವನೊ) ಅವನೇ ನನ್ನ ನಿಜವಾದ ಗುರುಮೂರ್ತಿಯು ಇರುವನು ನಿತ್ಯ ಮತ್ತು ನಿರ್ವಿಕಲ್ಪವಾದ ಸಮಾಧಿಸುಖವು ನನ್ನ ಗುರುಚರಣದ ತೀರ್ಥವಾಗಿರುವದು ಇಷ್ಟೊಂದು ಅವನು ದೃಢ ಭಾವನೆಯನ್ನು ಮಾಡುವವನಾಗಿರುತ್ತಾನೆ ಗುರುವನ್ನು ಈ ಪ್ರಕಾರವಾಗಿ ಬ್ರಹ್ಮಸ್ವರೂಪದಿಂದ ಕಂಡನೆಂದರೆ, ಶಿಷ್ಯನಿಗೂ ಕೂಡ ಬ್ರಹ್ಮಸ್ವರೂಪದ ವೃಷ್ಟಿಯೇ ಪ್ರಾಪ್ತವಾಗುತ್ತದೆ ಅವನು ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ಬ್ರಹ್ಮಸ್ವರೂಪವನ್ನೇ ಕಾಣುತ್ತಾನೆ ಮತ್ತು ಆತ್ಮೈಕ್ಯ ಭಾವನೆಯಿಂದ ಗುರುಚರಣವನ್ನು ಅಪ್ಪಿಕೊಳ್ಳುತ್ತಾನೆ ಹೀಗೆ ಬ್ರಹ್ಮಸ್ವರೂಪದಲ್ಲಿ ಏಕರೂಪವಾದರೂ, ಗುರುವಿನ ಸೇವೆಯನ್ನು ಮಾಡಲೇ ಬೇಕಾಗುತ್ತದೆ ಕರ್ಪುರವನ್ನು ನೀರಿನಲ್ಲಿ ಹಾಕಿದರೆ, ಅದು ಅದರಲ್ಲಿ ಕರಗಿಹೋಗುತ್ತದೆ, ಆದರೆ ನೀರನ್ನು ಸುವಾಸಿಕವನ್ನಾಗಿ ಮಾಡುತ್ತದೆ ಅದರಂತೆ 'ಅಹಂ' ಎಂಬುವ ಅಭಿಮಾನವು ಕರಗಿಹೋದರೂ, ಅವನು ಯಾವಾಗಲೂ ಗುರುಚರಣದ ಸೇವೆಯನ್ನು ಮಾಡುತ್ತಲೇ ಇರುತ್ತಾನೆ

## ಪ್ರಕರಣ ೩೨

(ನಿಷ್ಕಾಮ ಸ್ವಧರ್ಮಾಚರಣೆಯ ಮಹತ್ವ ಮತ್ತು ಗಾಯತ್ರೀ ಮಂತ್ರದ ಮಹತ್ವ)

ಅತಿಶಯ ಅನಾದಿ ಕಾಲದಿಂದ ನಡೆದು ಬಂದ, ನಿಜವಾಗಿಯೂ ಮೋಕ್ಷವನ್ನೀಯುವ, ಸ್ವಧರ್ಮಾಚರಣೆಯನ್ನು ಆಚರಿಸಿ ಕಾಮಿಕ ಜನರು ಸ್ವರ್ಗಾದಿ ಲೋಕ

ಗಳ ಇಚ್ಛೆಯನ್ನು ಮಾಡುತ್ತಾರೆ. ಆದರೆ ಅವರಿಗೆ ಸ್ವರ್ಗಲೋಕವು ಪ್ರಾಪ್ತವಾದರೂ ಕೂಡ ಪುನಃ ಅವರು ಮೃತ್ಯುಲೋಕದಲ್ಲಿ ಜನ್ಮ ತೆಗೆದುಕೊಳ್ಳಲೇಬೇಕಾಗುತ್ತದೆ ಈ ಪ್ರಕಾರವಾಗಿ ನನ್ನ ಭಕ್ತಿಯನ್ನು ಆಚರಿಸದೆ ಕಾಮಿಕ ಜನರು ಸ್ವಧರ್ಮವನ್ನು ನಾಶ ಮಾಡುತ್ತಾರೆ ಬ್ರಾಹ್ಮಣರಿಗೆ ಆನೆಯನ್ನು ದಾನ ಕೊಟ್ಟಲ್ಲಿ ಅದನ್ನು ಪೋಷಿಸುವರಾರೆಂದು ತಿಳಿದು ಅದನ್ನು ಮರಳಿ ಕೊಡುತ್ತಾರೆ ಮತ್ತು ಆದರ ಬದಲಾಗಿ, ಗ್ರಂಥಗಳನ್ನು ಹೊರುವದಕ್ಕೋಸ್ಕರ ಮುದಿಯಾದ ಎತ್ತನ್ನು ತೆಗೆದುಕೊಳ್ಳುತ್ತಾರೆ ಇದರಂತೆ ಬ್ರಾಹ್ಮಣರು ಸ್ವಧರ್ಮವನ್ನು ಅಲ್ಲಗಳೆಯುತ್ತಾರೆ ಮತ್ತು ಸ್ವರ್ಗದಲ್ಲಿ ಭಿಕ್ಷೆಯನ್ನು ಬೇಡುತ್ತಾರೆ, ಮನೆಯಲ್ಲಿ ಯಾರಾದರೂ ಕಾಮಧೇನುವನ್ನು ತಂದುಕೊಟ್ಟರೆ ಅದನ್ನು ತಮಗೆ ಸಾಕುವದಾಗುವದಿಲ್ಲವೆಂದು, ಅದನ್ನು ಕೊಟ್ಟು ಅದರ ಬದಲಾಗಿ ಮಜ್ಜಿಗೆಯನ್ನು ತೆಗೆದುಕೊಳ್ಳುತ್ತಾರೆ ಆದರೆ ಅದರಲ್ಲಿ ತಮ್ಮ ಹಾನಿ ಎಷ್ಟಾಯಿತೆಂಬುದು ಅವರಿಗೆ ತಿಳಿಯುವದಿಲ್ಲ ಅದರಂತೆ ಬ್ರಾಹ್ಮಣರಿಗೆ ನಾನು (ಶ್ರೀಕೃಷ್ಣನು) ಸ್ವತಂತ್ರವಾಗಿ ಗಾಯತ್ರೀ ಮಂತ್ರವನ್ನು ಕೊಟ್ಟಿದ್ದರೂ ಕೂಡ, ಅವರು ಅದನ್ನು ಅಲ್ಲಗಳೆದು ನಲ್ಲದ ಮಂತ್ರ ತಂತ್ರಗಳನ್ನೇ ಜಪಿಸುತ್ತಾರೆ ಮತ್ತು ಅವರು ಶೂದ್ರರಂತೆ ವರ್ತಿಸುತ್ತಾರೆ! ಬ್ರಾಹ್ಮಣರು ಸೌರ, ಶಾಕ್ತ ಗಾಣಪತ್ಯ ಮುಂತಾದ ಅನೇಕ ತರಹದ ದೀಕ್ಷೆಗಳನ್ನು ತೆಗೆದುಕೊಳ್ಳುತ್ತಾರೆ, ಆದರೆ ಯಾರೊಬ್ಬರೂ ಕೂಡ ಗಾಯತ್ರೀ ಮಂತ್ರದ ಅನುಷ್ಠಾನ ಮಾಡುವದಿಲ್ಲ! ಗಾಯತ್ರಿಯ ಅನುಷ್ಠಾನವಂತೂ ಇಲ್ಲವೇ ಇಲ್ಲ ಆದರೆ ಅದಕ್ಕಿಂತಲೂ ಬೇರೆಯದನ್ನೇ ಮಾಡುತ್ತಾರೆ ಅದು ಏನು? ಅಂದರೆ ಹಣದ ಸಲುವಾಗಿ ಬ್ರಾಹ್ಮಣರು ಆ ಗಾಯತ್ರೀ ಮಂತ್ರದ ಎಲ್ಲ ಫಲವನ್ನು ಮಾರಿಕೊಳ್ಳುತ್ತಾರೆ

ಅನಾಯಾಸವಾಗಿಯೇ ದೊರೆತ ಗಾಯತ್ರೀ ಮಂತ್ರದ ಮಹತ್ವವನ್ನು ಅವರು ಅರಿತುಕೊಳ್ಳುವದಿಲ್ಲ ಮತ್ತು ಮೂರ್ಖರ ಬಾಗಿಲಿಗೆ ಹೋಗಿ 'ನನಗೆ ದೀಕ್ಷೆಯನ್ನು ಕೊಡಿ' 'ನನಗೆ ದೀಕ್ಷೆಯನ್ನು ಕೊಡಿ' ಎಂದು ಉರಳಾಡುತ್ತಾರೆ ಹೀಗೆ ಅವರ ಸ್ಥಿತಿಯಾಗಿರುತ್ತದೆ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾದ ರಥದಲ್ಲಿ ಬೆದರು ಪುಕ್ಕನನ್ನು ಕುಳ್ಳಿರಿಸಿದಲ್ಲಿ, ಅವನು ಆ ರಥವನ್ನು ಬಿಟ್ಟು ಓಡಿ ಹೋಗುವದರಲ್ಲಿಯೇ ಸುಖವಿರುವದೆಂದು ತಿಳಿಯುತ್ತಾನೆ ಏಕೆಂದರೆ ಅವನಲ್ಲಿ ಯುದ್ಧ ಮಾಡುವ ಸಾಮರ್ಥ್ಯವೇ ಇರುವದಿಲ್ಲ ಅದರಂತೆ ವೇದರೂಪದಿಂದ ನಾರಾಯಣನಾದ ನಾನು ಹೃದಯದಲ್ಲಿರುವಾಗಲೂ, ಅದರ ಮಹತ್ವವನ್ನು ತಿಳಿಯದೇ ಅವರು ಮಾಡಿದ ವೇದದ ಪಾರಾಯಣವನ್ನು ಮಾರಿಬಿಡುತ್ತಾರೆ, ಸ್ವರ್ಗದ ಫಲೇಚ್ಛೆಯಿಂದ ಅನೇಕ ಯಜ್ಞಗಳನ್ನು ಮಾಡುತ್ತಾರೆ ತಾತ್ಪರ್ಯವೇನೆಂದರೆ ಕಾಮಿಕ ಕಲ್ಪನೆಯು ಸ್ವಧರ್ಮವನ್ನು ಸಂಪೂರ್ಣವಾಗಿ ಮುಳುಗಿಸುತ್ತದೆ ವೇದದಲ್ಲಿ ನಿರೂಪಿಸಿದ ನಿಜವನ್ನು ಅರಿಯದೆಯೇ, ವೇದವು ಸೂಚಿಸಿದ ಕರ್ಮಫಲವು ಸುಳ್ಳಾಗಿದೆಯೆಂದು ಬೇಕಾದ

ಹಾಗೆ ಬಡಬಡಿಸುವದೇ ನಿಜವೆಂದು ತಿಳಿಯುತ್ತಾರೆ, ಔಷಧವನ್ನು ಕುಡಿಯ ಬೇಕೆಂದು ತಾಯಿಯು ಮಗುವಿಗೆ ಒಂದು ಚಿಮುಟಿಗೆ ಸಕ್ಕರೆಯನ್ನು ಕೊಡುತ್ತಾಳೆ ಆದರೆ ನಿಜವಾಗಿ ನೋಡಿದಲ್ಲಿ ಸಕ್ಕರೆಯನ್ನು ಕೊಡುವ ಉದ್ದೇಶವೇನೂ ಮುಖ್ಯ ವಾಗಿರುವದಿಲ್ಲ ಆದರೆ ಹೊಟ್ಟೆಯಲ್ಲಿಯ ರೋಗವು ಗುಣವಾಗಬೇಕೆಂಬುವದೇ ಅವಳ ಕಾರಣವಾಗಿರುತ್ತದೆ—

—ಆ ಪ್ರಕಾರವಾಗಿ, ಸ್ವಧರ್ಮದಲ್ಲಿ ಅಭಿರುಚಿಯುಂಟಾಗಲೆಂದೇ ವೇದದಲ್ಲಿ ಕರ್ಮಫಲವನ್ನು ಹೇಳಿದ್ದಾರೆ ಏಕೆಂದರೆ ಸ್ವಧರ್ಮದಿಂದ ಚಿತ್ತದಲ್ಲಿಯ ಎಲ್ಲ ಮಲೀನತೆಯು ಇಲ್ಲದಂತಾಗುತ್ತದೆ ಆದರೆ ಸ್ವಧರ್ಮವನ್ನು ಬಿಟ್ಟು ಬಿಟ್ಟು, ಬರೀ ಕಾಮಿಕ ಕರ್ಮವನ್ನೇ ಮಾಡಿದಲ್ಲಿ, ಅದರಲ್ಲಿಯೂ ಕಷ್ಟಪಡದೇ, ಮನಸ್ಸಿನ ಕ್ಷುಲ್ಲಕ ವಾದ ಇಚ್ಛೆಯೂ ಪೂರ್ಣವಾಗುವದಿಲ್ಲ ಯಾವ ಹಣದಿಂದ ಅಮೃತವು ಕೈಗೆ ಸಿಕ್ಕುತ್ತದೆಯೋ, ಅದನ್ನೇ ವ್ಯಯ ಮಾಡಿ ಮದ್ಯವನು ಕೊಂಡಲ್ಲಿ, ಅಧರ್ಮವಾಗುತ್ತದೆ ಉನ್ಮಾದವೇರುತ್ತದೆ ಹುಚ್ಚನಂತೆ ಅವನು ಒರಳುತ್ತಾನೆ ಮತ್ತು ಅದರಿಂದ ಎಲ್ಲ ಜಗತ್ತು ಅವನ ಮೋರೆಯ ಮೇಲೆ ಉಗಳುತ್ತದೆ

—ತನ್ನ ಪತಿಯೊಡನೆ ಸಂಭೋಗಿಸಿದಲ್ಲಿ ಪತಿವ್ರತೆಗೆ ಪರಲೋಕ ಪ್ರಾಪ್ತಿ ಯೊಗುತ್ತದೆ ಆದರ ಅದೇ ಪರಪುರುಷನಲ್ಲಿ ಆಸಕ್ತಳಾದಲ್ಲಿ, ಅವಳು ಅಧೋಗತಿ ಹೊಂದುತ್ತಾಳೆ ನಾಲಿಗೆಯಿಂದ ದುರುಕ್ತಿಗಳನ್ನಾಡಿದರೆ ಯಮನ ಲತ್ತೆಯು ತಲೆಯ ಮೇಲೆ ಬೀಳುತ್ತದೆ ಆದರೆ ಅದೇ ನಾಲಿಗೆಯಿಂದ 'ರಾಮ ರಾಮ'ವೆಂದು ಅಂದರೆ, ಆ ಹರಿಭಕ್ತರನ್ನು ಕಂಡು ಯಮಧರ್ಮನೂ ಕೂಡ ನಡಗುತ್ತಾನೆ ಆದ್ದರಿಂದ ಉತ್ತಮ ಜನ್ಮ ಪ್ರಾಪ್ತವಾದಾಗ್ಯೂ ಕಾಮಿಕ ಕರ್ಮಗಳನ್ನಾಚರಿಸಿದಲ್ಲಿ ಬಹಳ ದುಃಖವನ್ನನುಭವಿಸಬೇಕಾಗುತ್ತದೆ ಮತ್ತು ಸಂಖ್ಯೆಯಿಲ್ಲದಷ್ಟು ಜನ್ಮ ಮರಣವನ್ನು ಸಹಿಸಬೇಕಾಗುತ್ತದೆ. ಆದರೆ ಅದೇ ದೇಹದಿಂದ ಸ್ವಧರ್ಮಾಚರಣೆಯನ್ನು ಮಾಡಿದಲ್ಲಿ, ಎಲ್ಲ ಕರ್ಮಗಳು ಲೋಪಹೊಂದಿ, ಜನ್ಮಮರಣದಿಂದ ಮುಕ್ತರಾಗುತ್ತಾರೆ ಆದರೆ ಇದರ ಇಂಗಿತವು ಬಹಳ ಜನರಿಗೆ ತಿಳಿಯುವದಿಲ್ಲ ಸ್ವಧರ್ಮದಿಂದ ಭಗವಂತನ ಭಕ್ತಿಯು ಸಾಧ್ಯವಾಗುತ್ತದೆ ಇದೇ ಅದರಲ್ಲಿಯ ಗುಹ್ಯ ಗೌಪ್ಯವಾಗಿದೆ ಉದ್ಧವಾ! ಅದನ್ನೇ ನಾನು ನಿನಗೆ ಸವಿಸ್ತಾರವಾಗಿ ಹೇಳುತ್ತೇನೆ ಸ್ವಧರ್ಮದಿಂದ ನಡೆಯುವ ಅವಶ್ಯಕತೆಯು ಬಹಳವಾಗಿರುವದು, ಆದರೆ ಅದರ ಫಲೇಚ್ಛೆಯನ್ನು ಬಿಡಬೇಕು ಅಂದರೆ ಸಂಕಲ್ಪವಿಲ್ಲದೆಯೇ ಅದನ್ನು ನನಗೆ ನಿಜವಾಗಿಯೂ ಅರ್ಪಣ ಮಾಡಿದಂತೆ ಆಗುತ್ತದೆ ಮನೆಯಲ್ಲಿಯ ನೀರಿನ ಹರಿವೆಯಲ್ಲಿ ಮುತ್ತಿನ ಎಳೆಗಳು ಸಿಕ್ಕಮೇಲೆ ತಾಮ್ರಪರ್ಣಿ ನದಿಯು ಸಮುದ್ರಕ್ಕೆ ಕೂಡುವ ಸ್ಥಳವನ್ನು ಏಕೆ ಹುಡುಕಬೇಕು?' ತಮ್ಮ ಮನೆಯಲ್ಲಿಯ ವೃಕ್ಷಗಳೇ ಕಲ್ಪವೃಕ್ಷದಂತೆ ಫಲವನ್ನಿತ್ತಲ್ಲಿ, ಅಮರಾವತಿಯ ಇಚ್ಛೆಯಿಂದ

ಹುಚ್ಚರಾಗಿ ಏಕೆ ಹೆಣಗಾಡಬೇಕು? ಇಲ್ಲವೆ ಸದ್ಗುರುವಿನ ತೀರ್ಥವನ್ನು ಸೇವಿಸಿದಲ್ಲಿ ಅತ್ಯಂತ ಪಾವಿತ್ರತೆಯು ಪ್ರಾಪ್ತವಾಗುತ್ತದೆ ಅಂದ ಮೇಲೆ ಅಲ್ಲಿಯ ಇಲ್ಲಿಯ ನೂರಾರು ತೀರ್ಥಗಳನ್ನು ಸಂದರ್ಶಿಸುವದರಲ್ಲಿ ಏನು ಲಾಭ? ಇಲ್ಲವೆ ಭಗವದ್ಭಾವನೆಯಿಂದ ತಂದೆಯನ್ನು ಪೂಜಿಸಿದಲ್ಲಿ, ಸುಲಭವಾಗಿ ಮೋಕ್ಷವುಂಟಾಗುತ್ತದೆ ಅಂದ ಮೇಲೆ ಜ್ಞಾನಿಗಳು ದೇವ ದೇವತೆಗಳ ಭಜನೆಯನ್ನು ಏತಕ್ಕಾಗಿ ಮಾಡಬೇಕು? ಅದರಂತೆ ಸ್ವಕರ್ಮವನ್ನು ಮಾಡುವಾಗಲೇ ನಿಷ್ಕರ್ಮತೆಯು ಪ್ರಾಪ್ತವಾಗುತ್ತದೆ ಆದರೆ ಅದೇ ಸ್ವಧರ್ಮವನ್ನು ಫಲೇಚ್ಛೆಯಿಂದ ಆಚರಿಸಿದಲ್ಲಿ, ಅವರು ತಮ್ಮ ನಿಜ ಸ್ವಾರ್ಥದಿಂದ ದೂರಾಗುತ್ತಾರೆ. ನಿರ್ವಿಕಲ್ಪ ಚಿತ್ತದಿಂದ ಸ್ವಧರ್ಮಾಚರಣೆಯನ್ನು ಮಾಡುವದೇ ನನ್ನ ಶುದ್ಧ 'ಭಜನೆ'ಯಾಗಿರುತ್ತದೆ ಆ ಭಜನೆಯಿಂದಲೇ ನಾನು ಸಂತುಷ್ಟನಾಗಿ, ನನ್ನ ಭಕ್ತನಿಗೆ ವಿವೇಕಯುಕ್ತ ವೈರಾಗ್ಯದ ಜ್ಞಾನವನ್ನು ಕೊಡುತ್ತೇನೆ ಆ ಜ್ಞಾನದಿಂದಲೇ ಬುದ್ಧಿಯು ನಿರ್ಮಲವಾಗುತ್ತದೆ ಚಿತ್ತಶುದ್ಧಿಯಾಯಿತೆಂದರೆ ಅದರಿಂದ ನನ್ನ 'ಶ್ರೇಷ್ಠ ಭಕ್ತಿ'ಯು ಉತ್ಪನ್ನವಾಗುತ್ತದೆ ಮತ್ತೆ ಉದ್ಧವಾ! ಆ ಭಕ್ತಿಯಿಂದಲೇ ಭಕ್ತನಿಗೆ ನನ್ನ ಉತ್ತಮ ಸ್ವರೂಪದ ಪ್ರಾಪ್ತಿಯಾಗುತ್ತದೆ ಆದ್ದರಿಂದ ನಿಷ್ಕಾಮ ಸ್ವಧರ್ಮಾಚರಣೆಯೇ ನನ್ನ ಉತ್ತಮ ಭಜನೆಯಾಗಿರುವದು ಆ ಭಜನೆಯಿಂದಲೇ ಉತ್ತಮ ಭಕ್ತನಿದ್ದವನು ಸ್ವತಃ ಪುರುಷೋತ್ತಮನಾಗುತ್ತಾನೆ ಇದರಂತೆ ನಮ್ಮ ಸ್ವಧರ್ಮಾಚರಣೆಯಿಂದಲೇ ನಮಗೆ ಮುಕ್ತಿಯು ಸಿಗುತ್ತದೆಂಬುದನ್ನು ಶ್ರೀಕೃಷ್ಣನು ವಿಸ್ತರಿಸಿ ಹೇಳಿದನು

## ಪ್ರಕರಣ ೩೩

(ನಿಜಭಕ್ತಿಯು ದೃಢವಾಗಲು ಮಾಡಿದ ವಿಸ್ತಾರವು) ನಿಮ್ಮ ಅಂತಃಕರಣವನ್ನು ನನಗೆ (ಶ್ರೀಕೃಷ್ಣನಿಗೆ) ಅರ್ಪಣ ಮಾಡಿದಲ್ಲಿ, ನನ್ನ ಭಕ್ತಿಯು ಉಲ್ಹಾಸದಿಂದ ಬೆಳೆಯುತ್ತದೆಯೆಂಬುದನ್ನು ನಾನು ಈ ಮೊದಲೇ ನಿಮಗೆ ಹೇಳಿದ್ದೇನೆ ಈಗ ಮನಸ್ಸನ್ನು ನನ್ನ ಸ್ವರೂಪದಲ್ಲಿ ಅರ್ಪಿಸುವ ಸುಲಭವಾದ ಉಪಾಯವನ್ನು ಹೇಳುವೆನು. ಅದನ್ನು ಚೆನ್ನಾಗಿ ಲಕ್ಷದಲ್ಲಿಡು ನನ್ನ ನಾಮಸ್ಮರಣ ಮಾಡುವದರಿಂದ ಎಲ್ಲ ಪಾಪದ ನಾಶವಾಗುತ್ತದೆ ಮನಸ್ಸಿನಲ್ಲಿ ಯಾವದಾದರೊಂದು ಇಚ್ಛೆಯನ್ನು ಹಿಡಿದು ನಾಮ ಸ್ಮರಣೆಯನ್ನು ಮಾಡಿದಲ್ಲಿ, ಆ ನಾಮವೇ ನಿಮ್ಮ ಎಲ್ಲ ಇಚ್ಛೆಯನ್ನು ಪೂರ್ತಿಗೊಳಿಸುತ್ತದೆ ಮತ್ತು ನಿರಿಚ್ಛೆಯಿಂದ ನಾಮಸ್ಮರಣೆ ಮಾಡಿದಲ್ಲಿ ಅದು ಎಲ್ಲ ಪಾಪಗಳನ್ನು ಸುಟ್ಟು ಬೂದಿ ಮಾಡುತ್ತದೆ ಮತ್ತು ಪಾಪವು ಸುಟ್ಟುಹೋಯಿತೆಂದರೆ, ರಾಜಸ ಮತ್ತು ತಮೋ ಗುಣಗಳನ್ನು ಜಯಿಸಿ, ಧರ್ಮಪರಾಯಣ ಮತ್ತು ಧಾರ್ಮಿಕವಾದಂತಹ, ಸ್ವಧರ್ಮನಿಷ್ಠ ಸತ್ವಗುಣವು ತಾನಾಗಿಯೇ ಬೆಳೆಯುತ್ತದೆ ಸತ್ವಗುಣದ ಸಹಾಯದಿಂದ ವೈರಾಗ್ಯವು ದೃಢವಾಗುತ್ತದೆ ಅದರಿಂದ ವಿಷಯಗಳು ನಷ್ಟವಾಗುತ್ತವೆ

ಹಾಗೂ ಆತ್ಮಜ್ಞಾನವು ಪ್ರಕಟವಾಗುತ್ತದೆ ವಿವೇಕ ಸಹಿತವಾಗಿ ಜ್ಞಾನವು ವೃದ್ಧಿಂಗತ ವಾಯಿತೆಂದರೆ ಸ್ವರೂಪದಲ್ಲಿ ಅನುಸಂಧಾನವು ಸ್ಥಿರವಾಗುತ್ತದೆ ಮತ್ತು ಶಾಂತಿ ಸಮಾಧಾನವು ಸಿಗುತ್ತದೆ ಆವಾಗ್ಗೆ ಮನಸ್ಸು ನನ್ನಲ್ಲಿ ಅರ್ಪಿತವಾಗುತ್ತದೆ. ಮನಸ್ಸು ನನ್ನಲ್ಲಿ ಅರ್ಪಿತವಾಯಿತೆಂದರೆ ನನ್ನ ನಿಜಭಕ್ತಿಯು ಪ್ರಕಟವಾಗುತ್ತದೆ ಇದರ ಎಲ್ಲ ನಿರೂಪಣೆಯನ್ನು ನಾನು ಹಿಂದಿನ ಶ್ಲೋಕದಲ್ಲಿ ಹೇಳಿರುವೆನು ಸಂಪೂರ್ಣವಾಗಿ, ನನ್ನ ನಿಜಭಕ್ತಿಯ ಪ್ರಾಪ್ತಿಯಾಯಿತೆಂದರೆ, ಭಕ್ತನಿಗೆ, ಅವನು ಕೇಳದೆಯೇ ಅಷ್ಟಮಹಾಸಿದ್ಧಿಗಳು ತಾವಾಗಿಯೇ ಅವನ ಅಂಗಳದಲ್ಲಿ, ಕೈಮುಗಿದು ನಿಲ್ಲುತ್ತವೆ ಆ ಸಿದ್ಧಿಗಳತ್ತ ಯಾವನು ಕಣ್ಣೆತ್ತಿಕೂಡ ನೋಡುವದಿಲ್ಲವೋ, ಅವನಿಗೆ ಅಪ್ರಾಪ್ತವಾದ ವಸ್ತು ಯಾವದಿರುವದು? ನನ್ನ ಭಕ್ತನು ನನ್ನಲ್ಲಿ ಐಕ್ಯಹೊಂದಿರುವದರಿಂದ, ಅವನಿಗೆ ನನ್ನ ಎಲ್ಲ ಅಧಿಕಾರವು (ಸತ್ತೆಯು) ಲಭಿಸುತ್ತದೆ ಇಂತಹ ನನ್ನ ಭಕ್ತಿಯನ್ನು ಪ್ರಾಪ್ತಮಾಡಿಕೊಳ್ಳದೇ ಮತ್ತು ನನ್ನ ಆತ್ಮಸ್ಥಿತಿಯನ್ನು ಹೊಂದದೇ, ಯಾವನು ವಿಷಯಾಸಕ್ತಿಯಿಂದ ವರ್ತಿಸುವನೋ, ಅವನು ದೊಡ್ಡ ಅನರ್ಥಕ್ಕೆ ಗುರಿಯಾಗುತ್ತಾನೆ

## ಪ್ರಕರಣ ೩೪

ಹಗಲಿರುಳೂ ಆಯುಷ್ಯವು ಕ್ಷೀಣವಾಗುತ್ತಲೇ ಇರುತ್ತದೆ ಕಲಿಕಾಳನ ವೇಗ ವಂತೂ ಬಹಳ ಅದ್ಭುತವಾಗಿರುತ್ತದೆ ಇದೊಂದು ನಿತ್ಯ ನೂತನ ರೋಗವೇ ಮೈಗೆ ಅಂಟಿಕೊಂಡಿದೆ ಕಾಳನು ದಿನಗಳುರುಳಿದಂತೆ ಆಯುಷ್ಯವನ್ನು ಗ್ರಾಸ ಮಾಡುತ್ತಲೇ ಇರುತ್ತಾನೆ ಇದರಂತೆ ಆಯುಷ್ಯದ ನಾಶವಾಗುತ್ತದೆಯೆಂದು ಗಮನಿಸಿ ಮತ್ತು ನರದೇಹವು ಎಂದಾದರೊಂದು ದಿನ ನಾಶ ಹೊಂದುವದಿದೆಯೆಂಬುದನ್ನು ಲಕ್ಷಿಸಿ, ಅವನು ಮನೆ, ಮಕ್ಕಳು, ಹೆಂಡತಿಯ ವಿಷಯದಲ್ಲಿ ಔದಾಸೀನತೆಯನ್ನು ಹೊಂದುತ್ತಾನೆ ದೇಹದ ಅಶಾಶ್ವತೆಯನ್ನು ಲಕ್ಷಿಸಿ ದೇಹಾಭಿಮಾನವನ್ನು ಬಿಡಲು ಮತ್ತು ಭಕ್ತಿಜ್ಞಾನ ವನ್ನು ಸಂಪಾದಿಸಲು ಅವನು ಅತಿಶಯ ಎಚ್ಚರದಿಂದಿರುತ್ತಾನೆ ದೇಹಾಭಿಮಾನವನ್ನು ಬಿಡದೆ ಹೋದಲ್ಲಿ, ಮರಣವು ನಿಶ್ಚಿತವೆಂದು ತಿಳಿಯುತ್ತಾನೆ ಹಾಗೂ ಅದರ ಮರಣದ ಭಯದಿಂದ ಅವನ ಮೈಯಲ್ಲಿ ನಡಗು ಹುಟ್ಟಿ, ಅವನು ವೈರಾಗ್ಯವನ್ನು ಧರಿಸುತ್ತಾನೆ ವೈರಾಗ್ಯದಿಂದ ಭಕ್ತಿಯನ್ನು ಮಾಡಿದರೆ, ದೇಹಾಭಿಮಾನವು ನಷ್ಟವಾಗುತ್ತದೆ ಮತ್ತು ಜ್ಞಾನದ ಐಶ್ವರ್ಯವು ಪ್ರಾಪ್ತವಾಗುತ್ತದೆ ಹಾಗೂ ನಾಲ್ಕು ಮುಕ್ತಿಗಳು ಕಾಲಿಗೆರಗು ತ್ತವೆ ಈ ಪ್ರಕಾರವಾಗಿ ನಿಜಾತ್ಮಪ್ರಾಪ್ತಿಯಾಯಿತೆಂದರೆ, ಪ್ರವೃತ್ತಿಯು ತಾನಾಗಿಯೇ ಇಲ್ಲದಂತಾಗುತ್ತದೆ ಮತ್ತು ನಿವೃತ್ತಿಯು ನಿವೃತ್ತಿಯಾಗುತ್ತದೆ ಆಮೇಲೆ ಸಂಸಾರವು ತನ್ನಷ್ಟಕ್ಕೆ ತಾನೇ ಶಾಂತವಾಗುತ್ತದೆ ಹೀಗೆ ಇಂತಹ ನರದೇಹವು ಲಭಿಸಿದಾಗಲೂ ಕೂಡ ಮೂರ್ಖ ಜನರು ಆತ್ಮಾನಂದ ಸುಖವನ್ನು ಪ್ರಾಪ್ತಮಾಡಿಕೊಳ್ಳುವದಿಲ್ಲವೆಂದು

ಶ್ರೀಕೃಷ್ಣನು ಅವರ ನಿಂದೆಯನ್ನು ಮಾಡುತ್ತಾನೆ

ಎಂಬತ್ತುನಾಲ್ಕು ಲಕ್ಷ ಜೀವಯೋನಿಗಳಿರುತ್ತವೆ ಅದರಲ್ಲಿ ಮಾನವನೊಬ್ಬನೇ ಬ್ರಹ್ಮಜ್ಞಾನವನ್ನು ಪ್ರಾಪ್ತಮಾಡಿಕೊಳ್ಳಲು ಯೋಗ್ಯನಿರುತ್ತಾನೆ ನರದೇಹದಲ್ಲಿಯೇ ನನ್ನ ಪ್ರಾಪ್ತಿಯಾಗುತ್ತದೆಯೆಂದು ಈ ದೇಹಕ್ಕೆ 'ಆದ್ಯ' ಎಂದು ಅಂದಿದ್ದಾರೆ ಇದರ (ನರದೇಹದ) ಪ್ರಾಪ್ತಿಯಾಗುವದು ಬಹಳ ದುಸ್ತರವಾಗಿದೆ ಬಹಳ ಭಾಗ್ಯದಿಂದಲೇ ನರದೇಹದ ಪ್ರಾಪ್ತಿಯಾಗುತ್ತದೆ ಸದೃಢ ಅಂದರೆ ಎಲ್ಲ ಅವಯವಗಳಿದ್ದವನು ಯಾವದೂ ವ್ಯಂಗ್ಯವಿಲ್ಲದವನು, ಕಿವುಡನಲ್ಲ, ಕುರುಡನಲ್ಲ, ಹೆಳವನಲ್ಲ, ಮೂಕನಲ್ಲ, ಹೀಗೆ ಸರ್ವಾಂಗದಿಂದ ಸಂಪೂರ್ಣನಾಗಿದ್ದವನು ಮತ್ತು ಭರತ ಖಂಡದಲ್ಲಿ ಜನಿಸುವ ದೆಂದರೆ, ಅದು ಅವನ ಭಾಗ್ಯವೇ ಸರಿ ಅದರಲ್ಲಿಯೂ ಅಂತಃಕರಣದಲ್ಲಿ ಪರಮಾರ್ಥದ ವಿಷಯದಲ್ಲಿ ವಿವೇಕವಿದ್ದರಂತೂ, ಪರಮಾತ್ಮನಾದ ನಾನು ಅವನ ಆಜ್ಞಾಧಾರಕ ನಾಗುತ್ತೇನೆ ಪ್ರತ್ಯಕ್ಷ ಪರಮಾತ್ಮನಾದ ನಾನೇ ಅವನ ಆಜ್ಞಾಧಾರಕನಾದ ಮೇಲೆ, ಇತರ ದೇವ ದೇವತೆಗಳ ಮತ್ತು ಮನುಷ್ಯರ ಗತಿ ಏನು? ಆದರೆ ಈ ನರದೇಹವು ಮತ್ತೆ ಪುನಃ ಪುನಃ ಪ್ರಾಪ್ತವಾಗುವದಿಲ್ಲ ಏಕೆಂದರೆ ನರದೇಹವು ಸಿಗುವದು ಬಹಳ ದುಸ್ತರ ವಾಗಿದೆ ಪುಣ್ಯ ಮತ್ತು ಪಾಪವನ್ನು ಸರಿಯಾಗಿ ತೂಗಿದಲ್ಲಿ, ಯಾವಾಗ್ಗೆ ಎರಡೂ (ಪುಣ್ಯ ಮತ್ತು ಪಾಪ) ಸರಿ ಸಮಾನವಾಗುವವೋ ಆವಾಗಲೇ ನರದೇಹವು ಪ್ರಾಪ್ತ ವಾಗುತ್ತದೆಂಬುದು ಲಕ್ಷದಲ್ಲಿರಲಿ ಇಂತಹ ನರದೇಹವು ಮತ್ತೆ ನಮಗೆ ಪ್ರಾಪ್ತ ವಾಗಲೆಂದು ಯಾರೂ ತೂಕ ಮಾಡಿ ಕರ್ಮವನ್ನಾಚರಿಸಲಾರರು ಪುಣ್ಯದ ತೂಕವು ಹೆಚ್ಚಿಗೆಯಾಯಿತೆಂದರೆ ಸ್ವರ್ಗಸುಖವನ್ನು ಅನುಭವಿಸಬೇಕಾಗುವದು ಮತ್ತು ಪಾಪದ ತೂಕವು ಹೆಚ್ಚಿಗೆಯಾಯಿತೆಂದರೆ ನರಕ ಪಾಸನನ್ನನುಭವಿಸಬೇಕಾಗುವದು ಹೀಗೆ ಕರ್ಮದ ರೀತಿಯು ಗಹನವಾಗಿದೆ ಹೀಗೆ ಕಾಕತಾಲೀಯ ನ್ಯಾಯದಂತೆ ಸಂಸಾರ ಸಮುದ್ರವನ್ನು ಪಾರುಮಾಡಲು ಸಿಕ್ಕ ಹಡಗವು ಮಾನವನಾಗಿರುವನು ಈ ನರದೇಹವು ಯಾವಾಗಲಾದರೊಮ್ಮೆ ತಪ್ಪಿ ಪಾಲಿಗೆ ಬರುತ್ತದೆ ಸುಲಭವೆಂದರೆ ಅವಿಕಳ ಪ 'ಸುಕಲ್ಪ'ವೆಂದರೆ ವಿಚಾರವಂತ, ಅದನ್ನು(ಪೈಲ ತೀರಕ್ಕೆ ಆಚೆಯ ದಂಡೆಗೆ) ಮುಟ್ಟಿಸುವ ಕುಶಲ ನಾವಿಕನು ಗುರುವೊಬ್ಬನೇ ಇರುತ್ತಾನ—

—ಗುರುವು ತನ್ನ ನಿಜವಾದ ಗುಹ್ಯವನ್ನು ಕಿವಿಯಲ್ಲಿ ಹೇಳುತ್ತಾನೆಂದು ಅವನಿಗೆ 'ಕರ್ಣಧಾರ'ನೆಂದು ಅನ್ನುತ್ತಾರೆ ಅವನು ಕಿವಿಯಲ್ಲಿ ಮಹಾವಾಕ್ಯದ ಉಪದೇಶವನ್ನು ಮಾಡಿದ ತಕ್ಷಣ ಶಿಷ್ಯನ ಉದ್ಧಾರವನ್ನು ಮಾಡುವವನಾದುದರಿಂದ, ಅವನೇ ಸರ್ವಸ್ವ ಯಾಗಿ ಕರ್ಣಧಾರನಿರುವನು ಸಂಸಾರಸಾಗರದಲ್ಲಿ ನರದೇಹವೇ ಹಡಗವಾಗಿದೆ ಅಲ್ಲಿ ಸದ್ಗುರುವೇ ಕರ್ಣಧಾರನೆಂದರೆ ನಾವಾಡಿಗನಿರುವನು ಹಾಗೂ (ಪೈಲ ತೀರಕ್ಕೆ) ಆಚೆಯ ದಂಡೆಗೆ ಒಯ್ದು ಮುಟ್ಟಿಸಲು ಅನುಕೂಲವಾಗಿ ಬೀಸುವ ಗಾಳಿಯು ನಾನು ಶ್ರೀಹರಿಯಾಗಿರುವೆನು ಕರ್ಣಧಾರನಾದ ಗುರುವು ಎಷ್ಟು ಕುಶಲನಾಗಿರುವನೆಂದು

ಹೇಳಲಿ? ತಿರುಗಣಿ ಮಡವು ಧಬಧಬೆ ಧ್ವನಿಗೊಡುವ ನೀರನ್ನು, ಹೊಯ್ದಾಡುವ ನೀರನ್ನು ವಿಕಲ್ಪದ ಬೊಬ್ಬೆಯನ್ನು ಮತ್ತು ಮೇಲಿಂದ ಮೇಲೆ ಬರುವ ನೀರಿನ ತೆರೆಯನ್ನು ತಪ್ಪಿಸಿ ತನ್ನ ನೌಕೆಯನ್ನು ಜೋರಾಗಿ ಮುಂದೆ ಸಾಗಿಸುತ್ತಾನೆ ವಿವೇಕದ ಹುಟ್ಟಿನಿಂದ ಕರ್ಮಾಕರ್ಮದ ನೀರನ್ನು ಬದಿಗೆಸರಿಸಿ ಮತ್ತು ಭಜನರೂಪ ಹಾಯಿಪಟದ ಬಲದಿಂದ ಹಡಗವು ಬಹಳ ತ್ವರೆಯಿಂದ ಹೋಗುತ್ತದೆ ಕಾಮಕ್ರೋಧರೂಪ ದೊಡ್ಡ ದೊಡ್ಡ ಮೀನುಗಳು ಬೇಟೆಗಾಗಿ ಹಂಚಿಕೆಯಿಂದ ಕುಳಿತಿರುತ್ತವೆ ಅವುಗಳ ಮೇಲೆ ಶಾಂತಿರೂಪ ಜಾಲದ ಬಲೆಯನ್ನು ಬೀಸಿ ತನ್ನ ಹಡಗವನ್ನು ಒಳ್ಳೇ ಸಡಗರದಿಂದ ಮುಂದೆ ಸಾಗಿಸುತ್ತಾನೆ ದಾರಿಯಲ್ಲಿ ಸಾರೂಪ್ಯ ಮುಂತಾದ ಮುಕ್ತಿಯ ಬಂದರುಗಳು ಬರುತ್ತವೆ ಆವಾಗ್ಗೆ ಆ ಹಡಗದಲ್ಲಿ ಅನಾಹತ ಧ್ವನಿಯ ಜಯಜಯಕಾರವು ತುತೂರಿ ವಾದ್ಯಗಳಿಂದ ಗರ್ಜಿಸುತ್ತದೆ ಸಲೋಕತೆಯ ಪೇಟೆಯಲ್ಲಿ ಹೋದಲ್ಲಿ ಅದು (ಹಡಗವು) ಬುಡಮೇಲಾಗಬಹುದು ಇಲ್ಲವೆ ಸಮೀಪತೆಯ ದಾರಿಗೆ ಹೋದಲ್ಲಿ ಅದು (ಹಡಗವು) ಎರಡೂ ಕಡೆಗೂ ಹೊಯ್ದಾಡಬಹುದೆಂದು ಅದನ್ನು ಸ್ವರೂಪತೆಯಲ್ಲಿಯೇ ಸ್ಥಿರಗೊಳಿಸ ಬೇಕು ಅಲ್ಲಿ ದಟ್ಟಣೆಯು ಬಹಳವಾಗಿರುತ್ತದೆಯೆಂದು ಗಮನಿಸಿ ಆ ಹಡಗವನ್ನು ಸಾಯುಜ್ಯದತ್ತ ನೂಕುತ್ತಾರೆ ಅದು ಧಾರ್ಮಿಕ ಜನರ ನಿರ್ಮಲವಾದ ಧರ್ಮದ ಪೇಟೆಯೇ ಇರುತ್ತದೆ ಅಲ್ಲಿ ಸುಖಕ್ಕಾಗಿ ಪ್ರಯತ್ನಿಸಬೇಕಾಗಿಲ್ಲ ಎಲ್ಲ ವಸ್ತುಗಳು ಶುದ್ಧವಾಗಿರುತ್ತವ ಬೇಕಾದ ವಸ್ತುವನ್ನು ಕೂಡಲೇ ಕೊಡಬಹುದು ಇಲ್ಲವೆ ತೆಗೆದು ಕೊಳ್ಳಬಹುದು ಇಂತಹ ದುರ್ಬಲವಾದ ನರದೇಹದ ಹಡಗವಿದ್ದು ಅದರ ನಾವಾಡಿಗನು, ಶ್ರೀ ಗುರುರೂಪದಿಂದ ನಾನೇ (ಕರ್ಣಧಾರನು) ಆಗಿರುವೆನು ಈ ಹಡಗದ ಸಹಾಯ ದಿಂದ ಯಾರು ಸಂಸಾರ ಸಾಗರವನ್ನು ಪಾರುಮಾಡುವದಿಲ್ಲವೋ, ಅವರನ್ನು ಆತ್ಮಘಾತ ಮಾಡುವವರೆಂದು ತಿಳಿಯಬೇಕು ಮುಂದೆ ಕೋಟಿಕಲ್ಪದವರೆಗೆ, ನರಕಯಾತನೆ ಯನ್ನು ಅನುಭವಿಸುವದಕ್ಕೋಸ್ಕರ, ಈ ನರದೇಹವನ್ನು ವಿಷಯ ವಾಸನೆಗಳಲ್ಲಿ ವ್ಯಯ ಮಾಡಿದಲ್ಲಿ, ತನ್ನ ಕೈಯಿಂದಲೇ ತನ್ನ ಎದೆಯಲ್ಲಿ ಶಸ್ತ್ರವನ್ನು ಚುಚ್ಚಿಕೊಂಡಂತೆಯೇ ಆಗುತ್ತದೆ ಆಚೆಯ ದಂಡೆಗೆ ಹೋಗುವದು ಅವಶ್ಯವಿರುವಾಗಲೂ, ನಾವನ್ನು ಒಡೆದು ಅದರ ಬೆಂಕಿಯಲ್ಲಿ ಕಡಲೆ ಪುರಾಣಿಯನ್ನು, ಹುರಿದು ತಿನ್ನುವಂತೆ, ಇಲ್ಲವೇ ಬಹಳ ಜಾಣನಾದವನು ಛಳಿಗೆ ನಡುಗಿ, ಹೊದಿಕೆಗಳನ್ನು ಸುಟ್ಟು ಕಾಸಿಕೊಳ್ಳುವಂತೆ ಅವರ ಸ್ಥಿತಿಯಾಗುತ್ತದೆ—

—ಪುಕ್ಕಟೆಯಾಗಿ ನರದೇಹವನ್ನು ಕಳೆದುಕೊಳ್ಳುತ್ತಾರೆ ಅದರಿಂದ ಮುಂದೆ ಕಠಿಣವಾದ ದುಃಖದ ಗುಡ್ಡವೇ ಬಂದೊದಗುತ್ತದೆ. ನಿಜವಾಗಿ ನೋಡಿದಲ್ಲಿ, ಎಲ್ಲ ಯೋನಿಗಳಲ್ಲಿಯೂ ವಿಷಯಾಸಕ್ತಿಯು ಎಲ್ಲ ಪ್ರಾಣಿಗಳಿಗೂ ಇದ್ದೇಇರುತ್ತದೆ ನರದೇಹ ದಲ್ಲಿಯೂ ವಿಷಯಾಸಕ್ತಿಯು ಹಾಗೆಯೇ ಉಳಿದರೆ, ಅವರು ಮಣ್ಣು ಮುಕ್ಕಿದರೆಂದು ತಿಳಿಯಬೇಕು ಇಂತಹ ಉತ್ತಮವಾದ ನರದೇಹವು ಪ್ರಾಪ್ತವಾದಾಗಲೂ, ಯಾವನು

ಸಂಸಾರ ಸಮುದ್ರದ ಆಚೆಯ ದಂಡೆಗೆ ಹೋಗುವದಿಲ್ಲವೋ, ಉದ್ಧವಾ! ಅವನು ನಿಜವಾಗಲೂ ಆತ್ಮಘಾತಕಿಯೆಂದು ತಿಳಿಯಬೇಕು ಕೋಟ್ಯಾನುಕೋಟಿ ಬ್ರಹ್ಮಹತ್ಯೆಗಳನ್ನು ಇಲ್ಲವೇ ಗೋಹತ್ಯೆಗಳನ್ನು ಮಾಡಿದರೂ, ಶಾಸ್ತ್ರಗಳಲ್ಲಿ ಅದಕ್ಕೆ ಪ್ರಾಯಶ್ಚಿತ ವಿದೆ, ಆದರ ಯಾವನು ಆತ್ಮಹತ್ಯೆಯನ್ನೇ ಮಾಡುವನೋ ಅವನಿಗೆ ಪ್ರಾಯಶ್ಚಿತ ವಿರುವದಿಲ್ಲ ಏಕೆಂದರೆ ಯಾವನು ಆತ್ಮಹತ್ಯೆಯನ್ನು ಮಾಡಿ ಮರಣಹೊಂದುವನೋ, ಅವನು ತಕ್ಷಣ ನರಕಕ್ಕೆ ಹೋಗುತ್ತಾನೆ ಅಂದಮೇಲೆ ಪ್ರಾಯಶ್ಚಿತ ತೆಗೆದುಕೊಳ್ಳಲು ಅಲ್ಲಿ ಯಾರು ಉಳಿಯುತ್ತಾರೆ? ಮತ್ತು ಸಂಸ್ಕಾರ್ಥವನ್ನಾದರೂ, ಯಾರಿಗೆಹೇಳಬೇಕು? ಅಮೃತವನ್ನು ಮಾರಿ, ಅದರ ಬದಲು ಗಂಜಿಯನ್ನು ಕುಡಿದಂತೆ, ನರದೇಹವು ಪ್ರಾಪ್ತವಾದಾಗಲೂ ವಿಷಯಗಳನ್ನೇ ಭೋಗಿಸಿದಲ್ಲಿ, ಅವರ ಜೀವನದ ನಿಜವಾದ ಸ್ವಾರ್ಥವು ಮುಳುಗಿ ಅವರು ಸಂಸಾರಬಂಧನದಲ್ಲಿ ಹೆಚ್ಚಿಗೆ ತೊಡಗುತ್ತಾರೆ ಉತ್ತಮ ಶರೀರವು ಪ್ರಾಪ್ತವಾದಾಗಲೂ, ಅಸಂಖ್ಯ ಜನರು ವಿಷಯಾಸಕ್ತಿಯಿಂದ ನರಕಕ್ಕೆ ಹೋಗುತ್ತಾರೆಂದು ಶ್ರೀಕೃಷ್ಣನು ಹೇಳಿದನು

## ಪ್ರಕರಣ ೩೫

ಆತ್ಮಸ್ವರೂಪದ ಅನುಸಂಧಾನ ಮಾಡುವಾಗ, ಮನಸ್ಸು ತನ್ನ ಚಂಚಲ ಸ್ವಭಾವಕ್ಕನುಸರಿಸಿ ತನ್ನ ಗುಣಧರ್ಮವನ್ನು ಬಿಡದಿದ್ದರೆ, ಇಲ್ಲವೇ ಸಾಧಕನಿಗೆ ಆಲಸ್ಯದಿಂದ ಜಾಡ್ಯ ಉಂಟಾದರೆ, ಅಥವಾ ವಿಷಯ ಸುಖದ ನೆನವಾಯಿತೆಂದರೆ, ತನ್ನ ಚಂಚಲ ಸ್ವಭಾವದಂತೆ, ಅವನ ಮನಸ್ಸು ಸ್ವರೂಪದಿಂದ ಪಲಾಯನ ಮಾಡುತ್ತದೆ ಇಂತಹ ಸಮಯದಲ್ಲಿ ಅವನು ಆಸನವನ್ನು ಸ್ಥಿರಗೊಳಿಸಿ, ಸ್ವತಃ ಎಚ್ಚರದಿಂದಿದ್ದು, ಸದ್ಗುರು ಚರಣವನ್ನು ಸ್ಮರಿಸಿ ಸ್ವರೂಪದಲ್ಲಿಯೇ ಮನಸ್ಸನ್ನು ಇರಿಸಲು ಪ್ರಯತ್ನಿಸಬೇಕು. ಮನಸ್ಸಿಗೆ ವಿಷಯದ ಆಹಾರವನ್ನು ಕೊಡದಿದ್ದರೆ, ಅದು ಹಟದಿಂದ ಕ್ಷುಬ್ಧವಾಗುತ್ತದೆ ಇಂತಹ ಸಮಯದಲ್ಲಿ ಸ್ವರೂಪಾನು ಸಂಧಾನವನ್ನು ಬಿಡದೆ, ವಿಧಿ ವಿಧಾನೋಕ್ತ ಅನ್ನ ನೀರನ್ನು ಕೊಡುತ್ತಿರಬೇಕು (ಸಂದೇಹ, 'ಹಾವಿಗೆ ಅಮೃತವನ್ನು ಕುಡಿಸಿದಲ್ಲಿ ಅದು ಪುನಃ ವಿಷವೇ ಆಗುತ್ತದೆ, ಅದರಂತೆ ಮನಸ್ಸಿಗೆ ವಿಷಯ ಸುಖವನ್ನು ಕೊಟ್ಟಲ್ಲಿ, ಅದು ಮೊದಲಿಗಿಂತಲೂ ಹೆಚ್ಚಿಗೆ ಕ್ಷುಬ್ಧವಾಗುತ್ತದೆ' ಆದ್ದರಿಂದ, ಅದು (ಮನಸ್ಸು) ನಮ್ಮ ಸ್ವಾಧೀನವಾಗಿರುವಂತೆಯೇ ಅದಕ್ಕೆ ವಿಷಯಭೋಗವನ್ನು ಕೊಡಬೇಕು ಅದನ್ನೇ ಶ್ರೀಕೃಷ್ಣನು ಹೇಳುತ್ತಿದ್ದಾನೆ—

—ಮನಸ್ಸನ್ನು ನಡಿಲು ಬಿಡದೆ, ಸ್ವರೂಪಾನುಸಂಧಾನವನ್ನೂ ಬಿಡದೆ, ಮನಸ್ಸಿಗೆ ಅನ್ನ ನೀರು ಮತ್ತು ನಿದ್ರೆಯನ್ನು ಕೊಡುವದೇ ನಿಜವಾಗಲೂ ಹಿತಕರವಾಗಿರುತ್ತದೆ.

ಸಾಧಕನು ಸಾಧನೆಯನ್ನು ಮಾಡಿ ಇಂದ್ರಿಯಗಳನ್ನು ಮತ್ತು ಪ್ರಾಣವನ್ನು ಜಯಸಿದರೂ, ಮನಸ್ಸನ್ನು ಸಡಿಲು ಬಿಡಲೇಬಾರದು ಸ್ವರೂಪದಲ್ಲಿಯೇ ಅದನ್ನು ನೇರವಾಗಿ ಸ್ಥಿರಗೊಳಿಸಬೇಕು ಯಾವನು ಮನಸ್ಸನ್ನು ನಂಬುವನೋ, ಅವನನ್ನು ಕಾಮಕ್ರೋಧಗಳು ಬಯಲಿಗೆಳೆಯುತ್ತವೆ, ಸಂಕಲ್ಪ ವಿಕಲ್ಪಗಳು ಅವನನ್ನು ಹಾಳು ಮಾಡುತ್ತವೆ ಮತ್ತು ಮಹಾಮೋಹವು ಅವನನ್ನು ನುಂಗಿ ಬಿಡುತ್ತದೆ ಅದಕ್ಕಾಗಿ ಮನಸ್ಸು ಬಲಾಢ್ಯವಿರುವದೆಂಬುದನ್ನು ಗಮನಿಸಿ, ವಿವೇಕದ ಸರವಳಿಯನ್ನು ಅದರ ಕಾಲಿಗೆ ಕಟ್ಟಬೇಕು ಅಂದರೆ ಅದು ಅದಕ್ಕೆ ಅಲ್ಲಿ ಇಲ್ಲಿ ಮಿಸುಕಾಡಲೂ ಕೂಡ ಕೊಡುವದಿಲ್ಲ ಮತ್ತು ತಾನಾಗಿಯೇ ಅದನ್ನು ಸ್ಥಿರ ಮಾಡುತ್ತದೆ ಮನಸ್ಸು ಮತ್ತು ವಿವೇಕಗಳೆರಡೂ ಒಂದುಗೂಡಿದವೆಂದರೆ, ಬುದ್ಧಿಯು ಸತ್ವಗುಣವನ್ನಾಶ್ರಯಿಸಿ ವಿಷಯಗಳ ಬಡ್ಡಿಯನ್ನೇ ಕಿತ್ತೊಗೆಯುತ್ತದೆ ಮತ್ತು ವಿಕಾರಸಹಿತ ಉಪಾಧಿಯನ್ನು ಕಡಿದು ಹಾಕುತ್ತದೆ. ಮನಸ್ಸು ಎಲ್ಲಿ ಎಲ್ಲಿ ಓಡಿ ಹೋಗುತ್ತದೆಯೋ, ಅಲ್ಲಿ ವಿವೇಕವು ಸನ್ಮುಖವಾಗಿ ನಿಂತೇ ಇರುತ್ತದೆ ಹೀಗೆ ಸತ್ವಶಾಲಿಯಾದ ಬುದ್ಧಿಯ ಸಹಾಯದಿಂದ ಅವನು ಮನಸ್ಸಿನ ಕಾಲನ್ನೇ ಮುರಿಯುತ್ತಾನೆ ಈ ಪ್ರಕಾರವಾಗಿ ಮನಸ್ಸಿನ ಪ್ರಾಬಲ್ಯವು ಕ್ಷೀಣವಾಯಿತೆಂದರೆ, ನೀರಿನಲ್ಲಿಯ ಆಣೆಕಲ್ಲು ಹೇಗೆ ನದಿಯ ನೀರಿನಲ್ಲಿಯೇ ಇರುತ್ತದೆಯೋ, ಹಾಗೆಯೇ ಮನಸ್ಸು ಸ್ಥಿರವಾಗುತ್ತದೆ ಈ ರೀತಿಯಾಗಿ ಮನಸ್ಸು ಸ್ವಸ್ವರೂಪದಲ್ಲಿ ಸಮಾಧಾನವನ್ನು ಹೊಂದುತ್ತದೆ ಜೀವ ಶಿವನಿಗೆ ಸಮಾಧಾನವನ್ನೀಯುವ ಇದೇ ಶ್ರೇಷ್ಠವಾದ ಯೋಗವಾಗಿರುತ್ತದೆ ಜೀವ ಮತ್ತು ಪರಮಾತ್ಮನನ್ನು ಏಕರೂಪವನ್ನಾಗಿ ಮಾಡುವದೇ ನಿಜವಾಗಲೂ 'ಶ್ರೇಷ್ಠ ಯೋಗ'ವಾಗಿದೆ.

## ಪ್ರಕರಣ ೩೭

ವೈರಾಗ್ಯದಿಂದ ಸತ್ವಗುಣದ ಉತ್ಕರ್ಷವಾಯಿತೆಂದರೆ, ಗುರುಭಜನೆಯು ಪ್ರಕಟವಾಗಿ, ಜ್ಞಾನ ವಿಜ್ಞಾನಗಳು ಅವನನ್ನು ಆಶ್ರಯಿಸುತ್ತವೆ ಸಂಪೂರ್ಣವಾಗಿ ಭಗವದ್ಭಕ್ತಿಯನ್ನು ಮಾಡಿದರೇನೇ, ಗುರುಭಜನೆಯ ಅಧಿಕಾರವು ಪ್ರಾಪ್ತವಾಗುತ್ತದೆ ಸದ್ಗುರುವಿನ ಮಹಿಮೆಯನ್ನು ಎಷ್ಟೆಂದು ಹೇಳಬೇಕು? ನಾನು (ಶ್ರೀಕೃಷ್ಣನು) ಕೂಡ ಗುರುವಿನ ಆಜ್ಞಾಧಾರಕನಾಗಿರುವೆನು ಗುರುವು ಯಾರನ್ನು ಅನುಗ್ರಹಿಸುವನೋ, ಭಗವಂತನಾದ ನಾನು ಅವನನ್ನು ಉದ್ಧರಿಸುತ್ತೇನೆ ಅವನನ್ನು ಬಹಳ ಪ್ರೀತಿಯಿಂದ ನನ್ನ ಶಿರದ ಮೇಲೆ ಹೊತ್ತುಕೊಂಡು ಅವನಿಗೆ ನನ್ನ ಐಶ್ವರ್ಯವನ್ನು ಕೊಡುವೆನು ಗುರುವೇ ಪರಮಾತ್ಮಾ ಮತ್ತು ಪರಮೇಶ್ವರನಿರುವನೆಂಬುದು ಯಾವನದು ದೃಢತರವಾದ ವಿಶ್ವಾಸವಿರುವದೋ, ಎಲ್ಲ ಜಗತ್ತಿನ ಜಗದೀಶ್ವರ ಶ್ರೀಕೃಷ್ಣನಾದ ನಾನು ಅವನ

ಆಧೀನವಾಗಿರುವೆನು ನಾನೇ (ಶ್ರೀಕೃಷ್ಣನು) ಯಾವಾಗ್ಗೆ ಅವನ ಆಧೀನನಾಗುವೆನೋ, ಆವಾಗ್ಗೆ ಸಮಾಧಿಯನ್ನೊಳಗೊಂಡು ಜ್ಞಾನ ವಿಜ್ಞಾನಗಳೂ ಅವನ ಸ್ವಾಧೀನವಾಗುತ್ತವೆ ಅವುಗಳ ಮುಂದೆ ಸಿದ್ಧಿಯ ಗತಿಯೇನು? ಇಂತಹ ಗುರುವನ್ನು ತುಚ್ಛೀಸಿ ಯಾರು ನನ್ನ (ಶ್ರೀಕೃಷ್ಣ) ಭಜನೆಯನ್ನು ಮಾಡುವರೋ, ಅವರು ನನಗೆ (ಶ್ರೀಕೃಷ್ಣನಿಗೆ) ವಿಷ ಬೆರಸಿದ ಅನ್ನವನ್ನು ಉಣ್ಣಿಸಿದರೆಂದು ತಿಳಿಯಬೇಕು, ಬಾಯಿಯಲ್ಲಿ ತುತ್ತು ಮತ್ತು ತಲೆಯ ಮೇಲೆ ಏಟು ಬಿದ್ದಂತೆ ಅವನ ಭಜನೆಯ ರೀತಿಯಾಯಿತು ಅವನು ಎಲ್ಲ ರೀತಿಯಿಂದಲೂ ಮುಳುಗಿ ತನ್ನ ಶತ್ರು ತಾನೇ ಆಗುವನೆಂದು ತಿಳಿಯಬೇಕು ವಿಷಯಗಳನ್ನು ತ್ಯಜಿಸಿ ತಮ್ಮ ಅಧಿಕಾರದಂತೆ ಜನರು ಸಂಸಾರ ಸಮುದ್ರವನ್ನು ಪಾರು ಮಾಡಬೇಕೆಂದು, ಗುರುವಿನ ಅಗಾಧ ಮಹಿಮೆಯನ್ನು ನನ್ನ ವೇದಗಳು ಕೊಂಡಾಡಿದ್ದಾವೆ ಇದನ್ನು ಲಕ್ಷದಲ್ಲಿಡು.

## ಪ್ರಕರಣ ೩೭

'ನಾನು ಪ್ರಕಟನಾದೆನು' ಎಂದು ಅಂದರೆ, ಆ ಉಕ್ತಿಗೆ ನಾಚಿಕೆಯಾಗುವದು, ಏಕೆಂದರೆ ನಾನು ಎಲ್ಲ ಜಗತ್ತಿನಲ್ಲಿ ವ್ಯಾಪಿಸಿರುವದರಿಂದ ನನ್ನ ಹೊರತಾಗಿ ಬೇರೆ ಖಾಲೀ ಸ್ಥಳವೇ ಇರುವದಿಲ್ಲ ಅಂದ ಮೇಲೆ ಈಗ ನಾನು 'ಪ್ರಕಟನಾದೆನು' ಎಂದು ಅನ್ನುವವರು ಯಾರು? ಕಾರಣವೇನಂದರೆ, ಉದ್ಧವಾ! ನಾನು ನಿಜವಾಗಿಯು ಯಾವಾಗಲೂ ಹೃದಯದಲ್ಲಿಯೇ ಇರುತ್ತೇನೆ ಭಕ್ತರ ಭ್ರಮೆಯು ದೂರವಾಯಿತೆಂದರೆ, ನಾನು ಸ್ವಾಭಾವಿಕವಾಗಿ ಪ್ರಕಟವಾಗಿರುತ್ತೇನೆಂಬುದನ್ನು ನೀನು ಲಕ್ಷ್ಯದಲ್ಲಿಡು ಭಕ್ತರು ನನ್ನ ಭಕ್ತಿಯನ್ನು ಮಾಡಿ ತಮ್ಮ ಭ್ರಮೆಯನ್ನು ಇಲ್ಲದಂತೆ ಮಾಡಿರುತ್ತಾರೆ ಅಂದ ಮೇಲೆ ಅಲ್ಲಿ ಶ್ರೀಕೃಷ್ಣನಾದ ನಾನು ಸ್ವತಃ ಸುಗಮವಾಗಿ ಪ್ರಕಟವಾಗಿಯೇ ಇರುತ್ತೇನ ನಾನು ಹೃದಯದಲ್ಲಿ ಪ್ರಕಾಶಿಸಿದೆನೆಂದರೆ, ಭಕ್ತರಿಗೆ ಅಲಭ್ಯ ಲಾಭವಾಗುತ್ತದೆ ಮತ್ತು ಸಂಸಾರ ದುಃಖವು ಇಲ್ಲದಂತಾಗುತ್ತದೆ ಅದನ್ನೇ ಸವಿಸ್ತಾರವಾಗಿ ಹೇಳುವೆನು ಕೇಳು ಉದ್ಧವಾ! ನಾನು ಯಾರಿಗೆ ಹೃದಯದಲ್ಲಿ ದರ್ಶನ ಕೊಡುವೆನೋ, ಅವರ ಹೃದಯ ಸಂಪುಟದಲ್ಲಿ ನಾನು ಹಿಡಿಸುವದಿಲ್ಲ ನಾನು ಸರ್ವಾತ್ಮರೂಪದಲ್ಲಿಯೇ ಪ್ರಕಟನಾಗುತ್ತೇನ ನನ್ನ ಸ್ವರೂಪವೇನೂ ಚಿಕ್ಕದಾಗಿರುವದಿಲ್ಲ ಈ ರೀತಿಯಾಗಿ ನಾನು ಪ್ರಕಟನಾದೆನೆಂದರೆ, ಸಂಸಾರವೆಂಬುದು ಕಣ್ಣಿಗೆ ಕಾಣುವದೇ ಇಲ್ಲ ಮೂರೂ ಗುಣಗಳಲ್ಲಿಯ ಭೇದವು ಇಲ್ಲದಂತಾಗುತ್ತದೆ ಮತ್ತು ಭವಭಯವಂತೂ ಕೂಡಲೇ ಒಡಿ ಹೋಗುತ್ತದೆ ಸೂರ್ಯನ ಕಿರಣಗಳಿಂದ ಹೇಗೆ ಗಟ್ಟಿಯಾದ ತುಪ್ಪವು ಕರಗುತ್ತದೆಯೋ ಹಾಗೆಯೇ ನಾರಾಯಣನು ಹೃದಯದಲ್ಲಿ ಪ್ರಕಟನಾದನೆಂದರೆ, ಒಡಯದೆಯೇ ಲಿಂಗದೇಹವು

ನಷ್ಟವಾಗುತ್ತದೆಂಬುದನ್ನು ಲಕ್ಷ್ಯದಲ್ಲಿಡು ಎಲ್ಲೆಡೆಯಲ್ಲಿಯೂ ವ್ಯಾಪಿಸಿದ ಮಂಜು, ಜೋರಾಗಿ ಬಿರುಗಾಳಿ ಬೀಸಿದ ತತ್‌ಕ್ಷಣ, ಅಲ್ಲಿ ಇಲ್ಲಿ ಹಾರಿಹೋಗುವಂತೆ, ನನ್ನ ಪ್ರಕಾಶದೆದುರಿಗೆ ಬೇರು ಸಹಿತ ವಾಸನೆಯ ಜಾಲವು ಬತ್ತಿಹೋಗುತ್ತದೆ ಬೇರು ಸಹಿತ ವಾಸನೆಯನ್ನು ಕಿತ್ತೆಸೆದ ನಂತರ, ಜೀವ–ಭಾವ ಸಹಿತವಾಗಿ ಸಂದೇಹವು ನಾಶಹೊಂದು ತ್ತದೆ ಆವಾಗ್ಗೆ ಸೂರ್ಯನೆದುರು ಕತ್ತಲೆಯು ಹೇಗೆ ಇಲ್ಲದಂತಾಗುತ್ತದೆಯೋ, ಹಾಗೆಯೇ ಕರ್ಮವು ನಾಶ ಹೊಂದುತ್ತದೆ

## ಪ್ರಕರಣ ೩೮

ಸ್ವಧರ್ಮಕರ್ಮದಿಂದ ಏನು ಪ್ರಾಪ್ತವಾಗುತ್ತದೆಯೋ, ಕಠಿಣವಾದ ತಪಶ್ಚರ್ಯೆಯಿಂದ ಏನು ಸಾಧ್ಯವಾಗುತ್ತದೆಯೋ, ಇಲ್ಲವೆ ಸಾಂಖ್ಯಜ್ಞಾನದ ವಿಚಾರ ದಿಂದ ನಿಶ್ಚಿತವಾಗಿ ಯಾವ ವಸ್ತು ಆಕಲನವಾಗುವದೋ, ಅದರಂತೆ ವಿಷಯತ್ಯಾಗ ದಿಂದ ಏನು ಪ್ರಾಪ್ತವಾಗುತ್ತದೆಯೋ, ಅಷ್ಟಾಂಗ ಯೋಗದಿಂದ ಏನು ಸಾಧ್ಯವಾಗುತ್ತದೆಯೋ, ಗಾಳಿ, ನೀರು, ಎಲೆಗಳನ್ನು ಸೇವಿಸಿ, ತಪ ಮಾಡಿ ಕೊನೆಗೆ ಯಾವ ಫಲವು ಪ್ರಾಪ್ತವಾಗುತ್ತದೆಯೋ, ಅದರಂತೆ ವೇದಾಧ್ಯಯನದಿಂದ ಏನು ಲಾಭ ವಾಗುತ್ತದೆಯೋ, ಸತ್ಯನುಡಿಯುವದರಿಂದ ಏನು ಸಾಧ್ಯವಾಗುತ್ತದೆಯೋ, ನಾನಾ ತರಹದ ಸಾಧನೆಗಳಿಂದ ಏನು ಪ್ರಾಪ್ತವಾಗುತ್ತದೆಯೋ, ಅವೆಲ್ಲವುಗಳೂ ನನ್ನ ಭಜನೆ ಯೊಂದರಿಂದಲೇ ಪ್ರಾಪ್ತವಾಗುತ್ತದೆ ಇಷ್ಟೊಂದು ಸಾಧನೆಗಳ ದುಃಖವನ್ನು ಸಹಿಸದೆ, ಪರ್ವತ ಗುಹೆಗಳಲ್ಲಿ ಶೋಧ ಮಾಡುತ್ತ ಕೂಡ್ರದೆ, ನನ್ನ ಭಕ್ತಿಯೊಂದನ್ನು ಸಾಧಿಸಿದಲ್ಲಿ, ಎಲ್ಲ ಫಲಗಳು ಅವನ ಬಾಗಿಲಲ್ಲಿ ದಾರಿ ಕಾಯುತ್ತ ನಿಲ್ಲುತ್ತವೆ ಉದ್ಧವಾ! ನೀನು ಈಗ ಹೀಗೆ ಅನ್ನಬಹುದು—

—ಅಂತಹ ನಿನ್ನ ಭಕ್ತಿಯಾದರೂ ಯಾವದು? ಅಂದರೆ ಬ್ರಹ್ಮಭಾವನೆಯಿಂದ ಗುರುಭಜನೆಯನ್ನು ಮಾಡುವದೇ ಈ ಭಕ್ತಿಯ ಸಾಮರ್ಥ್ಯವಾಗಿದೆ. ಸಾಧಕರಿಗೆ ಸದ್ಗುರುವಿನ ಭಜನೆಯ ಹೊರತಾಗಿ, ಬೇರೆ ಅನ್ಯಶ್ರೇಷ್ಠ ಲಾಭವೇ ಇರುವದಿಲ್ಲ ಸಾಕ್ಷಾತ್ ಭಗವಂತನಾದ ನಾನೇ ಗುರುವಿನ ಭಕ್ತಿಯನ್ನು ಮಾಡುತ್ತೇನೆ ಅಂದ ಮೇಲೆ ಬೇರೆಯವರ ಗತಿ ಏನು? ನಾನು ಕೂಡ ಸದ್ಗುರುವಿನ ಕೃಪಯಿಂದಲೇ ಶ್ರೇಷ್ಠತೆ ಯನ್ನು ಪಡೆದಿದ್ದೇನೆ ಅಂದಮೇಲೆ ಇಂತಹ ಸದ್ಗುರುವಿನ ಶ್ರೇಷ್ಠತೆಗೆ ಯಾವ ಉಪಮೆಯನ್ನು ತಾನೆ ಕೊಡಬೇಕು? ಯಾರು ಗುರುವನ್ನು ಪರಬ್ರಹ್ಮನೆಂದು ತಿಳಿದು ಅಭೇದ ಭಾವನೆಯಿಂದ ಭಕ್ತಿಯನ್ನು ಮಾಡುವರೋ, ಅವರು ಆಕಸ್ಮಿಕವಾಗಿ ಏನಾದರೂ ಇಚ್ಛಿಸಿದಲ್ಲಿ, ನಾನು ಅವರಿಗೆ ಸ್ವರ್ಗ, ಮೋಕ್ಷ, ವೈಕುಂಠ ಮುಂತಾದವು

ಗಳೆಲ್ಲವನ್ನೂ ಕೊಡುವೆನು ಇದು ಹೇಳಿದ್ದೂ ಕೂಡ ಅಲ್ಪವೇ ಆಗಿದೆ ಅವರ ಭಜನೆಯ ಪ್ರೀತಿಯಿಂದ ನಾನು ಅತಿಶಯ ಮೋಹಿತನಾಗುತ್ತೇನೆ ಮತ್ತು ಅವನನ್ನು ಸದೈವ ಎಲ್ಲ ರೀತಿಯಿಂದಲೂ ಕಾಯುತ್ತೇನೆ ಆದರೆ ನನ್ನ ಭಕ್ತರು ಬಹಳ ನಿಃಸ್ಪೃಹರಿರುತ್ತಾರೆ ಅವರು ಏನಾದರೂ ಬೇಡುವರೆಂಬ ಮಾತು ಶಕ್ಯವೇ ಇರುವದಿಲ್ಲ ಅದರ ನಿರೂಪಣವನ್ನೂ ನಾನು ನಿನಗೆ ಕಳಕಳಿಯಿಂದ ಹೇಳುತ್ತೇನೆ ಕೇಳು ಯಾವದನ್ನೂ ತೆಗೆದುಕೊಳ್ಳಬಾರದೆಂಬ ಬೋಧವು ಯಾರ ಮನಸ್ಸಿನಲ್ಲಿ ಬಿಂಬಿಸಿರುವದೋ, ಹೀಗೆ ಯಾವನು ನಿಜವಾಗಲೂ ನಿರಪೇಕ್ಷನಿರುವನೋ, ಅವನನ್ನೇ ನಾನು ಸಾಧುವೆಂದು ಕರೆಯುತ್ತೇನೆ ಯಾವನಲ್ಲಿ ನಿರಪೇಕ್ಷತೆಯು ಇರುತ್ತದೆಯೋ, ಅಲ್ಲಿ ಧೈರ್ಯವು ಅವನ ಚರಣಕ್ಕೆರಗುತ್ತದೆ ಯಾವನು (ಅಧೀರ) ಪುಕ್ಕನು ಇರುವನೋ, ಅವನಲ್ಲಿ ನಿರವೇಕ್ಷತೆಯು ಇರುವದೇ ಇಲ್ಲ ಕೋಟಿಗಟ್ಟಲೇ ಜನ್ಮ ತಾಳಿದ ಮೇಲೆಯೇ ಈ ಜ್ಞಾನವು ಪ್ರಾಪ್ತವಾಗುತ್ತದೆ ಆ ಮೇಲೆಯೇ ನಿರವೇಕ್ಷತೆಯು ಉತ್ಪನ್ನವಾಗುತ್ತದೆ ನಿರವೇಕ್ಷತೆಯಂತಹ ಶ್ರೇಷ್ಠ ಸಾಧನವು ಮತ್ತೆ ಬೇರ ಯಾವದೂ ಇರುವದಿಲ್ಲ ಇಂತಹ ನಿರಸೇಕ್ಷತೆಯುಂಟಾದ ಮೇಲೆಯೇ ನನ್ನ ಭಜನೆಯಲ್ಲಿ ಅತಿಶಯ ಪ್ರೀತಿಯು ಉತ್ಪನ್ನವಾಗುತ್ತದೆ ಆ ಮೇಲೆಯೇ ಅವನಿಗೆ ನನ್ನ ನಾಲ್ಕನೆಯ ಭಕ್ತಿ, ಯಾವುದಕ್ಕೆ ವೇದದಲ್ಲಿ 'ಏಕಾಂತ ಭಕ್ತಿ' ಅನ್ನುತ್ತಾರೆಯೋ ಅದು ಸಾಧ್ಯವಾಗುತ್ತದೆ ಏಕಾಂತ ಭಕ್ತಿಯು ಹೇಗಿರುತ್ತೆಂಬುದನ್ನು ಕೇಳು ಅದರಲ್ಲಿ ದೇವರು ಮತ್ತು ಭಕ್ತನ ಏಕಾಂತವಾಗುತ್ತದೆ ಭಕ್ತನು ದೇವರಲ್ಲಿ ಮತ್ತು ದೇವರು ಭಕ್ತನ ಸಭಾಹ್ಯಾಭ್ಯಂತರದಲ್ಲಿ ಪ್ರವೇಶಿಸುತ್ತಾನೆ—

—ಹೀಗೆ ಅಭೇದ ಬಾವನೆಯಿಂದ ನಡೆಯುವ ನನ್ನ ಭಜನೆಗೆ 'ಏಕಾಂತ ಭಕ್ತಿ' ಎಂದು ಅನ್ನುತ್ತಾರೆ ಅದರಲ್ಲಿ ನನ್ನ ಭಕ್ತನಿಗೆ, ನನ್ನ ಹೊರತು ಜಗತ್ತಿನಲ್ಲಿ ಬೇರೇನೂ ಕಾಣುವದೇ ಇಲ್ಲ ಅವನಿಗೆ ಶ್ರೀಕೃಷ್ಣನಾದ ನಾನು ನಾಲ್ಕೂ ಪುರುಷಾರ್ಥಗಳೊಂದಿಗೆ ಮುಕ್ತಿಯನ್ನು ಕೊಡುವೆನು ಆದರೆ ಅವನು ಅದರತ್ತ ಕಣ್ಣೆತ್ತಿ ಕೂಡ ನೋಡುವದಿಲ್ಲ ಅಂದಮೇಲೆ ಅವನು ಮುಕ್ತಿಯನ್ನು ಸ್ವೀಕರಿಸುವನೆಂಬ ಮಾತೇಕೇ? ಇರಲಿ, ಅವನು ತನ್ನ ಮುಖದಿಂದ ಏನಾದರೂ ಬೇಡುವನೆನ್ನಬೇಕೆಂದರೆ, ಅದು ಕಲ್ಪಾಂತವಾದರೂ ಕೂಡ ಸಾಧ್ಯವಾಗಲಾರದು ನನ್ನ ಏಕಾಂತ ಭಕ್ತಿಯನ್ನು ಬಿಟ್ಟು ನನ್ನ ಭಕ್ತನು ಮೋಕ್ಷವನ್ನು ಎಂದಿಗೂ ಸ್ವೀಕರಿಸುವದಿಲ್ಲ! ಮೋಕ್ಷವನ್ನು ಸ್ವೀಕರಿಸದಿರುವ ಕಾರಣ ವೇನು? ಇದು ಶ್ರುತಿ ಶಾಸ್ತ್ರಗಳಿಗೂ ಅಗಮ್ಯವಾಗಿರುವ ಭಾವನೆಯನ್ನು ದೇವಾಧಿ ದೇವನಾದ ಶ್ರೀಕೃಷ್ಣನು ಸಾರಾಂಶ ರೂಪದಿಂದ ಹೇಳುತ್ತಿದ್ದಾನೆ ಯಾವನು ವಿಶೇಷ ವಾಗಿ ನಿರಪೇಕ್ಷನಿರುವನೋ, ಅವನು ನನಗೆ ಪೂಜನೀಯನಿರುತ್ತಾನೆ ಅವನ ದೃಷ್ಟಿಯಲ್ಲಿ ಮೋಕ್ಷವು ಹೊಟ್ಟಿನ ಸರಿ ಎನಿಸುತ್ತದೆ ಇಂತಹ ನಿರಾಶೆಯು ಮೂರೂ ಲೋಕದಲ್ಲಿ ಧನ್ಯವಾಗಿರುತ್ತದೆ. ನಿರವೇಕ್ಷತೆಯ ಶ್ರೇಷ್ಠತ್ವವನ್ನು ಕೇಳು ಅಂತಹ

ಪುರುಷನಿಗೆ ನಾಲ್ಕೂ ಪುರುಷಾರ್ಥಗಳು ಶುಷ್ಕವೆನಿಸುತ್ತವೆ ವೈಕುಂಠ, ಕೈಲಾಸ ಮುಂತಾದ (ಸ್ಥಳ) ಸ್ಥಾನಗಳು ಶ್ರೇಷ್ಠವಿರುವವೆಂದು ತಿಳಿಯುತ್ತಾರೆ ಆದರೆ ಅವುಗಳು ಅವನ ಕಾಲ್ವಾರಿಯಾಗಿರುತ್ತವೆ ನಿರಪೇಕ್ಷ ಮನುಷ್ಯನತ್ತ ದೇವರು ತಾವಾಗಿಯೇ ಬರುತ್ತಾರೆ ಅಂದಮೇಲೆ ಬುದ್ಧಿಸಿದ್ಧಿಯ ಕತೆ ಏನು? ಕಲಿಕಾಳನು ಕೂಡ ಪ್ರತ್ಯಕ್ಷ ಬಾಗಿಲಲ್ಲಿ ನಿಲ್ಲುತ್ತಾನೆ ಮಹಾದೇವನೂ ಅವನ ಮೇಲಿಂದ ಎಲ್ಲವನ್ನೂ ನಿವಾಳಿಸುತ್ತಾನೆ ನಾನು (ಶ್ರೀಕೃಷ್ಣ) ಕೂಡ ಲಕ್ಷ್ಮೀಸಹಿತವಾಗಿ ಅವನ ಆಧೀನನಾಗುತ್ತೇನೆಂಬುದನ್ನು ನೀನು ಲಕ್ಷ್ಯದಲ್ಲಿಡು ಯಾವ ನನ್ನ ಭಕ್ತನು ನಿರಪೇಕ್ಷನಿರುವನೋ, ಅವನು ನನ್ನಂತೆ ಸಾಮರ್ಥ್ಯಶಾಲಿಯಾಗಿರುವನು ಈ ನುಡಿಯು ಕೂಡ ಉಪಚಾರಾರ್ಥವಾಗಿರುವದು ಏಕೆಂದರೆ ಅವನು ಚಿದ್ರೂಪತ್ವದಿಂದ ನಿಜವಾಗಲೂ ನಾನೇ (ಶ್ರೀಕೃಷ್ಣನೇ) ಆಗಿರುತ್ತಾನೆ ಪರಮಾತ್ಮನಾದ ನಾನು ಪರಮಾನಂದ ಸ್ವರೂಪನಾಗಿರುವೆನೆಂದು, ಭಕ್ತನೂ ನನ್ನ ಭಜನೆಯಿಂದ ಸ್ವಾನಂದ ಸ್ವರೂಪನೇ ಆಗುತ್ತಾನೆ ನಾವಿಬ್ಬರೂ ಅಭೇದತ್ವದಿಂದ, ಸ್ವಾನಂದಕಂದ ಮತ್ತು ಸಚ್ಚಿದಾನಂದ ಸ್ವರೂಪವೇ ಆಗಿರುತ್ತೇವೆ ಹೀಗೆ ನನ್ನ ಭಕ್ತಿಯಿಂದ ಪರಿಪೂರ್ಣನಾದ ನನ್ನ ಭಕ್ತನು ಗುಣದೋಷಗಳನ್ನು ನೋಡುವದಿಲ್ಲ

## ಪ್ರಕರಣ ೩೯

ಪ್ರಕೃತಿ, ಪುರುಷ, ಮಹತ್ತತ್ವ, ವ ಅಹಂಕಾರ ಮತ್ತು ಐದು ಮಹಾಭೂತಗಳು: ಐದು ವಿಷಯಗಳೊಂದಿಗೆ ಹನ್ನೊಂದು ಇಂದ್ರಿಯಗಳು, ಹೀಗೆ ಎಲ್ಲ ಒಡಗೂಡಿ ಇಪ್ಪತ್ತೈದು ತತ್ವಗಳಾಗುತ್ತವೆ ಇದರಲ್ಲಿ ಈಶ್ವರನಿಂದ ಜೀವವು ಬೇರೆಯಾಗಿರುವದೆಂದು ತಿಳಿದರೆ ಇವೇ ಇಪ್ಪತ್ತಾರು ತತ್ವಗಳಾಗುತ್ತವೆ ಜೀವವು ಬೇರೆಯಾಗಲು ಕಾರಣವೇನೆಂದರೆ, ಬಹಳ ಪ್ರಾಚೀನ ಕಾಲದಿಂದ ಅಸ್ತಿತ್ವದಲ್ಲಿದ್ದ ಅವಿದ್ಯೆಯು (ಅಜ್ಞಾನ) ಆಗಿರುತ್ತದೆ. ಆದರಿಂದ ಅವನು ದೇಹಾಭಿಮಾನವನ್ನು ತಾಳುತ್ತಾನೆ ಹಾಗೂ ಅವನಿಗೆ ದೃಢತರವಾದ ಕರ್ಮಬಂಧನವುಂಟಾಗುತ್ತದೆ ಕರ್ತೃತ್ವಾಭಿಮಾನದಿಂದ ಅವನು ಪಾಪಪುಣ್ಯಗಳಿಗೀಡಾಗುತ್ತಾನೆ ಮತ್ತು ವಿಷಯ ಲೋಲುಪ್ತತೆಯಿಂದ ತನ್ನ ಆತ್ಮಸ್ವರೂಪವನ್ನೇ ಮರೆತುಬಿಡುತ್ತಾನೆ ಬದ್ಧತೆಯ ಬಂಧನವು ಅವನನ್ನು ಬೆನ್ನಟ್ಟಿರುವದರಿಂದ, ಅವನಿಗೆ ಕರ್ಮಪಾಶವನ್ನು ಹರಿಯಲಾಗುವದಿಲ್ಲ ಆದ್ದರಿಂದ ಅವನ ಉದ್ಧಾರಕ್ಕಾಗಿ, ಜ್ಞಾನಕೊಡುವ ಸರ್ವಜ್ಞ ಈಶ್ವರನ ಅವಶ್ಯಕತೆಯು ಇರುತ್ತದೆ ಆದರೆ ಗುರುವಿನಿಂದ ಜ್ಞಾನಪ್ರಾಪ್ತಿಯಾಗುತ್ತದೆ ಎಂದ ಮೇಲೆ, ಈಶ್ವರನ ಉಪಕಾರವಾದರೂ ಎಂತಹದು? ಅಥವಾ ಈಶ್ವರನ ಆವಶ್ಯಕತೆ ಯಾದರೂ ಏಕೆ? ಎಂದು ನೀನು ಅನ್ನುವಿಯಾದರೆ, ಈಶ್ವರನ ಕೃಪೆಯಿಲ್ಲದೆಯೇ

ಸದ್ಗುರುವಿನ ಭೆಟ್ಟಿಯಾಗುವದಿಲ್ಲ ಹಾಗೂ ಸದ್ಗುರುವು ಪ್ರಾಪ್ತವಾದರೂ, ಈಶ್ವರ ಕೃಪೆಯಿಲ್ಲದೆಯೇ ಅವನ (ಸದ್ಗುರುವಿನ) ಭಕ್ತಿಯು ಸಂಭವಿಸುವದಿಲ್ಲ ಸದ್ಗುರುವೇ ಈಶ್ವರನ ಮೂರ್ತಿಯಾಗಿರುವನೆಂಬುದು ವೇದಶಾಸ್ತ್ರಾರ್ಥಗಳಿಗೂ ಮಾನ್ಯವಾಗಿರುತ್ತದೆ ಗುರು ಮತ್ತು ಈಶ್ವರ ಇಬ್ಬರೂ ಭಿನ್ನವಾಗಿರುವರೆಂದು ಯಾವನು ತಿಳಿಯುವನೋ, ಅವನು ಸಂಪೂರ್ಣವಾಗಿ ಮುಳುಗಿದನೆಂದು ತಿಳಿಯಬೇಕು ತಾತ್ಪರ್ಯವೇನೆಂದರೆ ಈಶ್ವರನ ಅನುಗ್ರಹದಿಂದಲೇ ಜೀವನು ಜ್ಞಾನಸಂಪನ್ನನಾಗುತ್ತಾನೆ ಮತ್ತು ಉದ್ಧವಾ! ಗುರುವು ಜ್ಞಾನದ ಸ್ವರೂಪವನ್ನು ಹೇಳಿದರೂ, ಅದು ಈಶ್ವರನ ಕೃಪೆಯ ಹೊರತು ಅವನ ಮನಸ್ಸಿನಲ್ಲಿ ಬಿಂಬಿಸುವದಿಲ್ಲವೆಂಬುದನ್ನು ನೀನು ಲಕ್ಷ್ಯದಲ್ಲಿಡು ಜೀವನು ನಿಯಮನು ವ ಈಶ್ವರನು ನಿಯಾಮಕ ಎಂದರೆ ಶಾಸನ ಮಾಡುವವನಾಗಿರುತ್ತಾನೆ ಜೀವನು ಅಜ್ಞಾನಿಯಾಗಿರುತ್ತಾನೆ ಮತ್ತು ಈಶ್ವರನು ಜ್ಞಾನಕೊಡುವವನಾಗಿರುತ್ತಾನೆ ಜೀವನು ಮರ್ಯಾದಿತನಾಗಿರುತ್ತಾನ ಮತ್ತು ಈಶ್ವರನು ಯಾವಾಗಲೂ ಸರ್ವವ್ಯಾಪಿಯಾಗಿರುತ್ತಾನೆ ಜೀವನು ಹೀನ ದೀನ ವ ಅಜ್ಞಾನಿಯಾಗಿರುತ್ತಾನೆ ಈಶ್ವರನು ಸಾಮರ್ಥ್ಯಶಾಲಿ ಮತ್ತು ಸರ್ವಜ್ಞನಾಗಿರುತ್ತಾನೆ ಜೀವಕ್ಕೆ ಕರ್ಮದ ದೃಢ ಬಂಧನವಿರುತ್ತದೆ ಮತ್ತು ಈಶ್ವರನು ನಿಷ್ಕರ್ಮನಾಗಿರುತ್ತಾನೆ—

—ಈ ಎಲ್ಲ ಕಾರಣಗಳಿಂದ ಈಶ್ವರ ಕೃಪೆಯಿಂದಲೇ ಜೀವನಿಗೆ ಜ್ಞಾನಪ್ರಾಪ್ತಿಯಾಗುತ್ತದೆ ಆದ್ದರಿಂದಲೇ ಜೀವನು ಈಶ್ವರನಿಂದ ಬೇರೆಯಾಗಿರುವನು ಈಗ ನೀನು ಹೀಗೆ ಅನ್ನಬಹುದು ಕರ್ಮವನ್ನಾಚರಿಸಿದ ನಂತರ ಜೀವನಿಗೆ ಜ್ಞಾನವುಂಟಾಗಬಹುದು ಆದರೆ ಅದು ಎಂದಿಗೂ ಹಾಗೆ ಆಗಲಾರದು, ಏಕೆಂದರೆ ಕರ್ಮಕ್ಕೆ ಜಡತ್ವವು ಬಂದಿರುತ್ತದೆ ಕರ್ಮವು ಜಡವಾಗಿರುವದರಿಂದ ಅದಕ್ಕೆ ಬಂಧನವಿರುತ್ತದೆ ಮತ್ತು ಅಜ್ಞಾನವೂ ಇರುತ್ತದೆ ಮತ್ತು ಆ ಕರ್ಮಬದ್ಧತೆಯನ್ನು ಜ್ಞಾನವಂತರು ಅರಿಯುತ್ತಾರೆ ಕರ್ಮವು ಸ್ವಾಭಾವಿಕವಾಗಿ ಜಡ ಅಂದರೆ ಚೈತನ್ಯವಿಲ್ಲದ್ದಾಗಿರುತ್ತದೆ ಅದಕ್ಕೆ ಚೇತನೆಯನ್ನು ಕೊಡುವವನು ಈಶ್ವರನಿರುತ್ತಾನೆ ಆದ್ದರಿಂದ ಆ ಕರ್ಮವನ್ನು ಈಶ್ವರಾರ್ಪಣ ಮಾಡದಿದ್ದರೆ, ಅದಕ್ಕೆ ಜ್ಞಾನವನ್ನು ಯಾರು ಕೊಡುವರು? ಕರ್ಮವು ಜಡವಾಗಿರುವದರಿಂದ ಅದಕ್ಕೆ ಅಧಿಕಾರವಿರುವದಿಲ್ಲ ಕರ್ಮದ ಆಚರಣೆಯನ್ನು ಅರಿಯುವವನು ಈಶ್ವರನಿರುವನು, ಆದ್ದರಿಂದ ಕರ್ಮದ ಫಲವನ್ನು ಕೊಡುವವನೂ ಈಶ್ವರನೇ ಮತ್ತು ಕರ್ಮಕ್ಕೆ ಚೇತನೆಯನ್ನು ನೀಡುವವನೂ ಈಶ್ವರನೇ ಆಗಿರುವನು ಜ್ಞಾನವೇ ಈಶ್ವರನಿದ್ದು, ಅದರಿಂದಲೇ ಈ ಜಗತ್ತು ವಿಸ್ತಾರವಾಗಿ ನಿರ್ಮಾಣವಾಗಿರುವದು ಅದರ ನಾಶವನ್ನೂ ಈಶ್ವರನು ತನ್ನ ಸತ್ತೆಯಿಂದಲೇ ಮಾಡುತ್ತಾನೆ ಜೀವಕ್ಕೆ ಜ್ಞಾನಸಾಯುಜ್ಯತೆ ಅಂದರೆ ಮೋಕ್ಷವನ್ನು ಇಲ್ಲವೇ ಸ್ವರ್ಗ ಫಲವನ್ನು ಕೊಡುವವನು ಅಥವಾ ಇಹಲೋಕದಲ್ಲಿ ಅವನನ್ನು ವರ್ಜಿಸುವವನೂ ಈಶ್ವರನೇ ಆಗಿರುವನು ಆದ್ದರಿಂದ ಜೀವ ಮತ್ತು ಈಶ್ವರ ಇವರಿಬ್ಬರೂ ಬೇರೆ ಬೇರೆಯಾಗಿರುವ

ರೆಂದು ತಿಳಿಯುವದೇ ಯೋಗ್ಯವಾಗಿದೆ, ಈ ಉದ್ದೇಶದಿಂದಲೇ ಬ್ರಾಹ್ಮಣರು ಎಲ್ಲ ತತ್ವಗಳು ನೇರಿ ಇಪ್ಪತ್ತಾರು ಇರುವವೆಂದು ತಿಳಿದಿದ್ದಾರೆ

## ಪ್ರಕರಣ ೪೦

ಯಾವನು ಧನಾಢ್ಯನಿರುವನೋ ಮತ್ತು ಸಾಧು, ಸಜ್ಜನರ ಸಂಕಟದ ಸಮಯ ದಲ್ಲಿ ಅವರ ಆ ಬಿಕ್ಕಟ್ಟಿನ ಪ್ರಸಂಗವನ್ನು ದೂರ ಮಾಡುವನೋ, ಅವನ ನಿಜಧರ್ಮದ ಗುಡಿಯು, ಪ್ರತ್ಯಕ್ಷ ವೈಕುಂಠದಲ್ಲಿ ನಿಲ್ಲುತ್ತದೆ ಯಾವನು ಧನಿಕನಿದ್ದು, ಬಡವ ಭಗವದ್ಭಕ್ತನ ಸಂರಕ್ಷಣೆಯನ್ನು ಮಾಡುವನೋ, ಅವನ ಮೇಲೆ ಭಗವಂತನು ಸಂತುಷ್ಟನಾಗುತ್ತಾನೆ ಮತ್ತು ಆ ಭಕ್ತನಿಗಿಂತ ಮೊದಲು ಅವನನ್ನು ಉದ್ಧರಿಸುತ್ತಾನೆ ಎಲ್ಲ ಶುಭ ಮಂಗಲದಿಂದ ಪರಿಪೂರ್ಣ ಮತ್ತು ಎಲ್ಲ ಕಲ್ಯಾಣದ ಕಲ್ಯಾಣವಾದಂತಹ ಸದ್ಗುರುವಿನ ಪವಿತ್ರ ಚರಣಗಳಲ್ಲಿ, ಯಾವನು ಸ್ವಾರ್ಜಿತ ಧನವನ್ನು ಅರ್ಪಿಸುವನೋ, ಅವನ ಔದಾರ್ಯಧರ್ಮದ ನಿಶಾನೆಯು ಸತ್ಯಲೋಕದಲ್ಲಿ ಶೋಭಿಸುತ್ತದೆ ಮತ್ತು ವೈಕುಂಠ ಹಾಗೂ ಕೈಲಾಸದಲ್ಲಿ ಎಲ್ಲೆಡೆಯಲ್ಲಿಯೂ ಅವನ ಯಶಕೀರ್ತಿಯು ನಗಾರಿಯು ದುಮುದುಮಿಸುತ್ತದೆ ಸ್ವಧರ್ಮದಿಂದ ಸಂಪಾದನೆಯನ್ನು ಮಾಡಿದ ಹಣವನ್ನು ಯಾವನು ಸದ್ಗುರುವಿಗೆ ಅರ್ಪಿಸುವನೋ, ಅವನೇ ಕರ್ಮಮಾಡಿಯೂ ಮಾಡದ ನಿಷ್ಕರ್ಮಯೋಗಿಯೆಂದು ತಿಳಿಯಬೇಕು ಅವನೇ ಅತ್ಯಂತ ಪವಿತ್ರ ನೆಂದು ತಿಳಿ ಯಾವನು ಹೆಚ್ಚಿಗೆ ಭಗವದ್ಭಕ್ತಿಯನ್ನಾಚರಿಸಿ, ಗುರುವಿಗೆ ತನ್ನ ಸಂಪತ್ತನ್ನು ಅರ್ಪಿಸುವನೋ, ಅವನನ್ನು ಸ್ವೀಕರಿಸಿ (ಅಂಗೀಕಾರ ಮಾಡಿ) ಲಕ್ಷ್ಮೀಪತಿಯಂತೂ ಅವನಿಗೆ ತನ್ನ ಭಕ್ತಿಯನ್ನು ಕೊಡುತ್ತಾನೆ ಯಾವನು ಏಕನಿಷ್ಠ ಗುರುಭಕ್ತನಿರುವನೋ, ಅವನ ಬಾಗಿಲಲ್ಲಿ ನಾಲ್ಕೂ ಮುಕ್ತಿಗಳೂ ದಾಸ್ಯತ್ವ ವನ್ನು ಸ್ವೀಕರಿಸುತ್ತವೆ ಲಕ್ಷ್ಮೀಪತಿಯಂತೂ ಅವನಿಂದ ದೂರವಾಗುವದೇ ಇಲ್ಲ. ಯಾವನು ತನು, ಮನ, ಧನವನ್ನು ಗುರುಚರಣದಲ್ಲಿ ಸಂಪೂರ್ಣವಾಗಿ ಅರ್ಪಿಸಿರು ವನೋ ಅವನಿಗೆ ಸಂಸಾರಭಯದ ನೆನಹು ಕಲ್ಪಾಂತದಲ್ಲಿ ಕೂಡ ಆಗಲಾರದು ದೈವಯೋಗದಿಂದ ಪ್ರಾಪ್ತವಾದ ಧನವನ್ನು ಈ ರೀತಿಯಾಗಿ ವ್ಯಯಮಾಡಿ ಭಾಗ್ಯ ವಂತನಾದವನು ಧನದಿಂದ, ನಿಷ್ಠೆಯಿಂದ ಪರಮಾರ್ಥ ಪ್ರಾಪ್ತಿಯನ್ನು ಮಾಡಿ ಕೊಳ್ಳುತ್ತಾರೆ ಈ ರೀತಿಯಾಗಿ ದ್ರವ್ಯವನ್ನು ಖರ್ಚುಮಾಡದೆ, ತನ್ನ ಬಂಧು ಬಾಂಧವರಿಗೆ ಹಾಗೂ ಕುಟುಂಬದವರಿಗೆ ಕಷ್ಟಕೊಟ್ಟು ಮತ್ತು ಸ್ವತಃ ತಾನೂ ಕೂಡ ಹೊಟ್ಟೆಗೆ ತಿನ್ನದೆ, (ಅವನು) ಕೂಡಿಟ್ಟ ಹಣಕ್ಕೆ (ಧನ) 'ಯಕ್ಷಧನ'ವೆಂದು ಅನ್ನುತ್ತಾರೆ

## ಪ್ರಕರಣ ೪೧

ಮನಸ್ಸು ಎಲ್ಲರನ್ನೂ ತನ್ನ ಆಧೀನ ಮಾಡಿಕೊಂಡಿರುತ್ತದೆ. ಆದರೆ ಮನಸ್ಸನ್ನು ತಡೆಗಟ್ಟಲು ಯಾರಿಗೂ ಆಗುವದಿಲ್ಲ ಮನಸ್ಸು ದೇವದೇವತೆಗಳನ್ನೂ ತೊಂದರೆಗೀಡುಮಾಡಿತು ಅದು ಇಂದ್ರಿಯಗಳಿಗೆ ಹೇಗೆ ವಶವಾಗುವದು? ಮನಸ್ಸಿನ ಸ್ವಾಮಿ ಚಂದ್ರನಿರುವನು ಆದರೆ ಮನಸ್ಸು ಚಂದ್ರನಿಗೂ ತೊಂದರೆ ಕೊಟ್ಟಿತು ಆ ಮನಸ್ಸೆ, ಚಂದ್ರನಿಗೆ ಗುರುಪತ್ನಿಯೊಡನೆ ವ್ಯಭಿಚಾರ ಮಾಡಲು ಹಚ್ಚಿ, ಅವನನ್ನು ಕ್ಷಯರೋಗಿಯನ್ನಾಗಿ ಮಾಡಿತು ಬ್ರಹ್ಮದೇವನು ಬುದ್ಧಿಯ ನಿಯಂತ್ರಣವನ್ನು ಮಾಡುವವನಿದ್ದಾನೆ ಆದರೆ ಮನಸ್ಸಿನಿಂದಲೇ ಆ ಬ್ರಹ್ಮದೇವನ ಬುದ್ಧಿಯು ಭ್ರಷ್ಟವಾಯಿತು ಅವನ ಕನ್ಯೆಯು ಅವನನ್ನು ಎಷ್ಟು ನಿರಾಕರಿಸಿದರೂ ಕೂಡ ಅವನು ಅವಳಲ್ಲಿ ಆಸಕ್ತನಾದನು ಚಿತ್ತಕ್ಕೆ ವಾಸುದೇವನ ಅಧಿಷ್ಠಾನವಿದೆ ಆದರೆ ಆ ವಾಸುದೇವನಿಗೂ ಕೂಡ ಮನಸ್ಸು ಮೆಲ್ಲಗೆ ಮೋಸ ಮಾಡಿತು ಅವನು ವೃಂದೆಯ ಧ್ಯಾಸದಿಂದ ಸ್ಮಶಾನಕ್ಕೆ ಹೋದನು ರುದ್ರ (ಮಹಾದೇವ)ನು ಅಹಂಕಾರದ ನಿಯಂತ್ರಕನಿರುವನು ಅವನಿಗೂ ಕೂಡ ಮನಸ್ಸು ಮೋಸಗೊಳಿಸಿತು ಅವನು ಋಷಿಪತ್ನಿಯ ಅಭಿಲಾಷ ಮಾಡಿದುದರಿಂದ ಆ ಮಹರ್ಷಿಯ ಶಾಪದಿಂದ ಅವನ ಲಿಂಗಪತನವಾಯಿತು

ಹೀಗ ದೇವರಿಗೂ ಕೂಡ ಜಯಿಸಲು ದುರ್ಗಮವಾಗಿದ್ದ ಮನಸ್ಸನ್ನು ಬೇರೆ ಯಾರು ತಡೆಹಿಡಿಯುವರು? ಈಗ ನೀವು ಹೀಗೆ ಅನ್ನಬಹುದು ಇಂದ್ರಿಯಗಳು ಮನಸ್ಸನ್ನು ನಿಯಂತ್ರಿಸಬಹುದು ಆದರೆ ಮುಖ್ಯವಾಗಿ ಇಂದ್ರಿಯಗಳೇ ಮನಸ್ಸಿನ ಆಧೀನವಾಗಿರುತ್ತವೆ ಯಾವಾಗ್ಗೆ ಮನಸ್ಸು ಇಂದ್ರಿಯಗಳನ್ನು ವಶಮಾಡಿಕೊಂಡು ತಾನು ಬೇರೆ ವಿಷಯದಲ್ಲಿ ಏಕಾಗ್ರತೆಯನ್ನು ಹೊಂದುತ್ತದೆಯೋ, ಆವಾಗ್ಗೆ ನಿಜವಾಗಿಯೂ, ಅಲ್ಲಿ ಬೇರೆ ಇಂದ್ರಿಯಗಳ ಬಲವು ವ್ಯರ್ಥವಾಗುತ್ತದೆ ಇಂದ್ರಿಯಗಳು ಮತ್ತು ವಿಷಯಗಳು ಒಂದುಗೂಡಿದರೂ, ಆ ಸಮಯದಲ್ಲಿ ಮನಸ್ಸಿನ ವೃತ್ತಿಯು ಬೇರೆಯಾಯಿತೆಂದರೆ, ಆ ವಿಷಯಗಳನ್ನು ಉಪಭೋಗಿಸಲು ಇಂದ್ರಿಯಗಳಿಗೆ ಸಿಗುವದಿಲ್ಲ ಏಕೆಂದರೆ ಇಂದ್ರಿಯಗಳಿಗೆ ವಿಷಯೋಪಭೋಗದ ಸ್ಫುರಣವೇ ಆಗುವದಿಲ್ಲ ಯಾವಾಗ್ಗೆ ಮನೋಧರ್ಮವೇ ಆಸಕ್ತಿರಹಿತವಾಗುತ್ತದೆಯೋ ಆವಾಗ್ಗೆ ಇಂದ್ರಿಯಗಳ ಆಟವು ಏನೂ ನಡೆಯುವದಿಲ್ಲ ಏಕೆಂದರೆ ಎಲ್ಲ ಇಂದ್ರಿಯಗಳ ಸಮೂಹವು ಮನಸ್ಸಿನ ಸ್ವಾಧೀನವಾಗಿರುತ್ತದೆ ಆದ್ದರಿಂದ ಇಂದ್ರಿಯಗಳಿಂದ ಮನಸ್ಸಿನ ನಿಗ್ರಹವು ಎಂದಿಗೂ ಆಗುವದಿಲ್ಲ ಮನಸ್ಸು ಇಂದ್ರಿಯಗಳ ಅರಸನಾಗಿ

ದ್ದಾನೆ ಮನಸ್ಸಿಲ್ಲದೆಯೇ ಇಂದ್ರಿಯಗಳ ಚಲನವಲನವಾಗುವದಿಲ್ಲ ಪುರುಷ ನನ್ನೂ ಕೂಡ ಮನಸ್ಸು ತನ್ನ ವಶಮಾಡಿಕೊಂಡಿರುತ್ತದೆ ಮನಸ್ಸು ಬಲಶಾಲಿ ಗಿಂತಲೂ ಬಲಶಾಲಿಯಾಗಿರುವದು ಅದರ ಮುಂದೆ ಇಂದ್ರಿಯಗಳ ಗತಿ ಏನು? ಮನಸ್ಸಿನ ದಮನ ಮಾಡಲು ನಾ ನಾ ಎನ್ನುವವರಿಗೂ ಕೂಡ ಧೈರ್ಯವು ಸಾಲು ವದಿಲ್ಲ ಕಾಳನು ತನ್ನ ಸತ್ತೆಯಿಂದ ಎಲ್ಲವನ್ನೂ ಭಕ್ಷಿಸುತ್ತಾನೆ. ಆದರೆ ಮನ ಸ್ಸಿನ ಒಂದು ಕೂದಲೆಳೆಯನ್ನು ಕೂಡ ಅವನಿಂದ ಕಿತ್ತಿನೆಯಲು ಆಗಲಾರದು ಉತ್ಪತ್ತಿ ಸ್ಥಿತಿ ಪ್ರಳಯ ಕಾಲದಲ್ಲಿಯೂ, ಕಾಳನಿಗೆ ಮನಸ್ಸನ್ನು ನಿಲ್ಲಿಸಲಾಗುವದಿಲ್ಲ ಮನಸ್ಸನ್ನು ಶಸ್ತ್ರದಿಂದಲಂತೂ ಕಡಿಯಲಾಗುವದಿಲ್ಲ, ನೀರು ಕೂಡ ಮನಸ್ಸನ್ನು ಕರಗಿಸಲಾರದು ಅಗ್ನಿಯೂ ಮನಸ್ಸನ್ನು ಸುಡಲಾರದು, ಆಕಾಶವೂ ಮನಸ್ಸನ್ನು ಸ್ತಬ್ಧನನ್ನಾಗಿ ಮಾಡಲಾರದು, ಮನಸ್ಸಿಗೆ ರೋಗವು ಹತ್ತಲಾರದು ಮನಸ್ಸು ಕ್ಷೀಣವಾಗುವಂತಹ ಯಾವ ಬೇನೆಯೂ ಇರುವದಿಲ್ಲ ಮನಸ್ಸನ್ನು ಆಧೀನ ಮಾಡಿಕೊಳ್ಳುವಂತಹ ಯಾವ ಸಿದ್ಧಿಯೂ ನಿಜವಾಗಿಯೂ ಎಲ್ಲಿಯೂ ಕಾಣುವದಿಲ್ಲ ಮನಸ್ಸು ಕೋಟ್ಯಾವಧಿ ಬ್ರಹ್ಮದೇವರನ್ನು ನಿರ್ಮಾಣ ಮಾಡುತ್ತದೆ ಮತ್ತು ಬ್ರಹ್ಮಾಂಡಗಳನ್ನು ನಿರ್ಮಿಸು ತ್ತದೆ ಹಾಗೂ ಅವುಗಳನ್ನು ಇಲ್ಲದಂತೆಯೂ ಮಾಡುತ್ತದೆ ಹಾಗೂ ಮನಸ್ಸು ತನ್ನ ಕಲ್ಪನೆಯ ಸಾಮ್ರಾಜ್ಯದಿಂದ ಮೂರು ಲೋಕಗಳೆಲ್ಲವನ್ನೂ ಒತ್ತಾಯದಿಂದ ಕುಣಿಸುತ್ತದೆ ಮನಸ್ಸು ಕಲಿಕಾಳನಿಗೂ ಕೂಡ ತೊಂದರೆ ಕೊಡುತ್ತದೆ ಮನಸ್ಸು ಪ್ರಲಯಾಗ್ನಿಯನ್ನು ನುಂಗುತ್ತದೆ ಮನಸ್ಸು ಬಲಾಢ್ಯನಿಗಿಂತಲೂ ಬಹಳ ಬಲಾಢ್ಯ ವಿರುವದು ಮನಸ್ಸನ್ನು ಆಧೀನ ಮಾಡಿಕೊಳ್ಳುವವರು ಯಾರೂ ಇಲ್ಲ ಮನಸ್ಸು ದೇವರಿಗೂ ಕೂಡ ಅಸಹ್ಯವಾಗಿದೆ ಮನಸ್ಸು ಮಹಾ ಭಯಂಕರವಾಗಿದೆ —

—ಮನಸ್ಸು ಹರಿಹರರನ್ನು ಕೂಡ ವಶಮಾಡಿಕೊಂಡಿದೆ ಇಂತಹ ಈ ಮನಸ್ಸಿನೆದುರು ಯಾರು ಕಡೆಗಾಣಿಸುವರು? ಮನಸ್ಸಿನ ಹೊಯ್ದಾಟವನ್ನು ಮತ್ತು ಮನಸ್ಸಿನ ಏಟವನ್ನು ಪರಿಹರಿಸುವದು ಅತ್ಯಂತ ಕಠಿಣವಾಗಿದೆ ಇಂತಹ ಮನಸ್ಸನ್ನು ಯಾರು ಎದುರಿಸುವರು? ಮನಸ್ಸನ್ನು ಗೆದೆಯುವಂತಹ ಶೂರನು, ದೇವರು, ಮನುಷ್ಯ ಮತ್ತು ರಾಕ್ಷಸರಲ್ಲಿ ಯಾರೂ ಕಾಣುವದಿಲ್ಲ ಮನಸ್ಸಿನ ಜತೆಗೆ ಜಗಳ ಕಾಯುವಂತಹ ಬಲಶಾಲಿಗಳು ಈ ಮೂರು ಲೋಕದಲ್ಲಿ ಯಾರೂ ಇಲ್ಲ ಮನಸ್ಸು ಕಲಿಕಾಳನನ್ನು ತನ್ನ ಸ್ವಾಧೀನ ಮಾಡಿಕೊಂಡಿದೆ ಪ್ರಳಯರುದ್ರನನ್ನು ದವಡೆಯ ಹಲ್ಲಿಗೆ ಹಚ್ಚದೆಯೇ ನುಂಗಿಬಿಡುತ್ತದೆ ಮನಸ್ಸಿನ ಮಹತ್ವವು ಆಶ್ಚರ್ಯ ವುಳ್ಳದ್ದಾಗಿದೆ ಅಂತಲೇ ಮನಸ್ಸಿಗೆ 'ದೇವ' ಎಂದು ಅನ್ನುತ್ತಾರೆ ಮನಸ್ಸಿನ ಭಯವು ಭಯಾನಕವಾಗಿದೆಯೆಂತಲೇ ಅದಕ್ಕೆ 'ಭೀಷ್ಮದೇವ' ಎಂದು ಅನ್ನುತ್ತಾರೆ ಹೀಗೆ ಮನಸ್ಸಿನ ಗತಿಯು ಸಹಿಸಲು ಅಸಾಧ್ಯವಾಗಿದೆ ಅದನ್ನು ನಿಗ್ರಹಿಸುವ ಉಪಾಯವನ್ನು ಮತ್ತು ಅದರ ಮರ್ಮವನ್ನು ನಿಮಗೆ ನಿಜವಾಗಿಯೂ ಹೇಳು

ತ್ತೇನೆ ಅದನ್ನು ಜಾಗರೂಕತೆಯಿಂದ ಕಿವಿಗೊಟ್ಟು ಕೇಳಬೇಕು ಯಾವ ಪ್ರಕಾರವಾಗಿ ವಜ್ರದಿಂದಲೇ ವಜ್ರವನ್ನು ಕೊರೆಯುವರೋ ಅದೇ ಪ್ರಕಾರವಾಗಿ ಮನಸ್ಸಿನಿಂದಲೇ ಮನಸ್ಸನ್ನು ತಡೆಹಿಡಿಯಬೇಕು ಆದರೆ ಯಾವಾಗ್ಗೆ ಯಾವನು ಸ್ವತಃ ಸಂಪೂರ್ಣ ಗುರುಕೃಪೆಗೆ ಪಾತ್ರನಾಗುವನೋ, ಆವಾಗಲೇ ಅವನಿಗೆ ಅದು ಪ್ರಾಪ್ತವಾಗುತ್ತದೆ

ಮನಸ್ಸು ಗುರುಕೃಪೆಗೆ ಅಂದಣವನ್ನು ಕೊಟ್ಟ ದಾಸಿಯಾಗಿದ್ದಾಳೆ ಮನಸ್ಸು ಸದ್ಗುರುವಿಗೆ ಯಾವಾಗಲೂ ಅಂಜುತ್ತದೆ ಅದನ್ನು ಗುರುಚರಣಗಳಲ್ಲಿಟ್ಟರೆ ಅದು ಸಾಧಕರಿಗೆ ಸಂತೋಷವನ್ನೀಯುತ್ತದೆ ಈ ಮನಸ್ಸಿನ ಒಂದು ಬಹುಮೂಲ್ಯವಾದ ಗುಣವಿದೆ ಅದೇನೆಂದರೆ, ಅದು ತಾನಾಗಿಯೇ ಪರಮಾರ್ಥದತ್ತ ಹೊರಳಿದರೆ ಅದು ನಾಲ್ಕೂ ಮುಕ್ತಿಗಳನ್ನು ತನ್ನ ದಾಸಿಯನ್ನಾಗಿ ಮಾಡುತ್ತದೆ ಮತ್ತು ಪರಬ್ರಹ್ಮನನ್ನು ಕಟ್ಟಿ ಕೈಯಲ್ಲಿ ಕೊಡುತ್ತದೆ ಮನಸ್ಸೇ ಮನಸ್ಸನ್ನು ಉಜ್ವಲ ಗೊಳಿಸುವದು ಮನಸ್ಸೇ ಮನಸ್ಸಿನ ಸಾಧಕನಿರುವದು ಮನಸ್ಸೇ ಮನಸ್ಸಿಗೆ ಬಂಧನಕಾರಕವಾಗಿರುವದು ಮತ್ತು ಮನಸ್ಸಿನ ಘಾತವನ್ನು ಮನಸ್ಸೇ ಮಾಡುವದು ಯಾವ ರೀತಿಯಾಗಿ ಬಿದರು ತನ್ನ ಬಿದರಿನ ಗಡ್ಡೆಯನ್ನು ಬೆಳಸುತ್ತದೆಯೋ ಮತ್ತು ಎರಡು ಬಿದರುಗಳ ಘರ್ಷಣದಿಂದ ಉತ್ಪನ್ನವಾದ ಕಿಚ್ಚಿನ ಕಿಡಿಯಿಂದ ಅದು ತನ್ನ ಗಡ್ಡೆಯನ್ನು ಬೇರುಸಹಿತ ಸುಟ್ಟುಬಿಡುತ್ತದೆಯೋ ಅದರಂತೆಯೇ ಮನಸ್ಸು ತನ್ನ ಮರಣವನ್ನು ತಾನೇ ಯಾವಾಗ ಬಯಸುತ್ತದೆಯೋ ಆವಾಗಲೇ ಅದು ಸದ್ಗುರುವಿಗೆ ಶರಣು ಹೋಗುತ್ತದೆ ಮತ್ತು ಸದ್ಗುರುವಿನ ವಚನದಲ್ಲಿ ವಿಶ್ವಾಸವನ್ನಿಟ್ಟು ನಿರಭಿಮಾನದಿಂದ ಗುರುಭಜನೆಯನ್ನು ಮಾಡಿಸುತ್ತದೆ.

ಸಂಪೂರ್ಣವಾಗಿ ಗುರುಗಳ ಕೃಪೆಯಾಯಿತೆಂದರೆ ಮನಸ್ಸು ಮನಸ್ಸಿಗೆ ತನ್ನ ಗುಟ್ಟು ತೋರಿಸಿಕೊಡುತ್ತದೆ ಮತ್ತು ಸುಖದಿಂದ ಸುಖಿಯಾಗಿ ಮನಸ್ಸೆ ಮನಸ್ಸಿನಲ್ಲಿ ಪ್ರಫುಲ್ಲಿತವಾಗುತ್ತದೆ ಮನಸ್ಸೆ ಮನಸ್ಸಿನಲ್ಲಿ ಪ್ರಸನ್ನವಾಯಿತೆಂದರೆ ವೃತ್ತಿಯು ನಿರಭಿಮಾನವಾಗುವದು ಈ ಪ್ರಕಾರವಾಗಿ ಮನಸ್ಸು ತಾನಾಗಿಯೇ ಸಾಧಕನಿಗೆ ಒಳ್ಳೆಯ ಸಮಾಧಾನವನ್ನು ಕೊಟ್ಟಂತೆ ಆಗುತ್ತದೆ ಗುರುಕೃಪೆಯ ಅಭಿರುಚಿಯುಂಟಾಯಿತೆಂದರೆ, ಮನಸ್ಸು ತನ್ನ ಮನೋಜಯದ ಗುಡಿಯನ್ನು ನಿಲ್ಲಿಸಿ ತಾನಾಗಿಯೇ ಅದನ್ನು ಪ್ರತ್ಯಕ್ಷವಾಗಿ ಸಾಧಕನ ಕೈಯಲ್ಲಿ ಕೊಡುತ್ತದೆ ಈ ರೀತಿಯಾಗಿ ಮನಸ್ಸು ತನ್ನಷ್ಟಕ್ಕೆ ತಾನೇ ಪೂರ್ಣವಾಗಿ ಜಯಿಸುತ್ತದೆ ಮತ್ತು ಅಂತ್ಯದಲ್ಲಿ ಸದ್ಗುರುವಿನ ನಿಜಬೋಧದಿಂದ ಮನಸ್ಸೆ ಆತ್ಮ ಸ್ವರೂಪದಲ್ಲಿ ಸಂಪೂರ್ಣ ವಾಗಿ ಲಯ ಹೊಂದುತ್ತದೆ ಯಾವ ರೀತಿಯಾಗಿ ಉಪ್ಪಿನ ಹಳ್ಳು ಸಮುದ್ರದಲ್ಲಿ ಬಿದ್ದಿತೆಂದರೆ, ಅದು ಕರಗಿ ಸ್ವತಃ ಸಮುದ್ರ ರೂಪವಾಗುವದೋ, ಹಾಗೆಯೇ ಸಾಧಕನೂ ನಿರಭಿಮಾನಿಯಾದ ಕೂಡಲೇ 'ನೀನು' 'ನಾನು' ಎಂಬ ಭಾವನೆಯು

ಸಹ ನಷ್ಟವಾಗಿ ಸ್ವತಃ ಪೂರ್ಣಬ್ರಹ್ಮನಾಗುತ್ತಾನೆಂಬುದು ಲಕ್ಷ್ಯದಲ್ಲಿಡು ಆಮೇಲೆ ಅವನ ನಿಜವಾದ ದೃಷ್ಟಿಗೆ ಎಲ್ಲ ಜಗತ್ತಿನಲ್ಲಿ ನಾನೊಬ್ಬನೇ ತುಂಬಿ ತುಳುಕುತ್ತಿರುವೆನೆಂದು ಕಾಣಿಸುತ್ತದೆ ದ್ವಂದ್ವದ ತ್ರಿಪುಟಿಯು ಇಲ್ಲದಂತಾಗುತ್ತದೆ ಮತ್ತು ಸುಖ ದುಃಖಗಳು ಅವನಿಗೆ ಬಾಧಿಸುವದಿಲ್ಲ ಅಲ್ಲಿ ಎಂತಹ ಸುಖ ಮತ್ತು ಎಂತಹ ದುಃಖ? ಎಂತಹ ಬಂಧನ ಮತ್ತು ಎಂಥಹ ಮೋಕ್ಷ? ಪಂಡಿತನಾರು ಮತ್ತು ಮೂರ್ಖನಾರು? ಎಲ್ಲ ಕಡೆಯಲ್ಲಿಯೂ ಬ್ರಹ್ಮನೊಬ್ಬನೇ ಒಬ್ಬನು ಇರುವನು ಅಲ್ಲಿ ದೇವರು ಯಾರು ಮತ್ತು ಭಕ್ತನು ಯಾರು? ಅಲ್ಲಿ ಶಾಂತನಾರು ಮತ್ತು ಕೋಪಿಷ್ಠನು (ಅಶಾಂತ) ಯಾರು? ದ್ವೈತಾದ್ವೈತವೆಲ್ಲವೂ ಲೋಪ ಹೊಂದುತ್ತದೆ ಮತ್ತು ಪರಬ್ರಹ್ಮನೊಬ್ಬನೇ ಸದೈವ ಸ್ವಾನಂದದಿಂದ ಇರುತ್ತಾನೆ ಅಲ್ಲಿ ಕ್ರಿಯಾಕರ್ಮಗಳು ಇಲ್ಲದಂತಾಗುತ್ತವೆ, ಧರ್ಮಾಧರ್ಮಗಳೆರಡೂ ನಾಚಿಕೆಯಿಂದಲೇ ನಾಶ ಹೊಂದುತ್ತವೆ, ಅಲ್ಲಿ ಕನಿಷ್ಠ, ಮಧ್ಯಮ ಮತ್ತು ಉತ್ತಮವಾದರೂ ಎಂತಹದು? ಎಲ್ಲೆಡೆಯಲ್ಲಿಯೂ ಪರಿಪೂರ್ಣ ಬ್ರಹ್ಮನೇ ಇರುತ್ತಾನೆ ಅಲ್ಲಿ ಶಾಸ್ತ್ರವೆಂತಹದು ಮತ್ತು ವೇದವೆಂತಹದು? ಬುದ್ಧಿ ಯಾವದು ಮತ್ತು ಬೋಧವಾವುದು? ಭೇದವೆ ಸಂಪೂರ್ಣವಾಗಿ ಇಲ್ಲದಂತಾಗುತ್ತದೆ ಮತ್ತು ಆನಂದ ಸ್ವರೂಪ ಪರಬ್ರಹ್ಮನೇ ಎಲ್ಲೆಡೆಯಲ್ಲಿಯೂ ತುಂಬಿರುತ್ತಾನೆ ಆಹಾ ನೋಡಿರಿ, ಈ ರೀತಿಯಾಗಿ ಮನೋಜಯದಿಂದ ಇಷ್ಟೊಂದು ಸ್ಥಿತಿಯನ್ನು ಹೊಂದುತ್ತಾನೆ ಮನೋಜಯದ ಸ್ಥಿತಿಯು ಬ್ರಹ್ಮದೇವಾದಿಕಗಳಿಗೂ ತಿಳಿಯುವದಿಲ್ಲ ಹೀಗಿರುವಾಗ ಯಾವನು ಅದನ್ನು (ಮನೋಜಯವನ್ನು) ತಾನಾಗಿಯೇ ಪ್ರಾಪ್ತ ಮಾಡಿಕೊಳ್ಳುವನೋ, ಅವನು ಆತ್ಮಜ್ಞಾನದಿಂದ ದೇವಾಧಿದೇವನೇ ಆದನೆಂದು ತಿಳಿಯಬೇಕು—

—ಈ ರೀತಿಯಾಗಿ ಯಾವನು ಇಹಲೋಕದಲ್ಲಿಯೇ ಜನಾರ್ಧನನೊಡನೆ ಏಕರೂಪನಾದನೋ, ಅವನೇ ಈ ಮೂರೂ ಲೋಕಗಳಲ್ಲಿ ಧನ್ಯನಿರುವನು ಅವನಿಂದ ಭೂಮಿಯು ಪವಿತ್ರವಾಗುತ್ತದೆ ಅವನೇ ತನ್ನ ಪೂರ್ವಜರನ್ನು ಪಾರುಗಾಣಿಸಿದನು ಅವನಿಂದಲೇ ಎಲ್ಲ ಕುಲವು ಉದ್ಧಾರವಾಯಿತು ಯಾರು ಮನಸ್ಸನ್ನು ಜಯಿಸುವರೋ, ಅವರೇ ಪರಬ್ರಹ್ಮನನ್ನು ತನ್ನವರನ್ನಾಗಿ ಮಾಡಿಕೊಂಡರು ಯಾರು ಮನೋಜಯದಿಂದ ಸಾಮರ್ಥ್ಯಶಾಲಿಯಾಗಿರುವರೋ ಅಲ್ಲಿಯೇ ಶಾಂತಿಯು ನೆಲೆಸುತ್ತಾಳೆ ಮತ್ತು ತನ್ನನ್ನು ತಾನೇ ಮಾರಿಕೊಳ್ಳುತ್ತಾಳೆ ಅವರಿಗ ಆತ್ಮಬೋಧದ ಯೋಗದಿಂದ ಸುಖ–ದುಃಖಗಳ ತಿರುಗಣಿ ಮಡವುಗಳು ತೊಂದರೆ ಕೊಡದೆ ನಾಶ ಹೊಂದುತ್ತವೆ ಹೀಗೆ ಭಿಕ್ಷುವು ಮಾಡಿದ ಭಾಷಣವನ್ನು ಶ್ರೀಕೃಷ್ಣನು ಸಂತೋಷದಿಂದ ಹೇಳಿದನು ಮತ್ತು ಆನಂದಿತನಾಗಿ ಉದ್ಧವನಿಗೆ

ಅಂದನು ಮನೋಜಯವು ಮೂರು ಲೋಕಗಳಲ್ಲಿ ಧನ್ಯವಿರುವದು ಯಾರು ತಮ್ಮ ಮನಸ್ಸನ್ನು ಜಯಿಸಿದರೋ ಅವರ ವರ್ಣನೆಯನ್ನು ನಾನು ಶಬ್ದಗಳಿಂದ ಎಷ್ಟು ಮಾಡಲಿ? ಅವರು ನನ್ನನ್ನು ತಮ್ಮ ದಾಸನನ್ನಾಗಿ ಮಾಡಿಕೊಂಡರು ಇಲ್ಲವೇ ನನ್ನನ್ನು ಒಮ್ಮೆಂದೊಮ್ಮೆಲೇ ಮಾರಲು ತೆಗೆದುಕೊಂಡರು ಆನಂದಸ್ವರೂಪನಾದ ನನಗೆ ಅವನಿಂದಲೇ ಆನಂದವಾಗುತ್ತದೆ ನಿತ್ಯತೃಪ್ತನಾದ ನನಗೆ ಅವನಿಂದಲೇ ತೃಪ್ತಿಯಾಗ್ತುತ್ತದೆ ಅನಂತನಾದ ನಾನು ಅವನಲ್ಲಿಯೇ ನೆಲೆಸಿರುತ್ತೇನೆ, ಅವನಿಂದಲೇ ಮೂರು ಲೋಕದಲ್ಲಿ ನಾನು ಬಲಶಾಲಿಯಾಗಿರುವೆನು 'ನಾನು' ಮತ್ತು 'ಅವನು' ಎಂದು ಮಾತನಾಡುವ ಕುಶಲತೆಯು ಇರುವದೋ, ಅದು ಕೂಡ ನಮ್ಮ ಆಚೆಗೆ ಇರುತ್ತದೆ ನಿಮ್ಮ ಅಂತಃಕರಣದಲ್ಲಿ ನೀವು ವಿಚಾರ ಮಾಡಲಾಗಿ ಆತ್ಮ ಐಕ್ಯದಿಂದ ಅವನೇ ನಾನಾಗಿರುವೆನೆಂಬುವ ಸತ್ಯವು ನಿಮಗೆ ಕಂಡು ಬರುವದು ಮನೋಜಯದಿಂದ ಇಷ್ಟೊಂದು ಸಾಮರ್ಥ್ಯವು ಪ್ರಾಪ್ತವಾಗುವದು ಆ ಮನೋಜಯವನ್ನು ಸಾಧಿಸದೆ, ಯಾರು ಇಹಲೋಕದಲ್ಲಿಯ ಶತ್ರುಗಳನ್ನು ಜಯಿಸಿ ಗರ್ವದಿಂದ ಯಾರು ಉನ್ಮತ್ತರಾಗುವರೋ, ಅದರ ನಿರ್ಭತ್ಸನೆಯನ್ನು ಭಿಕ್ಷುವು ಮಾಡುತ್ತಾನೆ

## ಪ್ರಕರಣ ೪೨

ಭಿಕ್ಷು ಹೇಳುತ್ತಾನೆ ನನ್ನ ಪೂರ್ವಪುಣ್ಯದ ಭಾಗ್ಯದಿಂದಲೇ ನನಗೆ ಅದ್ವೈತ ಸ್ವರೂಪ ಆತ್ಮನಿಷ್ಠೆಯು ಉತ್ಪನ್ನವಾಗಿರುತ್ತದೆ ಆ ಆತ್ಮನಿಷ್ಠೆಯ ಸಹಾಯದಿಂದಲೇ ನಾನು ಸುಖದುಃಖಗಳಿಂದ ಅಲಿಪ್ತನಾಗಿ ನಾನಾ ತರಹದ ದುಃಖಗಳನ್ನು ಸಹಿಸುತ್ತಿದ್ದೇನೆ ಭೇದಭಾವನೆಯಿಂದುಂಟಾಗುವ ಸುಖದುಃಖಗಳನ್ನು ಸಹನ ಮಾಡುವದೇ ಸಿದ್ಧನ ಸಹಜವಾದ ಲಕ್ಷಣವಾಗಿದೆ ಇದೇ ಪ್ರಾಮುಖ್ಯವಾಗಿ ನನ್ನ ಸಾಧನೆಯಾಗಿದೆ ಇದರಿಂದಲೇ ಮನೋಜಯವು ಸಾಧ್ಯವಾಗುತ್ತದೆ ಇದೇ ಪರಮಾರ್ಥದ ಉಚ್ಚ ಸಾಧನವಾಗಿರುವದು ಮಹಾನ್ ತಪಸ್ವಿಗಳ ಆತ್ಮನಿಷ್ಠೆಯೂ ಇದೇ ಆಗಿರುತ್ತದೆ ವಿಷ್ಣುವಿನ ಮುಖ್ಯ ಭಜನಯೂ ಇದೇ ಆಗಿರುವದು ಇದರಿಂದಲೇ ಆತ್ಮನಿಷ್ಠೆಯು ಸಾಧ್ಯವಾಗುತ್ತದೆ ಹಾಗೂ ಸುಖದುಃಖಗಳಿಂದ ಉಂಟಾಗುವ ದುಃಖವು ಬಾಧಿಸುವದಿಲ್ಲ. ಇದರಿಂದಲೇ ನಿತ್ಯಸುಖವು ಲಭಿಸುತ್ತದೆ ಮತ್ತು ಇಂತಹ ಆತ್ಮವಿವೇಕವೇ, ನಮ್ಮನ್ನು ದುರ್ಗಮವಾದ ಸಂಸಾರ ಸಮುದ್ರದಿಂದ ಪಾರು ಮಾಡುತ್ತದೆ ಸಂಸಾರ ಸಾಗರವನ್ನು ಪಾರುಮಾಡುವದು ಬಹಳ ದುಸ್ತರವಾಗಿದೆ ಆದರೆ ಅದನ್ನು ಪಾರುಗಾಣಿಸಲು, ಆತ್ಮವಿವೇಕವೇ ಒಂದು ಶ್ರೇಷ್ಠ ಹಡಗವಾಗಿದೆ ಅದರಲ್ಲಿಯ ನಾವಾಡಿಗನು ಸದ್ಗುರುವು ಇರುವನು. ಅವನು ಆ ಹಡಗವನ್ನು ಮಾಯೆಯ ಆಚೆಯ ದಂಡೆಗೆ ಒಯ್ದು

ಮುಟ್ಟಿಸುವನು ಈ ಆತ್ಮವಿವೇಕವು ಹೇಗೆ ಕೈಗ (ಸಿಗಬಹುದು) ನಿಲುಕಬಹುದು? ಇದನ್ನು ಚಿಂತಿಸುವ ಕಾರಣವಿಲ್ಲ ಆತ್ಮಭಾವನೆಯಿಂದ ಏಕಾಗ್ರಚಿತ್ತನಾಗಿ ಭಗವಂತನಿಗೆ ಶರಣು ಹೋಗಬೇಕು ಲೋಕ ವ್ಯವಹಾರದ ಲಜ್ಜೆಯನ್ನು ಬಿಟ್ಟು, ಅಭಿಮಾನದ ಹೊರೆಯನ್ನು ಚಲ್ಲಿ, ಭಗವಂತನಿಗೆ ಶರಣು ಹೋಗಬೇಕು, ಆವಾಗಲೇ ಆತ್ಮವಿವೇಕವು ಪ್ರಾಪ್ತವಾಗುತ್ತದೆ—

—ಯಾವ ಪ್ರಕಾರವಾಗಿ ಹಸುಗೂಸು, ಎಲ್ಲ ತರಹದಿಂಪಲೂ ಅನನ್ಯ ಭಾವನೆಯಿಂದ ತಾಯಿಗೆ ಶರಣು ಹೋಗುತ್ತದೆಯೋ, ಆ ಪ್ರಕಾರವಾಗಿ ಹಗಲಿರುಳೂ ಶ್ರೀಹರಿಗೆ ಅನನ್ಯ ಭಾವನೆಯಿಂದ ಶರಣು ಹೋಗಬೇಕು ಶ್ರೀಹರಿಗೆ ಶರಣು ಹೋಯಿತೆಂದರೆ, ಜನ್ಮಮರಣವು ತನ್ನ ಮೋರೆಯನ್ನೂ ಕೂಡ ತೋರಿಸುವದಿಲ್ಲ ಹರಿಯೇ ತನ್ನ ಭಕ್ತನನ್ನು ಕಾಯುವವನಿರುವದರಿಂದ, ಅವನಿಗೆ ಎಂತಹ ದುಃಖವು ತೊಂದರೆ ಕೊಡಬಹುದು? ಶ್ರೀ ಹರಿಯೇ ಸಂಪೂರ್ಣವಾಗಿ ಮೋಕ್ಷದಾಯಕನಾಗಿರುತ್ತಾನೆ ಅವನಿಗೆ ಶರಣು ಹೇಗೆ ಹೋಗಬೇಕು? ಅವನು ಅನಂತ ರೂಪದಿಂದ ಪ್ರಕಟನಿದ್ದು, ಸ್ವತಃ ನಿರ್ಗುಣನಾಗಿರುವನು ಅಲ್ಲಿ ಯಾರು ಹೋಗುವರು? ಆದರೆ ಹರಿಯ ರೂಪವು ನಿರ್ಗುಣವಾಗಿದ್ದರೂ, ಅವನ ಸಗುಣ ಮೂರ್ತಿಯನ್ನು ಚಿಂತಿಸಿ, ಅದೇ ಎಲ್ಲ ಮೂರ್ತಿಯು ಧ್ಯಾನದಲ್ಲಿ ಸ್ಥಿರವಾಯಿತೆಂದರೆ, ಆವಾಗಲೂ ಸುಖದುಃಖಗಳಿಂದಾಗುವ ದುಃಖವು ಲೋಪ ಹೊಂದುವದೆಂದು ತಿಳಿಯಬೇಕು ಶ್ರೀಹರಿಯ ಸಂಪೂರ್ಣ ಮೂರ್ತಿಯು ಧ್ಯಾನದಲ್ಲಿ ಸ್ಥಿರವಾಗದಿದ್ದಲ್ಲಿ, ಶ್ರೀಹರಿಯ ಪಾದಗಳನ್ನೇ ನೇರವಾಗಿ ಧ್ಯಾನಿಸಬೇಕು ಅಂದರೆ ಅದರಿಂದ ಜನ್ಮಮರಣವು ಓಡಿ ಹೋಗುತ್ತದೆ ಮತ್ತು ಭೇದಾಭೇದಗಳೂ ಅಂಜಿಕೆಯಿಂದ ತಾವಾಗಿಯೇ ಓಡಿ ಹೋಗುತ್ತವೆ ಒಂದು ವೇಳೆ ಆ ಪಾದಗಳೂ ಧ್ಯಾನದಲ್ಲಿ ಸ್ಥಿರವಾಗದಿದ್ದರೆ, ನಾಮಸ್ಮರಣವನ್ನು ಮಾಡಬೇಕು ಯಾವನ ನಾಮಸ್ಮರಣದಿಂದ ಯಮಧರ್ಮನು ಮತ್ತು ಕಲಿಕಾಳನು ಸಂಪೂರ್ಣವಾಗಿ ಗದಗದ ನಡುಗುತ್ತಾರೆಯೋ, ಎಲ್ಲಿ ಹರಿನಾಮದ ಘೋಷವು ನಿತ್ಯವೂ ಸಾಗಿರುತ್ತದೆಯೋ ಅಲ್ಲಿ ಮರಣಕ್ಕೆ ಮರಣವು ಬಂದಿತೆಂದು ತಿಳಿಯಿರಿ ಜನ್ಮದ ಮುಖವು ಕರಿಯಾಗಿ ಅದು ಅಲ್ಲಿಂದ ಓಡಿ ಹೋಗುತ್ತದೆ—

—ರಾಮನಾಮದ ದುಂದುಭಿಯ ಮುಂದೆ ಭೇದಾಭೇದದ ದುಃಖವಾದರೂ ಪಾಪ ಎಷ್ಟರದು? ನಾಮ ಮಹಾತ್ಮೆಯ ಗರ್ಜನೆಯಿಂದ ಭವಭಯವೇ ನಷ್ಟವಾಗುತ್ತದೆ ಯಾವನ ವಾಣಿಯು ಅಖಂಡ ನಾಮಸ್ಮರಣೆಯನ್ನು ಮಾಡುವದೋ, ಅವನ ವಾಣಿಯಲ್ಲಿಯೇ ಶ್ರೀಹರಿಯು ವಾಸ ಮಾಡುತ್ತಾನೆ ಅವನ ಮನೆಯಲ್ಲಿ ರಿದ್ಧಿಸಿದ್ಧಿಗಳು ನೀರನ್ನು ತುಂಬುತ್ತವೆ ಮುಕ್ತಿಯು ಅವನ ದಾಸಿಯಾಗುತ್ತಾಳೆ ನಿರ್ವಿಕಲ್ಪ ಭಾವನೆಯಿಂದ ಸಗುಣ ಮೂರ್ತಿಯ ಧ್ಯಾನ ಇಲ್ಲವೆ ನಿರ್ಗುಣ ಚಿಂತನ ಅಥವಾ ನಾಮಸ್ಮರಣ ಇವುಗಳಲ್ಲಿ ಒಂದನ್ನು ಆದರದಿಂದ ಭಕ್ತಿಪೂರ್ಣ ಅಂತಃಕರಣದಿಂದ

ಯಾವನು ಸ್ವೀಕರಿಸುವನೋ, ಅವನ ಆ ಸದ್ಭಕ್ತಿಯೇ ಅದನ್ನು ಪರಿಪೂರ್ಣ ಮಾಡುತ್ತದೆ ಭಗವಂತನನ್ನು ಪ್ರೀತಿಸುವದೇ ನಿಜವಾದ ಭಕ್ತಿಯಾಗಿರುವದೆಂದು ತಿಳಿಯಬೇಕು ಭಕ್ತಿಯಿಂದಲೇ ಶ್ರೀಹರಿಯು ಸಂತುಷ್ಟನಾಗಿ ತನ್ನ ಆತ್ಮಶಾಂತಿಯನ್ನು ಕೊಡುವನು ಆ ಆತ್ಮಶಾಂತಿಯಿಂದಲೇ ಕೋಟ್ಯಾವಧಿ ದ್ವಂದ್ವ ದುಃಖಗಳು ಸಂಪೂರ್ಣವಾಗಿ ಇಲ್ಲದಂತಾಗುತ್ತವೆ ಎಲ್ಲ ಜಗತ್ತು ಪರಮಾನಂದದಿಂದ ವ್ಯಾಪಿಸಿ, 'ನಾನು' ಮತ್ತು 'ನೀನು' ಎಂಬುವದು ಕಣ್ಣಿಗೆ ಕಾಣುವದೇ ಇಲ್ಲ ಹೀಗೆ ಅಭೇದಭಾವನೆಯಿಂದ ಶ್ರೀಹರಿಚರಣಗಳನ್ನು ಸೇವಿಸಿದಲ್ಲಿ, ನಾನು, ಸ್ವತಃ ನನ್ನನ್ನು ನಿಶ್ಚಿತವಾಗಿ ಉದ್ಧರಿಸಬಹುದು (ಪಾರುಗಾಣಿಸಬಹುದು) 'ಪಾರುಗಾಣಿಸಬಹುದು' ಎಂಬ ಭವಿಷ್ಯವಾಣಿಯನ್ನು ನುಡಿದಲ್ಲಿ, ಆ ನುಡಿಯಿಂದ ಪಾರುಗಾಣಿಸಲು ವೇಳೆಯಾಗುವದೆಂಬ ಅರ್ಥವಾಗುತ್ತದೆ ಆದರೆ ವಸ್ತುತಃ ಯಾವನು ಶ್ರೀಹರಿಯ ಭಕ್ತನಾದನೋ, ಅವನಿಗೆ ಸಂಸಾರವು ಇರುವದೇ ಇಲ್ಲ ಈ ಪ್ರಕಾರವಾಗಿ ಭಿಕ್ಷುವು ಹಾಡಿದ ಗೀತವು ಶ್ರೀಕೃಷ್ಣನಿಗೆ ಬಹಳೇ ರುಚಿಸಿತು. ಅವನು ಅಂತಃಕರಣದಲ್ಲಿ ಆನಂದಭರಿತನಾದನು ಹಾಗೂ ಉದ್ಧವನ ತಲೆಯನ್ನು ಸೇವರಿಸಿದನು ಇಂತಹ ಆತ್ಮಶಾಂತಿಯು ಉದ್ಧವನಿಗೆ ಲಭಿಸಬೇಕೆಂಬ ಕಳವಳಿಕೆಯಿಂದ ಶ್ರೀಕೃಷ್ಣನು ಉದ್ಧವನಿಗೆ ಏನನ್ನುತ್ತಾನೆ?

## ಪ್ರಕರಣ ೪೩

ಕೈಲಾಸ ಪರ್ವತದಲ್ಲಿಯ ಎಲ್ಲ ಹುಲ್ಲು, ಗಿಡಗಳು, ಪಶುಗಳು, ಪಕ್ಷಿಗಳು ಇಲ್ಲವ ಅಲ್ಲಿ ಯಾರಾರು ಇರುವರೋ, ಅವರೆಲ್ಲರೂ ಶಂಕರನ ಆಜ್ಞಾಧಾರಕರಿರುವರು ಅವರೆಲ್ಲರ ರೂಪದಿಂದ ಶಂಕರನೇ ವಾಸ ಮಾಡುತ್ತಿರುವನು! ಈ ರೀತಿಯಾಗಿ ಬ್ರಹ್ಮಾಂಡದ ಹೊರಗೆ ಶಿವನು ಲೀಲೆಯಿಂದ ಕೈಲಾಸ ಪರ್ವತವನ್ನು ನಿರ್ಮಿಸಿ ಸ್ಥಾಪಿಸಿದನು ಮತ್ತು ಅಲ್ಲಿಯೇ ಭವಾನಿಯ ಜತೆಗ ಅವನು ರಾಜ್ಯವಾಳುತ್ತಾನೆ ಇನ್ನು ವೈಕುಂಠದಲ್ಲಿಯ ಪರಿಸ್ಥಿತಿಯನ್ನು ನಿನಗೆ ಹೇಳುತ್ತೇನೆ ಕೇಳು ಅದನ್ನು ಕೇಳುವಾಗ ಚಿತ್ತವೃತ್ತಿಯು ಸ್ವಾನಂದ ಸ್ಫೂರ್ತಿಯಿಂದ ತುಂಬಿ ತುಳುಕುತ್ತದೆ ಹೀಗ ವೈಕುಂಠದಲ್ಲಿಯ ಸ್ಥಿತಿಯಾಗಿರುವದು ಕಬ್ಬಿನ ರಸ ತೆಗೆದು, ಅದರಿಂದ ಸಕ್ಕರೆಯನ್ನು ತಯಾರಿಸುತ್ತಾರೆ ಹಾಗೂ ಅತ್ಯಂತ ಕುಶಾಗ್ರತೆಯಿಂದ ನಾನಾ ತರಹದ ಪದಾರ್ಥಗಳನ್ನು ಮಾಡುತ್ತಾರೆ ಅದರಂತೆಯೇ ಭಗವಂತನು ಸ್ವಸಾಮರ್ಥ್ಯದಿಂದ, ಚೈತನ್ಯದ ರಸವನ್ನೇ ಅಟ್ಟಿಸಿ ಅದನ್ನು ಅಚ್ಚಿನಲ್ಲಿ ಹಾಕಿ ತನಗೋಸ್ಕರ ಇರಲು ವೈಕುಂಠ ಲೋಕವನ್ನು ನಿರ್ಮಿಸಿದ್ದಾನೆ ತನ್ನ ಲೀಲೆಯಿಂದಲೇ, ಅವತರಿಸಿದ ಸಗುಣ, ಒಳ್ಳೇ ಆಕಾರ ಸುಕುಮಾರ, ಅತೀವ ಸುಂದರ, ನೀಲವರ್ಣ, ಮನೋಹರವಾದಂತಹ ಜ್ಞಾನಮಯ

ಮೂರ್ತಿಯನ್ನು ಶಂಖ, ಚಕ್ರ, ಪದ್ಮ, ಗದೆ ಮುಂತಾದ ನಾಲ್ಕು ಆಯುಧಗಳಿಂದ ಸುಶೋಭಿತವಾದ ನಾಲ್ಕು ಭುಜಗಳುಳ್ಳ ಸಗುಣ ಸ್ವರೂಪ ಗೋವಿಂದನನ್ನು ಕಂಡ ಕಣ್ಣುಗಳು ಆನಂದದಿಂದ ಧನ್ಯವಾಗುತ್ತವೆ—

—ಕಿರೀಟ, ಕುಂಡಲೆ, ಮೇಖಳಾ ಮತ್ತು ಚಿನ್ನದ ಸರವನ್ನು ಧರಿಸಿ ಪೀತಾಂಬರ ವನ್ನುಟ್ಟವನು ಕೊರಳಲ್ಲಿ ಕೌಸ್ತುಭ ಮಣಿಯು ಹೊಳೆಯುತ್ತಿದೆ, ಕಾಲಿನವರೆಗೂ ಅಲೆಯುವ ತುಳಸೀ ವನ-ಮಾಲೆಯು ಕೊರಳಲ್ಲಿ ಶೋಭಿಸುತ್ತದೆ, ಆ ಚರಣದಿಂದ ಉತ್ಪನ್ನವಾದ ನಿರ್ಮಲವಾದ ಗಂಗಾನದಿಯು ಜಗತ್ತನ್ನೇ ಪವಿತ್ರ ಮಾಡುತ್ತದೆ ಅಂತಹ ಗಂಗೆಯನ್ನು ಶಿವನು ತನ್ನ ತಲೆಯ ಮೇಲೆ ಧರಿಸಿದ್ದಾನೆ ಆ ಶ್ರೀಹರಿಯ ಎರಡು ಚರಣಗಳ ವರ್ಣನೆಯನ್ನು ಮಾಡಲುದ್ಯುಕ್ತವಾಗಿ ವೇದಗಳು ಮೌನ ತಾಳಿದವು ಏಕೆಂದರ, ಶ್ರೀಹರಿಯ ಪಾದಗಳು ಅಗಮ್ಯವಾಗಿವೆ ಶ್ರೀಹರಿಯ ಚರಣದ ಮಹತ್ವವು ಬಹಳ ಅಗಾಧವಾಗಿದೆ ಆ ಶ್ರೀಹರಿಯ ಸುಂದರವಾದ ಮುಖದೆದುರು, ಅಮೃತವು ಕೂಡ ನಿಃಸ್ತೇಜವಾಗುತ್ತದೆ ಕಣ್ಣಿಗೆ ಅಪ್ರತಿಮ ಸುಖ ಉಂಟಾಗುತ್ತದೆ ಶ್ರೀಹರಿಯ ಆನಂದದಾಯಕವಾದ ಮುಖವು ಧನ್ಯವಾಗಿರುವದು ಆ ಮುಖವನ್ನು ಅರ್ಧನಿಮಿಷ ದೃಷ್ಟಿಸಿ ನೋಡಿದಲ್ಲಿ, ಕೋಟ್ಯಾವಧಿ ಜನ್ಮದ ದುಃಖವು ಇಲ್ಲದಂತಾಗುತ್ತದೆ ಮತ್ತು ಅದರಿಂದ ಮೂರು ಲೋಕದಲ್ಲಿಯೂ ಹಿಡಿಸಲಾರದಷ್ಟು ಆನಂದವು ಉಂಟಾಗುತ್ತದೆ ಇಂತಹ ಆನಂದವನ್ನೀಯುವ ಶ್ರೀಹರಿಯ ಮುಖವು ಧನ್ಯವಿರುವದು ಯಾವನ ಮುಖ ಚಂದ್ರವನ್ನು ನೋಡಿದಾಗ, ದ್ವಂದ್ವ ದುಃಖದ ತೊಂದರೆಯು ಆಗುವದಿಲ್ಲವೋ, ಉತ್ತರೋತ್ತರ ಪರಮಾನಂದವೇ ಪ್ರಾಪ್ತವಾಗುತ್ತದೆಯೋ, ಹೀಗೆ ಅವನೇ ಎಲ್ಲ ಜಗತ್ತಿನ ಆತ್ಮಾರಾಮನಾಗಿರುತ್ತಾನ ಅವನೇ ಆನಂದದ ಮೂಲಾಗ್ರನಾಗಿದ್ದಾನೆ ಯಾವನ ಬಿಲ್ಲಿನಂತಿದ್ದ ಹುಬ್ಬುಗಳು ನೀರಿಕ್ಷಿಸುತ್ತಿರುವಾಗ, ಸ್ವಲ್ಪ ವಕ್ರವಾದರೂ ಕೂಡ ಅನೇಕ ಬ್ರಹ್ಮಾಂಡಗಳು ಉತ್ಪನ್ನವಾಗುತ್ತವೆಯೋ ಮತ್ತು ಯಾವನ ರೋಮ ರಂಧ್ರಗಳಲ್ಲಿ ಕೋಟ್ಯಾವಧಿ ಬ್ರಹ್ಮಾಂಡಗಳಿರುತ್ತವೆಯೋ, ಅಂತಹ ಶ್ರೀಹರಿಯು ವೈಕುಂಠದಲ್ಲಿ ವಾಸ ಮಾಡುತ್ತಾನೆ ಅವನ ಕೃಪಾದೃಷ್ಟಿಯಾಯಿತೆಂದರೆ ಅಹಂಕಾರದ ಗಂಟು ಕರಗಿ ಹೋಗುತ್ತದೆ ಮತ್ತು ಜಗತ್ತಿನಲ್ಲಿ ಬೇರೇನೂ ಕಾಣದಂತೆ ಮಾಡುವ ಶ್ರೀಹರಿಯು ವೈಕುಂಠದಲ್ಲಿ ವಿರಾಜಮಾನನಾಗಿದ್ದಾನೆ. ಯಾವ ಭಗವಂತನ ನಾಮ ಸ್ಮರಣದಿಂದ ಜನ್ಮ ಮರಣವು ಇಲ್ಲದಂತೆ ಆಗುತ್ತದೆಯೋ, ಕರ್ಮಾಕರ್ಮಗಳನ್ನು ಬೇರುಸಹಿತ ಕಿತ್ತೊಗೆಯುತ್ತದೆಯೋ ಆ ಪುರುಷೋತ್ತಮನು ವೈಕುಂಠದಲ್ಲಿ ವಾಸ ಮಾಡುತ್ತಾನೆ. ಆ ವೈಕುಂಠದಲ್ಲಿ ನಿಜವಾಗಿಯೂ ನೋಡಿದರೆ ಎಲ್ಲ ಜನರೂ ನಾಲ್ಕು ಭುಜವುಳ್ಳವರೇ ಇರುತ್ತಾರ ಎಲ್ಲ ಜನರೂ ಮೋಡದಂತೆ ಶ್ಯಾಮ ವರ್ಣ ದವರು, ಪೀತಾಂಬರವನ್ನುಟ್ಟವರು ಮತ್ತು, ಎಲ್ಲರೂ, ಕೈಗಳಲ್ಲಿ ಶಂಖ ಚಕ್ರ

ಮುಂತಾದ ಆಯುಧಗಳನ್ನು ಧರಿಸಿದವರು ಇರುತ್ತಾರೆ ಎಲ್ಲರ ಸ್ವರೂಪವು ಒಂದೇ ಸನುನಾಗಿದ್ದು ಎಲ್ಲರೂ ಒಂದೇ ಸಮನಾಗಿ ಕಾಣುತ್ತಾರೆ—

—ಎಲ್ಲಿ ಅಪ್ರತಿಮ ಸುಂದರನಾದ ಶ್ರೀಹರಿಯು ವಾಸ ಮಾಡುತ್ತಿರುವನೋ ಅಲ್ಲಿ ಯಾರೊಬ್ಬರೂ ಕುರೂಪವಾಗಿ ಕಾಣಿಸುವದಿಲ್ಲ ಅಲ್ಲಿ ಆದಿದೈವಿಕ ಇಲ್ಲವೆ ಆಧಿಭೌತಿಕ ಕಷ್ಟಗಳಿರುವದಿಲ್ಲ ವಿಷಯಾವಸ್ಥೆಯ ಉಪಾಧಿಗಳಿರುವದಿಲ್ಲ ಮತ್ತು ಉದ್ಧವಾ! ಅಲ್ಲಿ ನಿಜವಾಗಲೂ ಸ್ತ್ರೀ ಪುರುಷರ ಬುದ್ಧಿಯು ಒಂದೇ ರೀತಿಯಾಗಿರುತ್ತದೆ ಅಲ್ಲಿ ಹಸಿವೆ ನೀರಡಿಕೆಗಳಿರುವದಿಲ್ಲ ಕಾಮ ಕ್ರೋಧಗಳಿರುವದಿಲ್ಲ ಸುಖ ದುಃಖದ ದ್ವಂದ್ವ ದುಃಖಗಳಿರುವದಿಲ್ಲ ಜನ್ಮ ಮರಣವಂತೂ ಇಲ್ಲವೇ ಇಲ್ಲ ಹೀಗೆ ವೈಕುಂಠಲೋಕವಿರುತ್ತದೆ ಲಕ್ಷ್ಮಿಯು ಒಂದು ಸಲವಾದರೂ ತಮ್ಮ ಕಡೆಗೆ ಕೃಪಾದೃಷ್ಟಿಯಿಂದ ಅವಲೋಕಿಸಬೇಕೆಂದು ದೇವ ದೇವತೆಗಳ ಸಮೂಹವು ಪ್ರಯತ್ನಿಸುತ್ತಿರುತ್ತದೆ ಆದರೆ ಅಂತಹ ಲಕ್ಷ್ಮಿಯು ವೈಕುಂಠದಲ್ಲಿ ಸ್ವತಃ ಥಳಿ ರಂಗೋಲಿಗಳನ್ನು ಮಾಡುತ್ತಿರುತ್ತಾಳೆ ಆ ವೈಕುಂಠದಲ್ಲಿ ದೀನರಕ್ಷಕನಾದ ಜಗನ್ನಾಥನು ತನ್ನ ಭಕ್ತರನ್ನು ಉದ್ಧರಿಸುವದಕ್ಕಾಗಿ ಸ್ವಲೀಲೆಯಿಂದ ವಾಸವಾಗಿದ್ದಾನೆ ಅಂತ್ಯ ಕಾಲದಲ್ಲಿ ಶ್ರೀಹರಿಯ ನಾಮಸ್ಮರಣವನ್ನು ಮಾಡಿ ಕೋಟ್ಯಾನುಕೋಟಿ ಜೀವಗಳು ಉದ್ಧಾರಗತಿಯನ್ನು ಹೊಂದಿದವು ದೀನೋದ್ಧಾರಕನಾದ ದಯಾಘನನಾದ ಶ್ರೀಹರಿಯು ವೈಕುಂಠದಲ್ಲಿ ಕೃಪೆ ಮಾಡುವದಕ್ಕಾಗಿ ವಾಸಿಸುತ್ತಿದ್ದಾನೆ—

—ಯಾರ ಭಾವನೆಯು ಹೇಗಿರುವದೋ ಹಾಗೆಯೇ ಅವನು ಅವರ ಮನದಾಸೆಯನ್ನು ಪೂರ್ಣ ಮಾಡುತ್ತಾನೆ ಮತ್ತು ಐದನೆಯ ಪುರುಷಾರ್ಥವನ್ನೀಯುವದಕ್ಕಾಗಿ ಶ್ರೀಹರಿಯು ವೈಕುಂಠದಲ್ಲಿ ವಾಸ ಮಾಡುತ್ತಿದ್ದಾನೆ ಬೇರೆ ಬೇರೆ ಜನರ ಗಣನೆಯನ್ನು ಬ್ರಹ್ಮಾಂಡದ ಎಲ್ಲ ಸಂಖ್ಯೆಯನ್ನೂ, ವೈಕುಂಠ ಮತ್ತು ಕೈಲಾಸದ ನಿರ್ಮಿತಿಯನ್ನೂ, ಸವಿಸ್ತಾರವಾಗಿ ವಿಶದಪಡಿಸಿದೆನು ವೈಕುಂಠ ಕೈಲಾಸಾದಿ ಲೋಕಗಳನ್ನು ಹೇಳಿದೆನು ಆದರೆ ಆ ಲೋಕಗಳನ್ನು ಪ್ರಾಪ್ತಿಮಾಡಿಕೊಳ್ಳುವ ಜನರು ಯಾರು? ಎಂದು ನಿನ್ನ ಮನದಲ್ಲಿ ವಿಕಲ್ಪ ಉಂಟಾಗಬಹುದೆಂದು ಅದರ ವಿಷಯವಾಗಿಯೂ ನಿನಗೆ ನಿರೂಪಣೆಯನ್ನು ಹೇಳುವೆನು ಕೇಳು—

—ಮಹರ್ಲೋಕ ಜನೋಲೋಕ, ತಪೋಲೋಕ, ಸತ್ಯಲೋಕ ಮತ್ತು (ಯಾವುದರ ರಚನೆಯು ಅಚ್ಚರಿಯುಳ್ಳದ್ದಾಗಿರುವದೋ, ಅಂತಹ) ವೈಕುಂಠಲೋಕದ ಪ್ರಾಪ್ತಿಮಾಡಿಕೊಳ್ಳುವ ಜನರು ಯಾರೆಂಬುದನ್ನು ಯದುನಾಯಕನಾದ ಶ್ರೀಕೃಷ್ಣನು ಹೇಳುತ್ತಿದ್ದಾನೆ ಚಿತ್ತವನ್ನು ಸ್ಥಿರಗೊಳಿಸುವದಕ್ಕಾಗಿ, ಪ್ರಾಣಾಪಾನದ ಸಮಾನತೆಯನ್ನು ಸಾಧ್ಯಮಾಡಿ ಷಟ್-ಚಕ್ರವನ್ನು ಭೇದಿಸಿ, ನಿಜಾತ್ಮತೆಯನ್ನು ಹೊಂದುವಷ್ಟರಲ್ಲಿ, ಆಯುಷ್ಯವು ಮುಗಿದು ಮರಣವು ಬರುತ್ತದೆ ಈ ರೀತಿಯಾಗಿ ಮರಣ ಹೊಂದಿದ ಯೋಗಿ ಜನರಿಗೆ

ಮಹಾಲೋ೯ಕ, ಜನೋಲೋಕ ಮುಂತಾದ ಉಚ್ಚತಮವಾದ ಲೋಕಗಳಿಗೆ ಹೋಗಲು ಬರುವದು ಯಾವನು ಗೃಹಸ್ಥನಿದ್ದು ಬ್ರಹ್ಮಚಾರಿಯಿರುವನೋ ಹಾಗೂ ನಿಯಮಿತವಾಗಿ ಬ್ರಹ್ಮಚರ್ಯ ವ್ರತವನ್ನು ಪಾಲಿಸುವನೋ, ಯಾವನು ಕನಸಿನಲ್ಲಿ ಕೂಡ ಸ್ತ್ರೀಯನ್ನು ಮುಟ್ಟುವದಿಲ್ಲವೋ ಮತ್ತು ಆತ್ಮಜ್ಞಾನ ಪ್ರಾಪ್ತಿಗಾಗಿ ಸದ್ಗುರುವಿನ ಸೇವೆಯನ್ನು ಮಾಡುವನೋ, ಯಾವನು ಭಿಕ್ಷಾನ್ನಗಳ ಮೇಲೆ ಜೀವಿಸಿರುವನೋ, ಯಾವನು ದೃಢವೈರಾಗ್ಯಶಾಲಿಯಿರುವನೋ, ಇಲ್ಲವೆ ಭಿಕ್ಷೆಯನ್ನು ಸ್ಪರ್ಶಿಸುವದೂ ಇಲ್ಲವೋ ಮತ್ತು ಆತ್ಮಜ್ಞಾನಪ್ರಾಪ್ತಿಗಾಗಿ ಸದ್ಗುರುವಿನ ಸೇವೆಯನ್ನು ಮಾಡುವನೋ, ಅವನಿಗೆ ಆತ್ಮಜ್ಞಾನವಾಗುವ ಸಮಯದಲ್ಲಿ ಅವನು ಮರಣ ಹೊಂದಿದಲ್ಲಿ, ಮಹಾರ್ಜನಾದಿ ಲೋಕದಲ್ಲಿಯೇ ಹೋಗುತ್ತಾನ—

—ಯಾರು ಗೃಹಸ್ಥಾಶ್ರಮದಲ್ಲಿ ಅಚ್ಚುಕಟ್ಟಾಗಿರುವರೋ, ಯಾರು ಅಗ್ನಿಸೇವೆಗಾಗಿ ಅಗ್ನಿಹೋತ್ರ ಮಾಡುವರೋ, ಯಾರು ಸ್ವಧರ್ಮಾಚರಣೆಯಿಂದಲೇ ಚಿತ್ತಶುದ್ಧಿಯನ್ನು ಮಾಡಿಕೊಳ್ಳುವರೊ ಮತ್ತು ಯಾರು ಬ್ರಾಹ್ಮಣರ ಹಾಗೂ ದೇವರ ಸೇವೆಯನ್ನು ಮಾಡುವರೊ, ಯಾರು ಭಾವಿಕ ಭಕ್ತರಿದ್ದು ಪ್ರಾಣಿಮಾತ್ರಗಳ ವಿಷಯದಲ್ಲಿ ದಯಾದ್ರರಿರುವರೋ, ಯಾರು ಸತ್ಯ ಮಾತನಾಡುವವರಿದ್ದು ಸಾತ್ವಿಕರಿರುವರೋ, ಯಾರು ಆತ್ಮಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವವರಿರುವರೊ, ಯಾರು ಗುರುಭಜನೆಯಲ್ಲಿ ವಂಚಕರಾಗುವದಿಲ್ಲವೋ, ಇಂತಹ ಜನರು ಗುರುಕೃಪೆಯಿಂದ ಆತ್ಮಜ್ಞಾನ ಸಂಪಾದಿಸಿದ ನಂತರ, ಸನಾತನ ಬ್ರಹ್ಮಪ್ರಾಪ್ತಿಯಾಗುವಷ್ಟರಲ್ಲಿ ಅವರ ಆಯುಷ್ಯರೂಪಿ ಧನವು ವ್ಯಯವಾಗಿ, ಅವರು ಮರಣ ಹೊಂದುತ್ತಾರೆ ಅದರಿಂದ ಬ್ರಹ್ಮಪ್ರಾಪ್ತಿಗ ವಿಘ್ನವಾದರೂ, ಅವರು ಊರ್ಧ್ವಗತಿಯನ್ನು ಹೊಂದುತ್ತಾರೆ ಮತ್ತು ಅವರ ಉಪಾಸನೆ ಮತ್ತು ವಿರಕ್ತಿಗೆ ಅನುಸರಿಸಿ ಅವರು ಮಹರ್ಜನಾದಿ ಲೋಕಕ್ಕೆ ಹೋಗುತ್ತಾರ

## ಪ್ರಕರಣ ೪೪

ಎಲ್ಲ ಪೂಜಗಳಲ್ಲಿ ಪೂಜನೀಯನಾದಂತಹ ಮತ್ತು ಪೂಜಿಸಲು ಯೋಗ್ಯನಾದ ಶ್ರೇಷ್ಠತ್ವದಲ್ಲಿ ಶ್ರೇಷ್ಠನಾದ ಹಾಗೂ ಕೇವಲ ನನ್ನ ಆತ್ಮನೇ ಆದ 'ಗುರುರಾಜ'ನು ಎಲ್ಲರಿಗೂ ಪೂಜನೀಯನಾಗಿರುತ್ತಾನೆ ಸದ್ಭಾವನೆಯಿಂದ ಅವನ (ಗುರುವಿನ) ಚರಣಗಳಿಗ ಶರಣು ಹೋದಲ್ಲಿ, ಪೂರ್ಣಬ್ರಹ್ಮನಾದ ನನಗೆ ಸುಖವಾಗುತ್ತದೆ ಮದ್ರೂಪದಿಂದ (ಅಭೇದ ಭಾವನೆಯಿಂದ) ಅವನನ್ನು ಸ್ತುತಿಸಲು, ಪರಮಾತ್ಮನಾದ ನಾನು ಸಂತುಷ್ಟನಾಗುತ್ತೇನೆ ಸದ್ಗುರುವಿನ ನಾಮಸ್ಮರಣವು, ದಾರುಣ

ವಾದ ಭವಭಯವನ್ನು ನಾಶಗೊಳಿಸುತ್ತದೆ ಮತ್ತು ಜನ್ಮ ಮರಣದಿಂದ ಮುಕ್ತಗೊಳಿಸಿ, ನಿಜಬೋಧದ ತೃಪ್ತಿಯನ್ನು ಕೊಡುತ್ತದೆ ಪರಮಾತ್ಮನಾದ (ನಾರಾಯಣನು) ನಾನು ಗುರುರೂಪದಿಂದ ಪ್ರಕಟನಾಗಿ, ಪರಿಪೂರ್ಣ ಪರಬ್ರಹ್ಮನೆಂದು, ಶಿಷ್ಯನ ಮುಖಾಂತರವಾಗಿ ಪ್ರಕಾಶಿಸುತ್ತೇನೆ ಬ್ರಹ್ಮನ ಪರಬ್ರಹ್ಮತ್ವವು ಸದ್ಗುರುವಿನಿಂದಲೇ ಸತ್ಯತ್ವಕ್ಕೆ ಬಂದಿರುತ್ತದೆ ಗುರುವಿನ ಮಹಿಮೆಯು ಅಗಾಧವಾಗಿದೆ ಹಾಗೂ ಗೂಢವಾಗಿದೆ ತಾತ್ಪರ್ಯವೇನೆಂದರೆ, ಜ್ಞಾನಘನನಾದ ಸದ್ಗುರುವು ಹರಿಹರರಿಗೂ ಕೂಡ ಪೂಜನೀಯನಿರುತ್ತಾನೆ ಸದ್ಗುರುವು ನನ್ನ ಸತ್-ಸ್ವರೂಪದ ಅಧಿಷ್ಠಾನವಾಗಿದ್ದು ಎಂಟನೆಯ ಪೂಜಾಸ್ಥಾನವಾಗಿದ್ದಾನೆ ಉದ್ಧವಾ! ಈ ನನ್ನ ಎಂಟನೆಯ ಪೂಜಾಸ್ಥಾನವನ್ನು ನಿರಂತರವಾಗಿ ನೆನೆಸಿದಲ್ಲಿ, ಆ ನೆನಪಿನಿಂದಲೇ ನನ್ನ ಪೂಜೆಯನ್ನು ಮಾಡಿದಂತಾಗುತ್ತದೆ ಈ ಪ್ರಕಾರವಾಗಿ ನಾನು ನನ್ನ ಎಂಟು ಪೂಜಾಸ್ಥಾನಗಳನ್ನು ಉತ್ತಮ ರೀತಿಯಿಂದ ನಿನಗ ಹೇಳಿದೆನು

ಹೃದಯದಲ್ಲಿ ನನ್ನ ಪೂಜೆಯ ಸ್ಥಾನವಿರುತ್ತದೆ ಅಲ್ಲಿ ಮನಸ್ಸಿನಿಂದಲೇ ಮನಸ್ಸಿನ ಪೂಜೆಯನ್ನು ಮಾಡಬೇಕಾಗುವದು ಮನಃಕಲ್ಪಿತ ಮೂರ್ತಿಯನ್ನು ಮನಸ್ಸಿನಿಂದೇ ಪೂಜಿಸುವ ರೀತಿಯಾಗಿರುತ್ತದೆ ನನ್ನ ಮುಖ್ಯ ಅಧಿಷ್ಠಾನವೆಂದರೆ ಬ್ರಹ್ಮಮೂರ್ತಿಯಾದ 'ಬ್ರಾಹ್ಮಣನು' ಇರುವನು ದಾಸನಂತೆ (ಸೇವಕನಂತೆ) ಅವರ ಆಜ್ಞೆಯನ್ನು ಪಾಲಿಸುವದೇ, ಅವರ ಪೂಜೆಯ ಪ್ರಕಾರವಾಗಿದೆ ಬ್ರಹ್ಮನಿಗೂ ಕೂಡ ಯಾವನಿಂದ ಬ್ರಹ್ಮತ್ವವು ಪ್ರಾಪ್ತವಾಗುತ್ತದೆಯೋ, ಆ 'ಸದ್ಗುರು'ವಂತೂ ಎಲ್ಲದರಕ್ಕಿಂತಲೂ ನನ್ನ ಶ್ರೇಷ್ಠ ಮತ್ತು ಪವಿತ್ರ ಪೂಜೆಯ ಸ್ಥಾನವಾಗಿರುತ್ತಾನೆ ಅವನ ಪೂಜೆಯು ಈ ಪ್ರಕಾರವಾಗಿರುತ್ತದೆ ಜೀವ ಪ್ರಾಣಸಹಿತವಾಗಿ ಸದ್ಗುರುವಿಗೆ ಅನನ್ಯವಾಗಿ ಶರಣು ಹೋಗಬೇಕು ಅವನ ವಚನೋಕ್ತಿಗೆ ತನ್ನ ಪ್ರಾಣವನ್ನು ಅರ್ಪಿಸಬೇಕು ಗುರುವಿನ ಕೀಳು ಸೇವೆಯನ್ನೂ ಕೂಡ ಪ್ರೇಮದಿಂದ ಮಾಡುವದೇ ಅವನ ಪೂಜೆಯು ರೀತಿಯಾಗಿದೆ (ವಿಧಾನವಾಗಿದೆ) ಇದರಿಂದಲೇ ಸಾಧಕನಿಗೆ ಸುಖವಾಗುತ್ತದೆ ಸದ್ಗುರುವಿನ ಸೇವೆಯನ್ನು ಮಾಡಿದಲ್ಲಿ, ಬ್ರಹ್ಮಸಾಯುಜ್ಯತೆಯು ಚರಣಕ್ಕೆರಗುತ್ತದೆ ಗುರುಸೇವೆಗಿಂತ ಶ್ರೇಷ್ಠ ಸಾಧನವು ಬೇರೆ ಯಾವದೂ ಇರುವದಿಲ್ಲ ಸದ್ಗುರು ಸ್ವರೂಪ ಅಖಂಡ, ಪೂರ್ಣಬ್ರಹ್ಮವಾಗಿದೆ ಅಲ್ಲಿ ನಾವು ಆವಾಹನ ಮತ್ತು ವಿಸರ್ಜನವನ್ನು ಎಂದಿಗೂ ಮಾಡಬಾರದು ನಿಷ್ಕಪಟ ಭಾವನೆಯಿಂದ ಸದ್ಗುರುವಿಗೆ ಯಾವನು ಅನನ್ಯನಾಗಿ ಶರಣು ಹೋಗುವನೋ, ಅವನ ಚರಣಗಳನ್ನು ನಾನು ಕೂಡ ವಂದಿಸುವೆನು ಅವನು ಈ ರೀತಿಯಾಗಿ ಧನ್ಯನಾಗುವನು ಯಾವ ತರಹದ ಲೋಭವೂ ಇಲ್ಲದೆಯೇ ಸುಮ್ಮನೆ ಪೂಜಿಸಿದಲ್ಲಿ ಭಗವಂತನಿಗ ಸಂತೋಷವಾಗುತ್ತದೆ

## ಪ್ರಕರಣ ೪೫

ಎಲ್ಲ ಪ್ರಾಣಿಮಾತ್ರಗಳಲ್ಲಿ ಭಗವಂತನಿರುವನೆಂಬ ದೃಷ್ಟಿಯಿಂದ ನೋಡುವದೇ ನನ್ನ ಹತ್ತಿರವಿದ್ದ ಐಶ್ವರ್ಯವಾಗಿದೆ ಮತ್ತು ಆ ಐಶ್ವರ್ಯದ ಬಲದಿಂದಲೇ ನಾನು ಕೋಟ್ಯಾವಧಿ ಸೃಷ್ಟಿಯನ್ನು ಉತ್ಪನ್ನ ಮಾಡಿಯೂ ಅಕರ್ತಾ ಆಗಿರುವೆನು ಆತ್ಮದೃಷ್ಟಿಯಿಂದ ನನ್ನೆಡೆಗೆ ನೋಡಲಾಗಿ, ಎಲ್ಲ ಪ್ರಾಣಿಗಳಲ್ಲಿ ಭಗವತ್ ದೃಷ್ಟಿಯನ್ನಿಡುವದೇ ನನ್ನ ಉತ್ತಮವಾದ ಭಕ್ತಿಯಾಗಿರುವದು ಮತ್ತು ಇದರಿಂದಲೇ ಕೋಟ್ಯಾವಧಿ ಬ್ರಹ್ಮಾಂಡಗಳ ತರಣೋಪಾಯವಾಗುವದು ಎಲ್ಲ ಭೂತಾಕೃತಿಗಳಲ್ಲಿ ಭಗವಂತನ ಭಾವನೆಯನ್ನಿಡುವ ಭಕ್ತಿಯನ್ನೇ ಕಲ್ಪಾರಂಭದ ಸಮಯದಲ್ಲಿ ನಾಭಿಕಮಲದಿಂದ ಪುಟ್ಟಿದ ಬ್ರಹ್ಮದೇವನಿಗೆ ನಾನು ಉಪದೇಶಿಸಿದೆನು ವ್ರತ, ತಪಶ್ಚರ್ಯೆ, ದಾನವನ್ನು ಮಾಡಿದರೂ, ಯೋಗ, ಯಜ್ಞ ಮತ್ತು ಧ್ಯಾನವನ್ನು ಮಾಡಿದರೂ ಅಥವಾ ವೇದಶಾಸ್ತ್ರಾರ್ಥದ ಜ್ಞಾನವನ್ನು ಸಂಪಾದಿಸಿದರೂ, ಇವೆಲ್ಲವುಗಳೂ ನನ್ನ ಭಕ್ತಿಯನ್ನು ಸರಿಗಟ್ಟಲಾರವು ಸಾಧಕನು ಬಹಳ ಪ್ರಯತ್ನದಿಂದ ನಾನಾ ತರಹದ ಕೋಟಿಗಟ್ಟಲೆ ಸಾಧನೆಗಳನ್ನು ಮಾಡಿದರೂ, ನನ್ನ ಭಕ್ತನ ಭೆಟ್ಟಿಯಾಗದ ಹೊರತು ನನ್ನ ಪ್ರೇಮದ ವಾರ್ತೆಯು ಅವರಿಗೆ ಸಿಗಲಾರದು ನನ್ನ ಭಕ್ತರ ಸಹವಾಸದಿಂದಲೇ ಅವರಿಗ (ಸಾಧಕ ಜನರಿಗ) ನನ್ನ ಭಕ್ತಿಯ ಪ್ರಾಪ್ತಿಯಾಗುತ್ತದೆ ಉದ್ಧವಾ! ಅಭೇದ ಭಜನೆಯಿಂದಲೇ ನನ್ನ ಪ್ರಾಪ್ತಿಯಾಗುವದೆಂಬುದನ್ನು ನಿಜವಾಗಿಯೂ ತಿಳಿದುಕೋ ಎಲ್ಲ ಪ್ರಾಣಿಮಾತ್ರಗಳಲ್ಲಿ ಭಗವದ್ಭಜನೆಯನ್ನು ಮಾಡುವ ಲಕ್ಷಣವನ್ನು ಕೇಳು ಬೇರೆ ಬೇರೆ ಪ್ರಕೃತಿಯ ಜನರನ್ನು ಕಂಡಾಗಲೂ, ಅವರ ಬಗ್ಗೆ ಮನಸ್ಸಿನಲ್ಲಿ ವಿಷಮ ಭಾವನೆಯನ್ನು ತಾರದೆ ಅವರಲ್ಲಿ ಸಂಪೂರ್ಣ ಬ್ರಹ್ಮಭಾವನೆಯನ್ನೇ ಇಡಬೇಕು -

—ದುಷ್ಟನು, ದುರಾತ್ಮನು, ಗುರುತಿಲ್ಲದವನು, ನಷ್ಟನು, ಶೂದ್ರನು, ಚಾಂಡಾಳನು ಹಾಗೂ ಪತನ ಹೊಂದಿದವನು ಇವರೆಲ್ಲರಲ್ಲಿಯೂ ಶುದ್ಧ ಬ್ರಹ್ಮಭಾವನೆಯನ್ನಿಡುವದೇ 'ಮಾನಸಿಕ' (ಮನಸ್ಸಿನ) ಭಜನೆಯಾಗಿರುವದು ಎಲ್ಲ ಪ್ರಾಣಿಮಾತ್ರಗಳಲ್ಲಿ ಭಗವಂತನೇ ವಾಸ ಮಾಡಿರುವನೆಂದು ಅರಿತು ಅವರ ವರ್ಮಕ್ಕೆ ತಗಲುವಂತಹ ನಿಷ್ಠುರವಾದ ನುಡಿಗಳನ್ನು ಎಂದಿಗೂ ನುಡಿಯಬಾರದು ತಮ್ಮ ಪ್ರಾಣ ಬಿಡುವ ಸಮಯದಲ್ಲೂ, ಯಾರು ಜನರ ಗುಣದೋಷಗಳನ್ನು, ವಾಣಿಯಿಂದ ಉಚ್ಚರಿಸುವದಿಲ್ಲವೋ ಅದೇ ಅವರ ನಿಜವಾದ 'ವಾಚಿಕ'

(ವಾಣಿಯ) ಭಜನೆಯಾಗಿರುವದು ಪ್ರಾಣಿಮಾತ್ರಗಳಿಗೆ ಉಪಕಾರವಾಗುವಂತಹ ವ್ಯವಹಾರವನ್ನೇ ಅವನು ತನ್ನ ದೇಹದಿಂದ ಮಾಡುತ್ತಾನೆ ಮತ್ತು ಯಾರಾದರೂ ಅವನ ಹೃದಯವನ್ನು ಭೇದಿಸಿದರೂ, ಅವನು ಅವರ ಮೇಲೆ ಕೈಯೆತ್ತುವದಿಲ್ಲ ಸ್ವತಃ ಅಪಕಾರವನ್ನು ಸಹನೆ ಮಾಡಿ ಅಪಕಾರವನ್ನು ಮಾಡುವವರಿಗೆ ಅವನು ಒಳ್ಳೆಯದನ್ನೇ ಮಾಡುತ್ತಾನೆ ಅವನ ದೇಹದ ವ್ಯವಹಾರವು ಈ ರೀತಿಯಾಗಿ ನಡೆದಿರುತ್ತದೆ ಇದೇ ಅವನ 'ಕಾಯಿಕ' (ದೇಹದ) ಭಜನೆಯಾಗಿರುತ್ತದೆ ಈ ಪ್ರಕಾರವಾಗಿ ದೇಹದಿಂದ, ವಾಣಿಯಿಂದ ಹಾಗೂ ಮನಸ್ಸಿನಿಂದ ಎಲ್ಲ ಪ್ರಾಣಿ ಮಾತ್ರಗಳಲ್ಲಿ ಭಗವದ್ಭಜನೆಯನ್ನು ಮಾಡುವದೇ, ಪ್ರಾಮುಖ್ಯವಾಗಿ ಶ್ರೇಷ್ಠ ಸಾಧನ ವಾಗಿರುವದೆಂದು, ಜ್ಞಾನಿಗಳಾದ ಭಕ್ತರು ಅನ್ನುತ್ತಾರೆ ಇದೊಂದೇ ಬ್ರಹ್ಮಪ್ರಾಪ್ತಿಗ ಕಾರಣವಾದ, ಸುಲಭ ಸಾಧನವಾಗಿರುತ್ತದೆ ದೇವಕಿಯ ಆಣೆಗೂ, ಇದಕ್ಕೆ ನನ್ನ ಪೂರ್ಣ ಸಮ್ಮತಿಯಿರುವದು ಈ ಭಜನಧರ್ಮವು ಅತ್ಯಂತ ಪವಿತ್ರವಾಗಿದ್ದು, ಇದರಲ್ಲಿ ವಿಘ್ನಗಳ ಬಾಧೆಯು ಎಳ್ಳಷ್ಟೂ ಆಗುವದಿಲ್ಲ

## ಪ್ರಕರಣ ೪೬

ಎಲ್ಲ ಪ್ರಾಣಿ ಮಾತ್ರಗಳಲ್ಲಿ ನನ್ನ ಭಜನೆಯನ್ನು ಮಾಡುವದು ಮತ್ತು ಎಲ್ಲ ಕರ್ಮಗಳನ್ನು ನನಗೆ ಅರ್ಪಿಸುವ ಬುದ್ಧಿಯೇ 'ಮಹಾಬುದ್ಧಿ'ಯಾಗಿರುತ್ತದೆ ಇದರ ಸಹಾಯದಿಂದಲೇ ಅವರು ಸ್ವತಃ ಪೂರ್ಣಬ್ರಹ್ಮನಾಗುತ್ತಾರೆ ಇದಕ್ಕೇ ಚತುರ ಜನರ ಗೂಢ ಚಾತುರ್ಯವೆನ್ನಬೇಕು ಏಕೆಂದರೆ ನಾಶಗೊಳ್ಳುವ ಶರೀರದ ಸಹಾಯದಿಂದ ಭಜನೆಯನ್ನು ಮಾಡಿ, ಸತ್ಯ ಬ್ರಹ್ಮನ ಪ್ರಾಪ್ತಿಯನ್ನು ಮಾಡಿಕೊಳ್ಳುತ್ತಾರೆ ಮೊಟ್ಟ ಮೊದಲು ಮಾಯೆಯೇ ಸುಳ್ಳಾಗಿರುವದು ಮತ್ತು ಆ ಮಾಯೆಯ ಕಲ್ಪನೆಯಿಂದ ಉತ್ಪನ್ನವಾದ ದೇಹವೂ ಸುಳ್ಳಾಗಿರುವದು ಆದರ ಆ ದೇಹದ ಕರ್ಮವನ್ನು ನನಗೆ ಅರ್ಪಿಸುವದರಿಂದ, ಅವರು ಸ್ವತಃ ಬ್ರಹ್ಮ ಸ್ವರೂಪವಾಗುತ್ತಾರೆ ಸುಳ್ಳು ದೇಹದ ಭಜನೆಯಿಂದ ಸತ್ಯಸ್ವರೂಪ ಬ್ರಹ್ಮನನ್ನು ಹೊಂದುವದೆಂದರೆ, ಹೊಟ್ಟು (ತವಡು) ಕೊಟ್ಟು ಧಾನ್ಯದ ರಾಶಿಯನ್ನೇ ತೆಗೆದುಕೊಂಡಂತೆ ಆಗಿರುತ್ತದೆ ಇಲ್ಲವೆ ಒಡದ ಕಾಜಿನ ತುಂಡನ್ನು ಕೊಟ್ಟು ಚಿಂತಾಮಣಿಯನ್ನು ಗಂಟಿಗೆ ಕಟ್ಟಿದಂತೆ ಅಥವಾ ಇಟ್ಟಂಗಿಯ ಬದಲಾಗಿ ಬಲಮುರಿ ಶಂಖವನ್ನು ಎತ್ತುವಂತೆ ಆಗಿದೆ ಅದರಂತೆ ಮಿಥ್ಯಾದೇಹದ ಕರ್ಮಾಚರಣದಿಂದ ಜೀವಕ್ಕೆ ದೃಢತರವಾದ ಬಂಧನವು ಪ್ರಾಪ್ತ ವಾಗುತ್ತದೆ ಆದರೆ ಆ ಕರ್ಮವನ್ನು ನನಗೆ ಅರ್ಪಿಸಿದಲ್ಲಿ ಅವನು ಸ್ವತಃ ಪರಿಪೂರ್ಣ ಬ್ರಹ್ಮನಾಗುತ್ತಾನೆ ಅನಿತ್ಯವಾದ ದೇಹದಿಂದ ನಿತ್ಯ ವಸ್ತುವಿನ ಲಾಭವಾಗುತ್ತದೆ ಇದೇ ಬುದ್ಧಿವಂತನ ಶ್ರೇಷ್ಠ ಬುದ್ಧಿಯಾಗಿದೆ ಇದಕ್ಕೆ 'ಜ್ಞಾನದ ಸಂತೋಷ'ವೆಂದು

ಅನ್ನುತ್ತಾರೆ ಈ ರೀತಿಯಾಗಿ ಪರಮಶುದ್ಧವಾದ ಪರಮಾರ್ಥವನ್ನು ಶ್ರೀಕೃಷ್ಣನು ತನ್ನ ಮುಖದಿಂದ ಹೇಳಿದನು

## ಪ್ರಕರಣ ೪೭

ಯಾರು ಮನೆ, ಮಠ, ಹೆಂಡಿರು, ಮಕ್ಕಳು, ಸಂಪತ್ತು ಮತ್ತು ಪ್ರಾಣವನ್ನು, ದೇಹ, ಮನಸ್ಸು ಹಾಗೂ ವಾಣಿಯಿಂದ, ನಿಷ್ಕಾಮ ಬುದ್ಧಿಯಿಂದ ನನಗೆ ಅರ್ಪಿಸುತ್ತಾರಯೋ, ಅವರೇ ನನ್ನ ಅನನ್ಯ ಭಕ್ತರಿರುತ್ತಾರ. ಇಂತಹ ಭಕ್ತರಿಗೆ ಈ ಜ್ಞಾನದ ಉಪದೇಶವನ್ನು ಅವಶ್ಯವಾಗಿ ಮಾಡಬೇಕು ಆ ಉಪದೇಶದ ಸಂಪೂರ್ಣ ಲಕ್ಷಣವು ಹೀಗೆ ಇದೆ ಎಲ್ಲಿ ಎಲ್ಲಿ ಸಾಧಕನ ಮನಸ್ಸು ಗಮನಿಸುವದೋ, ಅಲ್ಲಿ ಅಲ್ಲಿ ಪರಿಪೂರ್ಣ ಬ್ರಹ್ಮನು ಇದ್ದೇ ಇರುವನು, ಅಲ್ಲಿಂದ ಮನಸ್ಸು ಬೇರೆ ಕಡೆಗೆ ಹೋಗಲು ಬೇರೆ ಖಾಲಿ ಸ್ಥಳವೇ ಇರುವದಿಲ್ಲ ಈ ರೀತಿಯಾಗಿ ಅನುಸಂಧಾನವನ್ನು ಮಾಡಿದಲ್ಲಿ ಮನಸ್ಸು ಚೈತನ್ಯ ಸ್ವರೂಪದಲ್ಲಿ ಏಕರೂಪವಾಗುತ್ತದೆ ಇದಕ್ಕ 'ಪುಷ್ಕಲ ಜ್ಞಾನ'ವೆಂದು ಅನ್ನುತ್ತಾರ ಮತ್ತು ಇದೇ ಪೂರ್ಣ ಉಪದೇಶವಾಗಿರುತ್ತದೆ ಈ ಪ್ರಕಾರದ ಸಂಪೂರ್ಣ ಬ್ರಹ್ಮಜ್ಞಾನವನ್ನು ಯಾವನು ನನ್ನ ಭಕ್ತನಿಗೆ ದಾನ ಮಾಡುವನೋ, ಉದ್ಧವಾ ನಾನು ಅವನಿಗೆ ಬ್ರಹ್ಮ ಋಣಿಯಾಗುತ್ತೇನೆ ಅವನಿಗೆ ಪ್ರತ್ಯುಪಕರಿಸಲು ನನ್ನ ಹತ್ತಿರ ಒಂದು ಒಡಕು ಕವಡಿಯೂ ಕೂಡ ಇರುವದಿಲ್ಲ ಆದ್ದರಿಂದ ನನ್ನ ಆತ್ಮ ಸ್ವರೂಪವನ್ನೇ ಅವನಿಗ ಕೊಟ್ಟು, ಹಗಲಿರುಳೂ ಅವನ ಸೇವಗಾಗಿ ಕಾದಿರುತ್ತೇನೆ ಯಾವನು ಶಿಷ್ಯನಿಗೆ ಬ್ರಹ್ಮ ಜ್ಞಾನವನ್ನು ಕೊಡುತ್ತಾನೆಯೋ, ಪರಮಾತ್ಮನಾದ ನಾನು ಅವನ ಆಧೀನನಾಗುತ್ತೇನೆ ಮತ್ತು ಬ್ರಹ್ಮಜ್ಞಾನ ಕೊಡುವವರ ಶಬ್ದಕ್ಕೆ ಬೆಲೆಕೊಟ್ಟು, ಸ್ತ್ರೀ, ಶೂದ್ರರ ಉದ್ಧಾರವನ್ನೂ ಮಾಡುತ್ತೇನೆ ಪರಬ್ರಹ್ಮನ ಜ್ಞಾನವನ್ನು ಉಪದೇಶಿಸಿ ಯಾವನು ಭಕ್ತನನ್ನು ನಿಷ್ಕರ್ಮನನ್ನಾಗಿ ಮಾಡುವನೋ, ಅವನು ನನಗೆ ಬಹಳ ಪ್ರಿಯನಾಗಿರುತ್ತಾನ ಪುರುಷೋತ್ತಮನಾದ ನಾನು ಅವನ ಸೇವಕನಾಗುತ್ತೇನ ಉದ್ಧವಾ! ನನ್ನ ಭಕ್ತನಿಗೆ ಬ್ರಹ್ಮಜ್ಞಾನವನ್ನು ಕೊಡುವವರ ಹೊರತು ನನಗೆ ಮತ್ತೆ ಬೇರೆ ಯಾರೂ ಹೆಚ್ಚಿಗೆ ಪ್ರಿಯರಿರುವದಿಲ್ಲ ಇದನ್ನು ನೀನು, ನಿಶ್ಚಯವಾಗಿ ತಿಳಿದುಕೋ ಅವನು ನನ್ನ ಆತ್ಮನು ಮತ್ತು ನಾನು ದೇಹವಿದ್ದು, ಅವನ ದೇಹವೂ ಕೂಡ ನಾನೇ ಆಗುವೆನು, ಅದರಂತೆ ಅವನ ಶರೀರದ ಎಲ್ಲ ವ್ಯಾಪಾರವೂ ನಾನೇ ಆಗುತ್ತೇನ ಹೀಗೆ ನಾನು ಅವತಾರವನ್ನು ತಾಳುತ್ತೇನಯೋ, ಹಾಗೆಯೇ ಅವನೂ ಅವತಾರ ಪುರುಷನಿರುವನು ನನ್ನಲ್ಲಿ ಮತ್ತು ಅವನಲ್ಲಿ ಎಳ್ಳಷ್ಟಾದರೂ ಭೇದವಿರುವದಿಲ್ಲ ಈ ಬ್ರಹ್ಮಜ್ಞಾನದ ದಾನವನ್ನು ಮಾಡುವವನಿಗೆ, ನಾನು ಆತ್ಮಾರ್ಪಣೆಯನ್ನು ಮಾಡುತ್ತೇನೆ ಆದರೂ ಅವನ ಋಣದಿಂದ ನಾನು ಮುಕ್ತನಾಗುವದಿಲ್ಲ ಆದಕಾರಣ

ನಾನು ದೇಹದಿಂದ ಸಂಚರಿಸುತ್ತಿದ್ದರೂ, ಅವನ ಸೇವೆಯನ್ನು ಎಡ ಬಿಡದೆ ಮಾಡುತ್ತೇನೆ ಅವನ ಪ್ರೀತಿಗಾಗಿ ನಾನು ನನ್ನ ಆತ್ಮಸಮರ್ಪಣೆಯನ್ನು ಮಾಡಿ ಯಾವಾಗಲೂ ಎಲ್ಲ ಸಮಯದಲ್ಲಿಯೂ ಅವನ ಮನೆಯಲ್ಲಿಯೇ ಇರುತ್ತೇನೆ ಅವನಿಗೇನಾದರೂ ಸಂಕಟ ಉಂಟಾಯಿತೆಂದರೆ, ಅದನ್ನು ನಾನು ಸ್ವತಃ ನನ್ನ ಮೈಮೇಲೆ ತೆಗೆದುಕೊಳ್ಳುತ್ತೇನೆ ನನ್ನ ಚೈತನ್ಯ ಸಾಮ್ರಾಜ್ಯದ ವೈಭವವು ಅವನ ಮನೆಯಲ್ಲಿ ನಿರಂತರ ವಾಸ ಮಾಡುತ್ತದೆ

## ಪ್ರಕರಣ ೪೮

ದುಷ್ಟ, ನಾಸ್ತಿಕ, ದಾಂಭಿಕ, ಸೇವೆಯನ್ನು ಮಾಡದಿದ್ದವನು, ಭಕ್ತಿವಿರಹಿತ ನಿದ್ದವನು ಹಾಗೂ ಯಾವನು ದುರಾಚಾರಿಯಾಗಿದ್ದು ಉದ್ಧಟನಿರುವನೋ, ಅಂತಹ ಶಿಷ್ಯನನ್ನು ತ್ಯಜಿಸಬೇಕು ಯಾವ ಉಪಾಯದಿಂದ ಅನೇಕ ಜನರ ಸಮುದಾಯವು ಒಂದುಗೂಡುವದೋ, ಅಂತಹ ಕರ್ಮಾಚರಣೆಯನ್ನು ಯಾವನು ತೋರಿಕೆಗಾಗಿ ಮಾಡುವನೋ ಹಾಗೂ ಯಾವನಿಗೆ ಮಾನಸನ್ಮಾನ ಮತ್ತು ಧನದ ತೃಷ್ಣೆಯು ಪ್ರಬಲವಾಗಿರುತ್ತದೆಯೋ, ಹೀಗೆ ಯಾವನ ಭಜನೆಯು ದಾಂಭಿಕ ಭಜನಯಿರುವದೋ ಅಂತಹವನನಿಗ ಈ ಏಕಾದಶ ಸ್ಕಂಧದಲ್ಲಿಯ ಜ್ಞಾನವನ್ನು, ಕನಸಿನಲ್ಲಿ ಬಡಬಡಿಸು ವಾಗಲೂ ಕೂಡ ಕೊಡಬಾರದು (ಉಪದೇಶಿಸಬಾರದು) ಮೋಹ ಮಮತೆಯ ಬಲವತ್ತರವಾದುದರಿಂದ ಯಾವನ ಆಸ್ತಿಕ್ಯ ಬುದ್ಧಿಯು ಲೋಪವಾಗಿದೆಯೋ, ವೇದವ ಶಾಸ್ತ್ರಗಳ ವಿಷಯವಾಗಿ ಯಾವನು ನಾಸ್ತಿಕನಿರುವನೋ, ಮುಖ್ಯವಾಗಿ ಯಾವನು ದೇವರೇ ಇಲ್ಲವೆನ್ನುವನೋ, ಈ ತೆರನಾಗಿ ನಾಸ್ತಿಕತೆಯ ಔಡಂಬರವನ್ನು ಮಾಡುವ ಜನರ ಕೈಯಲ್ಲಿ ಈ ಜ್ಞಾನದ ಒಂದು ಸಿಪ್ಪೆಯನ್ನೂ ಕೂಡ ಕೊಡಬಾರದು ಏಕೆಂದರ ನಾಸ್ತಿಕತ್ವದಿಂದ ಅವನ ಭಾವನೆಯು ಸಂಪೂರ್ಣ ಒಣಗಿ ಕೊರಡಾಗಿರುತ್ತದೆ ನಾಸ್ತಿಕವಾದದೆದುರು ಪಾಪ ಆ ಜ್ಞಾನವೆಷ್ಟರದು? ಈಶ್ವರನಿಲ್ಲನೆಂಬುವವಾದದ ಹಾವಳಿಯು ಬಹಳ ದುಸ್ತರವಾಗಿದೆ ಇಂತಹ ನಾಸ್ತಿಕ ಜನರನ್ನು ಕೂಡಲೆ ತ್ಯಜಿಸ ಬೇಕು ಅನನ್ಯ ಭಾವನಯಿಂದ ಶರಣು ಬಾರದೆ, ತೋರಿಕೆಗಾಗಿ ಸಿಹಿ ಮಾತನಾಡಿ, ಚತುರತನದಿಂದ ಜ್ಞಾನವನ್ನು ಸಂಪಾದಿಸಲು ಪ್ರಯತ್ನಿಸುವನೋ, ಅಂತಹ ಠಕ್ಕನನ್ನೂ ತ್ಯಜಿಸಬೇಕು ಇನ್ನೊಬ್ಬರ ವಿಚಾರಗಳನ್ನು ಯುಕ್ತಿಯಿಂದ ತಿಳಿದುಕೊಳ್ಳುವದು ಹಾಗೂ ತಮ್ಮ ವಿಚಾರಗಳನ್ನು ಅವರಿಗೆ ತಿಳಿಯಲಾರದಂತೆ ವರ್ತಿಸುವದು ಹೀಗೆ ಠಕ್ಕತನದ ಲಕ್ಷಣವಿರುತ್ತದೆ ದೇಹದಿಂದ, ವಾಣಿಯಿಂದ, ಮನಸ್ಸಿನಿಂದ ಮತ್ತು ಧನದಿಂದ ಗುರುವಿಗೆ ಯಾವನು ವಂಚನೆಯನ್ನು ಮಾಡುವನೋ ಹಾಗೂ ಗುರುಗಳ ಗುಣದೋಷಗಳನ್ನೆಣಿಸುವನೋ, ಅಂತಹ ದುಷ್ಟನನ್ನು ಸಂಪೂರ್ಣವಾಗಿ ತ್ಯಜಿಸಬೇಕು.

—ನಾನು ದೊಡ್ಡ ಯೋಗ್ಯತೆಯುಳ್ಳವನು, ನಾನು ಸ್ವತಃ ಗುರುಸೇವೆಯನ್ನು ಹೇಗೆ ಮಾಡುವದು? ತನ್ನ ದೊಡ್ಡಿಸ್ತಿಕೆಗೆ ನ್ಯೂನತೆಯುಂಟಾಗಬಹುದೆಂಬ ಭಯದಿಂದ ಯಾವನು ಗುರುವಿನ ಸೇವೆಯನ್ನು ಮಾಡುವದಿಲ್ಲವೋ, ಆ ಶಿಷ್ಯನನ್ನೂ ತ್ಯಜಿಸಬೇಕು ತಾನು ಶ್ರೇಷ್ಠವಾದ ಆಸನದಲ್ಲಿ ಕುಳಿತು, ಸೇವಕ ಜನರ ಕಡೆಯಿಂದ ಯಾವನು ಗುರುವಿನ ಸೇವೆಯನ್ನು ಮಾಡಿಸುವನೋ, ಅವನು ದಾಂಭಿಕ ಶಿಷ್ಯನಿರುವನೆಂದು ತಿಳಿದು ಅವನನ್ನೂ ತ್ಯಜಿಸಬೇಕು ಅವನಿಗೆ ಈ ಗ್ರಂಥವನ್ನು ಉಪದೇಶಿಸಬಾರದು ಸದ್ಗುರುವಿನದುರು ತನ್ನ ಪಾಂಡಿತ್ಯದ ಬಡಿವಾರವನ್ನು ಯಾವನು ಮೆರೆಯಿಸುವನೋ ಹಾಗೂ ಗರ್ವದಿಂದ, ಸರಿಯಾಗಿ ಗುರುವಿನ ಸೇವೆಯನ್ನು ಮಾಡುವದಿಲ್ಲವೋ, ಅಂತಹ ಶಿಷ್ಯನನ್ನೂ ತ್ಯಜಿಸಬೇಕು ನಾನು ದೊಡ್ಡ ಪ್ರಮಾಣದಿಂದ ಹಣವನ್ನು ದಾನ ಮಾಡುವವನೆಂದು, ತಿಳಿದು, ಕೀಳು ಹಾಗೂ ಸಣ್ಣ ಪುಟ್ಟ ಕೆಲಸಗಳನ್ನು ಕೈಗೊಳ್ಳುವದಿಲ್ಲವೋ, ಹೀಗೆ ಗರ್ವಿಷ್ಠನಿರುವನೋ, ಅವನನ್ನೂ ನಿಜವಾಗಿಯೂ ತ್ಯಜಿಸಬೇಕು ಯಾವನು, ಜನರು ಏನಂಬುವರು ಎಂಬ ನಾಚಿಕೆಯ ಭಯದಿಂದ ಗುರುವಿನ ಸೇವೆಯನ್ನು ಮಾಡುವದಿಲ್ಲವೋ, ಯಾವನಿಗ ಲೌಕಿಕಾಚಾರದ ಅಭಿಮಾನವು ಪ್ರಬಲವಾಗಿರುವದೋ, ಈ ಪ್ರಕಾರದ ಶಿಷ್ಯನನ್ನೂ ತ್ಯಜಿಸಬೇಕು—

—ಯಾವನು ಧನಾಢ್ಯನಿರುವನೆಂಬ ಅಭಿಮಾನದಿಂದ, ಗುರುಗಳ ಆಶ್ರಮದಲ್ಲಿಯ ಸಣ್ಣ ಪುಟ್ಟ ಕೆಲಸಗಳನ್ನು ಮಾಡುವದಿಲ್ಲವೋ, ಅಂತಹ ಆಢ್ಯ ಮತ್ತು ಅಭಿಮಾನಿ ಯಾದ ಶಿಷ್ಯನನ್ನೂ ಸಂಪೂರ್ಣವಾಗಿ ತ್ಯಜಿಸಬೇಕು ಯಾವನು ಲೀನತೆಯಿಂದ ಗುರುವಿನ ಸೇವೆಯನ್ನು ಮಾಡುವದಿಲ್ಲವೋ, ಯಾವನು ಎಡೆಬಿಡದೆ ಗುರುವಿನ ಧ್ಯಾನವನ್ನು ಮಾಡುವದೇ ನಮ್ಮ ಗುರುಭಕ್ತಿಯಾಗಿರುವದೆಂದು ಅನ್ನುವನೋ, ಹೀಗೆ ಯುಕ್ತಿಯನ್ನು ಮಾಡಿ, ಸೇವ ಮಾಡುವದರಲ್ಲಿ ಮೈಗಳ್ಳತನವನ್ನು ಮಾಡುವನೋ, ಅಂತಹವನನ್ನೂ ತ್ಯಜಿಸಬೇಕು ನಾವು ಸೇವಯ ಕೀಳು ಕೆಲಸಗಳನ್ನು ಮಾಡುವದಿಲ್ಲ ಬೇಕಾದರೆ ಎಷ್ಟು ಬೇಕಾದಷ್ಟು ಧನವನ್ನು ಕೊಡುತ್ತೇವೆಂದು ಧನದ ಗರ್ವದಿಂದ ಉನ್ಮತ್ತರಾದ ಶಿಷ್ಯರನ್ನು ಎಂದಿಗೂ ಸ್ವೀಕರಿಸಬಾರದು ಅತಿಶಯ ಧನಲೋಭದಿಂದ ಗುರುವು ಶಿಷ್ಯನಿಗ ಉಪದೇಶಿಸಿದಲ್ಲಿ ಆ ಉಪದೇಶದಿಂದ ಬ್ರಹ್ಮಜ್ಞಾನವು ಬರಿದಾಯಿತು (ವ್ಯರ್ಥವಾಯಿತು) ಎಂದು ತಿಳಿಯಬೇಕು ಇಲ್ಲವ ಹಣದಿಂದ ಗುರುವಿನ ಕಡೆಯಿಂದ ಜ್ಞಾನವನ್ನು ಪಡೆಯೋಣವೆಂದು ಅನ್ನುವ ದ್ರವ್ಯಾಭಿಮಾನಿಯಾದ ಶಿಷ್ಯನನ್ನೂ ಎಂದಿಗೂ ಸ್ವೀಕರಿಸಬಾರದು ವೇಳೆಗ ತಕ್ಕಂತೆ ಗುರುವಿನ ಯಾವ ಯೋಗ್ಯವಾದ ಸೇವಯನ್ನು ಮಾಡಬೇಕೋ ಆ ಸೇವೆಯನ್ನು ಮಾಡದಿದ್ದವನಿಗೆ, 'ಅಶುಶ್ರೂಷು' ಎಂದು ಅನ್ನುತ್ತಾರ ಅವನನ್ನೂ ಕೂಡ ನಿಜವಾಗಿಯೂ ತ್ಯಜಿಸಬೇಕು 'ಸದ್ಗುರುವಿನ ಭಕ್ತಿಯನ್ನು ಮಾಡುವದರಿಂದಲೇ ನನ್ನ ಉದ್ಧಾರವಾಗುವದು' ಎಂದು ಯಾವನ ಮನಸ್ಸಿನ ದೃಢ ನಿಶ್ಚಯವಿರುವದಿಲ್ಲವೋ, ಇಂತಹ ಶಿಷ್ಯನನ್ನೂ ಸ್ವೀಕರಿಸಬಾರದು

(ಕೈ ಹಿಡಿಯಬಾರದು) ಸದ್ಗುರುವೇ ಪರಬ್ರಹ್ಮಮೂರ್ತಿಯಾಗಿರುವನೆಂಬ ದೃಢ ಭಾವನೆಯು ಯಾವನ ಚಿತ್ತದಲ್ಲಿರುವದಿಲ್ಲವೋ ಹಾಗೂ ಮೂಲತಃ ಮನಸ್ಸಿನಲ್ಲಿ ಸಂದೇಹವಿದ್ದ ಶಿಷ್ಯನನ್ನೂ ಕೈಹಿಡಿಯಬಾರದು ಗುರುವು ಮತ್ತು ಬ್ರಹ್ಮ ಇವರಿಬ್ಬರೂ ಭಿನ್ನವಾಗಿರುವರೆಂಬ ನಿಶ್ಚಿತ ಜ್ಞಾನವು ಯಾವನದಿರುವದೋ, ಅವನು ನಿಜವಾಗಿಯೂ ಅಭಕ್ತನಿರುವನೆಂದು ತಿಳಿಯಬೇಕು ಅವನನ್ನೂ ಶಿಷ್ಯನನ್ನಾಗಿ ಮಾಡಿಕೊಳ್ಳಬಾರದು—

—ಸದ್ಗುರುವನ್ನು ಮನುಷ್ಯನೆಂದು ತಿಳಿದು, ಯಾವನು ಅವನ ಆಜ್ಞೆಯನ್ನು ಮೀರುವನೋ, ಅವನು ಭ್ರಮಿಷ್ಟನಾದನೆಂದು ತಿಳಿಯಬೇಕು ಆ ಶಿಷ್ಯನನ್ನೂ ತ್ಯಜಿಸಬೇಕು. ಯಾವ ಶಿಷ್ಯನು ಸದ್ಗುರುವಿಗಿಂತ ತನ್ನ ಶ್ರೇಷ್ಠತೆಯು ವಿಶೇಷವಾಗಿರುವದೆಂದು ತಿಳಿಯುವನೋ, ಅವನು ಅಭಕ್ತರಲ್ಲಿಯ ಶ್ರೇಷ್ಠ ಶಿರೋಮಣಿಯಾಗಿರುವನು ಅವನನ್ನೂ ತಾತ್ವಿಕವಾಗಿ ತ್ಯಜಿಸಬೇಕು ಗುರುವಿನಲ್ಲಿ ಪರಿಪೂರ್ಣ ಸ್ಥಿತಿಯು ಇರುವದೆಂದು ಯಾವನು ಪೂರ್ಣ ಶ್ರದ್ಧೆಯನ್ನಿಟ್ಟು ನಂಬುವದಿಲ್ಲವೋ, ಅವನ ಭಕ್ತಿಗೆ 'ಅಭಕ್ತಿ' ಎಂದು ಅನ್ನುತ್ತಾರೆಂಬುದನ್ನು ನೀನು ನಿಶ್ಚಯ ಪೂರ್ವಕವಾಗಿ ತಿಳಿದುಕೋ, ಇಲ್ಲವೆ ಈ ಗ್ರಂಥದಲ್ಲಿಯ ಬ್ರಹ್ಮಜ್ಞಾನವು ಯಾವನಿಗೆ ನಿಜವಾಗಿಯೂ ರುಚಿಸುವದಿಲ್ಲವೋ, ಅವನನ್ನು ತಪ್ಪಿ ಕೂಡ ಎಂದಿಗೂ ಶಿಷ್ಯನನ್ನಾಗಿ ಮಾಡಿಕೊಳ್ಳಬಾರದು ಅದರಂತೆಯೇ ಈ ಗ್ರಂಥದಲ್ಲಿಯ ಬ್ರಹ್ಮಜ್ಞಾನವನ್ನು ಉಪದೇಶಿಸುವ, ಪರಬ್ರಹ್ಮ ಮೂರ್ತಿಯಾದ ನನ್ನಲ್ಲಿ ಯಾವನ ಭಕ್ತಿ ಇರುವದಿಲ್ಲವೋ, ಆ ಶಿಷ್ಯನನ್ನೂ ನಿಶ್ಚಿತವಾಗಿ ತ್ಯಜಿಸಬೇಕು ಅದೇ ರೀತಿಯಾಗಿ ಈ ಗ್ರಂಥದಲ್ಲಿಯ ಜ್ಞಾನವು ರುಚಿಸುತ್ತಿದ್ದು, ಗುರುಗಳಲ್ಲಿ ಪರಿಪೂರ್ಣ ಶ್ರದ್ಧೆಯೂ ಇದೆ ಆದರೆ ಅವನ ನಡತೆಯು ಉದ್ಧಟವಾಗಿದೆ ಇಂತಹ ಶಿಷ್ಯನನ್ನೂ ತ್ಯಜಿಸಬೇಕು ಪ್ರತ್ಯಕ್ಷ ಮೂರ್ತಿಮಂತ ನಾನೇ ಆಗಿರುವ ನನ್ನ ಸಂತ ಸಜ್ಜನರನ್ನು ಹಾಗೂ ನನ್ನ ಜೀವ ಮತ್ತು ಪ್ರಾಣರಾದಂತಹ ನನ್ನ ಭಕ್ತರನ್ನು, ಯಾವನು ನಗೆಗೀಡು ಮಾಡುವನೋ, ಅವನಿಗೆ 'ದುರ್ವಿನೀತ' ಎಂದರೆ ಉದ್ಧಟನೆಂದು ಅನ್ನುತ್ತಾರೆ ನನ್ನ ಭಕ್ತರಲ್ಲಿ, ಅತೀವ ಬಡವ ಭಕ್ತನಿದ್ದರೂ, ಅವನ ಚರಣಗಳನ್ನು ಎಲ್ಲ ಭಾವನೆಯಿಂದಲೂ ವಂದಿಸಬೇಕು ಹೀಗೆ ಮಾಡುವದು ಯಾವನಿಗೆ ರುಚಿಸುವದಿಲ್ಲವೋ, ಅವನಿಗೆ 'ದುರ್ವಿನೀತ'ನೆಂದು ಅನ್ನುತ್ತಾರೆ ಸಾಧು ಸಂತರನ್ನು ಭೆಟ್ಟಿಯಾಗಿ ತೋರಿಕೆಗಾಗಿ ಲೀನತೆಯಿಂದ ಅವರ ಚರಣಗಳನ್ನು ವಂದಿಸುತ್ತಾನೆ ಆದರೆ ಯಾವನು ಅವರ ಗುಣದೋಷಗಳನ್ನೆಣಿಸುವನೋ, ಅವನಲ್ಲಿ 'ದುರ್ವಿನೀತತೆಯು' ವಾಸ ಮಾಡುತ್ತಿದೆಯೆಂದು ತಿಳಿಯಬೇಕು—

—ದುಷ್ಟ ಬುದ್ಧಿಯಿಂದ ವಿನಯವನ್ನು ದರ್ಶಿಸುವದಕ್ಕೆ 'ದುರ್ವಿನೀತತಾ' ಎಂದು ಅನ್ನುತ್ತಾರೆ ಆ ದುರ್ವಿನೀತತೆಯು ಯಾರಲ್ಲಿ ಕಂಡುಬರುವದೋ, ಆ ಶಿಷ್ಯನನ್ನೂ ನಿಜವಾಗಲೂ ತ್ಯಜಿಸಬೇಕು ಈ ತೆರನಾಗಿ ಮಾಡಿದ ನಿರೂಪಣೆಯನ್ನು

ಕೇಳಿ ನೀನು, 'ನಾನು ಶಿಷ್ಯನನ್ನೇ ಮಾಡಿಕೊಳ್ಳುವದಿಲ್ಲವೆಂದು ಅಂದರೆ ಆಯಿತು' ಎಂದು ಅನ್ನಬಹುದು (ಆದರೆ ಹಾಗೆ ಮಾಡಬಾರದು) ಏಕೆಂದರೆ ಯಾವನು ಸತ್‌_ ಶಿಷ್ಯನಿಗೆ ಬ್ರಹ್ಮಜ್ಞಾನದ ಉಪದೇಶವನ್ನು ಮಾಡುವನೋ, ಅವನು ನನ್ನ ಆತ್ಮನೇ ಇರುವನೆಂದು ತಿಳಿಯಬೇಕು ಇನ್ನು ಮೇಲೆ ನಾನು ನಿನಗೆ ಉಪದೇಶಿಸಲು ಯೋಗ್ಯ ನಾದ ಸತ್‌_ಶಿಷ್ಯನ ಲಕ್ಷಣಗಳನ್ನು ಹೇಳುತ್ತೇನೆ ಅದನ್ನು ಲಕ್ಷ್ಯಕೊಟ್ಟು (ಕಿವಿ ಗೊಟ್ಟು) ಕೇಳು ಯಾವನಲ್ಲಿ ದೃಢತರವಾದ ವೈರಾಗ್ಯವಿರುವದೋ, ಅವನೆ ಉಪದೇಶಕ್ಕೆ ಅರ್ಹನಾಗಿರುತ್ತಾನೆ (ಯೋಗ್ಯನಾಗಿರುತ್ತಾನೆ) ಅದು ಕೂಡ ಪಿಶಾಚ್ಚ ವೈರಾಗ್ಯವಲ್ಲದೇ, ಶಾಸ್ತ್ರೋಕ್ತ ಹಾಗೂ ವಿವೇಕದಿಂದ ಪರಿಪೂರ್ಣವಾದ ವೈರಾಗ್ಯವಿರ ಬೇಕು ನಾಲ್ಕು ದಿವಸ ವೈರಾಗ್ಯದಿಂದಿರುವದು, ಆ ಮೇಲೆ ಕೂಡಲೇ ಚಂಚಲನಾಗಿ ವಿಷಯಗಳಲ್ಲಿ ಮಗ್ನನಾಗುವದು ಈ ರೀತಿಯಾಗಿ ವೈರಾಗ್ಯವಿರುವವನಿಗೆ ಉಪದೇಶಿಸುವ ದೆಂದರ, ಹಾವಿಗೆ ಹಾಲೆರೆದಂತೆಯೇ ಇರುವದು ಏಕಂದರೆ ವೈರಾಗ್ಯವು ಇಲ್ಲ ಆದರೆ ಜ್ಞಾನಾಭಿಮಾನವಷ್ಟೇ ಬಾಕಿ ಉಳಿಯುವದು ಆ ಅಭಿಮಾನದಿಂದ ಅವನು ಏನು ಮಾಡುವನು? ಅಂದರೆ ಅವನು ದೊಡ್ಡವರ ಗುಣದೋಷಗಳನ್ನು ಎಣಿಸುತ್ತಾನೆ ಹಾಗೂ ಚಿಕ್ಕವರನ್ನು ಓಯಾಳಿಸಿ ಸಿಂದೆಯನ್ನು ಮಾಡುತ್ತಾನೆ ವೈರಾಗ್ಯದ ತೀವ್ರತಯು ಕಡಿಮೆಯಾಯಿತಂದರೆ, ಜ್ಞಾನಾಭಿಮಾನವು ಈ ಪ್ರಕಾರವಾಗಿ ಬೆಳೆಯು ತ್ತದೆ. ಉದ್ಧವಾ! ಈ ಜಗತ್ತಿನಲ್ಲಿ ಎರಡೇ ಸ್ಥಿತಿಗಳಿರುತ್ತವೆ ಒಂದು ವಿರಕ್ತಿ ಹಾಗೂ ಇನ್ನೊಂದು ವಿಷಯಾಸಕ್ತಿ ಇವೆರಡನ್ನೂ ಬಿಟ್ಟು ಬೇರೆ ಮೂರನೇ ಸ್ಥಿತಿಯು ಇರುವದೇ ಇಲ್ಲ—

—ಎಲ್ಲಿ ವಿವೇಕದಿಂದ ವಿಷಯಾಸಕ್ತಿಯು ಕಡಿಮೆಯಾಗುವದೋ ಅಲ್ಲಿ ವೈರಾಗ್ಯವು ಪೂರ್ಣವಾಗಿ ಬೆಳೆಯುತ್ತದೆ ಮತ್ತು ಎಲ್ಲ ವಿವೇಕಸಹಿತವಾಗಿ ವೈರಾಗ್ಯವು ಕ್ಷಯ ಹೊಂದುವದೋ, ಅಲ್ಲಿ ಜ್ಞಾನಾಭಿಮಾನದಿಂದ ವಿಷಯ ಸೇವನೆಯು ಪ್ರಾರಂಭ ವಾಗುತ್ತದೆ ಆದ್ದರಿಂದ ಬ್ರಹ್ಮಜ್ಞಾನವಾಗುವವರೆಗೂ ಯಾವನು ವೈರಾಗ್ಯವನ್ನು ರಕ್ಷಿಸಿ, ಪರಿಪೂರ್ಣ ವೈರಾಗ್ಯದಿಂದ ಗುರುವಿಗ ಅನನ್ಯವಾಗಿ ಶರಣು ಹೋಗುವನೋ, ಅವನೇ ಉಪದೇಶಿಸಲು ಯೋಗ್ಯನಾದ ಅಧಿಕಾರಿ ರತ್ನವೆಂದು ತಿಳಿಯಬೇಕು ಹಿಂದಿನ ಶ್ಲೋಕದಲ್ಲಿಯ ದೋಷಗಳ ನಿರೂಪಣೆಯನ್ನು ವೈರಾಗ್ಯ ಉತ್ಪನ್ನವಾಗುವದರ ಸಲು ವಾಗಿ ಮಾಡಿರುವದೆಂದು ತಿಳಿಯಬೇಕು ಈ ದೋಷಗಳಿಂದ ಯಾವನು ಮುಕ್ತನಿರು ವನೋ, ಅವನೇ ಸತ್‌_ಶಿಷ್ಯನೆಂದು ತಿಳಿಯಬೇಕು ಯಾವನು ಬ್ರಹ್ಮಭಾವನೆಯಿಂದ ಬ್ರಾಹ್ಮಣರ ಭಕ್ತಿಯನ್ನು ಮಾಡುವನೋ, ಎಲ್ಲ ಭೂತಾಕೃತಿಗಳಲ್ಲಿ ಭಗವದ್ಭಾವನೆ ಯನ್ನಿಟ್ಟು ಭಜಿಸುವನೋ ಅವನಿಗೆ ಭಕ್ತಿ ಮತ್ತು ಮುಕ್ತಿಗಳಿಬ್ಬರೂ ಅವನ ದಾಸಿಯೆ ರಾಗುತ್ತಾರೆ ಅವನೇ ನಿಜವಾಗಲೂ ಉಪದೇಶಿಸಲು ಯೋಗ್ಯನಿರುವನೆಂದು ತಿಳಿಯ ಬೇಕು. ಗುರುವಿನ ಪ್ರೀತಿಗ ಪಾತ್ರನಾಗಿದ್ದರೂ, ಅವನು ಅಭಕ್ತನಿದ್ದರ ಅವನು

ಎಲ್ಲಿಯವರೆಗೆ ಅನನ್ಯಭಾವನೆಯಿಂದ ಗುರುವಿನ ಭಜನೆಯನ್ನು ಮಾಡುವದಿಲ್ಲವೋ ಅಲ್ಲಿಯವರೆಗೆ ಅವನಿಗೆ ಬ್ರಹ್ಮಜ್ಞಾನವು ಪ್ರಾಪ್ತವಾಗುವದಿಲ್ಲ ಯಾವನು ಗುರುವಿನ ಪ್ರೀತಿಗೆ ಪಾತ್ರನಿರುವನೋ, ಭಜನ ತತ್ಪರನಿರುವನೋ ಹಾಗೂ ದೋಷರಹಿತನಿದ್ದು ಶುಚಿಯಾಗಿರುವನೋ ಅವನ ನಿರಕ್ತಿಯನ್ನು ದೃಢಗೊಳಿಸಿ, ಅವನಿಗೆ ಶುದ್ಧ ಭಾವನೆ ಯಿಂದ ಈ ಗುಹ್ಯಜ್ಞಾನದ ಉಪದೇಶವನ್ನು ಮಾಡಬೇಕು, ಯಾವನಿಗೆ ತನ್ನ ಹೆಂಡತಿ ಮತ್ತು ತನ್ನ ಧನದ ಲೋಭವು ತೀವ್ರವಾಗಿರುವದೋ, ಅವನಿಗೆ ಸ್ವರ್ಗವೂ ಪ್ರಾಪ್ತ ವಾಗುವದಿಲ್ಲ ಹಾಗೂ ಮುಕ್ತಿಯೂ ಸಿಗುವದಿಲ್ಲ ಆದರ ಅವನಿಗೆ ದುಸ್ತರವಾದ ಜನ್ಮ ಮರಣವನ್ನನುಭವಿಸಬೇಕಾಗುತ್ತದೆ —

—ಯಾವನಲ್ಲಿ ಪರಸ್ತ್ರೀ ಮತ್ತು ಪರದ್ರವ್ಯವನ್ನು ಸ್ಪರ್ಶಿಸದಂತಹ ಶುದ್ಧತೆಯಿರು ವದೋ, ಅಂತಹವನಿಗೆ ಈ ಜ್ಞಾನವನ್ನು ಉಪದೇಶಿಸಬೇಕು ಯಾವನು ವೈರಾಗ್ಯದ ಅಚ್ಚಿನ ಬೊಂಬೆ, ವಿವೇಕದಿಂದ ಪರಿಪೂರ್ಣನಾದವನು, ಜೀವ ಪ್ರಾಣದಿಂದ ಸದ್ಗುರು ವಿನ ಸೇವೆಗೆ ಮಾರಿಕೊಂಡವನು ಮತ್ತು ಅನನ್ಯಭಾವನೆಯಿಂದ ಚರಣಕ್ಕೆರಗಿದವನು ಹಾಗೂ ತನ್ನ ಶ್ರೇಷ್ಠತ್ವವನ್ನು ಮರೆತು, ಗುರುವಿನ ಗುಲಾಮನಾಗಲು ಯಾವನಿಗೆ ರುಚಿಸುತ್ತದೆಯೋ, ಹೀಗ ಸೇವೆಯಲ್ಲಿ ಯಾವನದು ಒಳ್ಳೆಯ ಭಾವನೆಯಿರುವದೋ, ಯಾವನು ಇಂದ್ರಾದಿ ಶ್ರೇಷ್ಠ ಎಲ್ಲ ದೇವತೆಗಳನ್ನು ಗುರುವಿನ ದಾಸರೆಂದು ತಿಳಿಯು ವನೋ ಹಾಗೂ ಹರಿಹರರನ್ನೂ ಕೂಡ ಸದ್ಗುರುವಿಗಿಂತ ಶ್ರೇಷ್ಠರೆಂದೆಣಿಸುವ ದಿಲ್ಲವೋ, ಯಾವನಿಗೆ ಗರ್ವ ಮತ್ತು ಮದವಿಲ್ಲವೋ, ಯಾವನಿಗ ಕಾಮ ಕ್ರೋಧ ಗಳಿಲ್ಲವೋ ಯಾವನಿಗೆ ಸಂದೇಹವು ರುಚಿಸುವದಿಲ್ಲವೋ, ಆ ಶಿಷ್ಯನೇ ಶುದ್ಧ ಪರಮಾರ್ಥಿ ಯಾಗಿರುವನೆಂದು ತಿಳಿಯಬೇಕು ತನ್ನ ದೊಡ್ಡಿಸ್ತನದ ಬಡಿವಾರವನ್ನು ಬಿಟ್ಟು, ಯಾವನು ದೇಹದಿಂದ, ವಾಣಿಯಿಂದ, ಮನಸ್ಸಿನಿಂದ ಹಾಗೂ ಧನದಿಂದ ಸದ್ಗುರುವಿಗೆ ಅನನ್ಯನಾಗಿ ಶರಣು ಹೋಗುವನೋ, ಅವನೇ ಸದ್ಗುರುವಿನ ದೃಷ್ಟಿಯಿಂದ ಸತ್—ಶಿಷ್ಯ ನೆಂದು ತಿಳಿಯಬೇಕು—

—ಲೋಕ ವ್ಯವಹಾರದ ನಾಚಿಕೆಯನ್ನು (ಲಜ್ಜೆ) ಬಿಟ್ಟು ಯಾವನು ಬ್ರಹ್ಮ ಜ್ಞಾನದ ಯಾಚನೆ ಮಾಡುವನೋ ಮತ್ತು ಸದ್ಗುರುವಿನ ಉಪದೇಶಕ್ಕಾಗಿ ಚಾತಕ ಪಕ್ಷಿಯಂತೆ ಕಾಯುವನೋ ಅವನಿಗೆ ಈ ಜ್ಞಾನವನ್ನು ಅವಶ್ಯವಾಗಿ ಉಪದೇಶಿಸಬೇಕು ಯಾರು ಮೂರೂ ವರ್ಣಗಳ ಆಚೆಗಿದ್ದವರು ವೇದಗಳು ಯಾರನ್ನು ಬಹಿಷ್ಕರಿಸಿ ದೂರ ಮಾಡಿರುವವೋ, ಯಾರಿಗೆ ಮಂತ್ರಗ್ರಹಣ ಮಾಡುವ ಅಧಿಕಾರವಿಲ್ಲ, ಯಾರು ಕೇಳಲೂ ಕೂಡ ಅಯೋಗ್ಯರು, ಯಾರಿಗೆ ಆಶ್ರಮ ಧರ್ಮಗಳಿಲ್ಲ, ಶ್ರೋತ್ರ ಕರ್ಮ ಗಳಿಲ್ಲ, ಜಪ ಇಲ್ಲವೇ ಹೋಮಗಳಿಲ್ಲ, ಯಾರು ವರ್ಣಗಳಲ್ಲಿ ನೀಚ ವರ್ಣದವರು, ಇಂತಹ ಶೂದ್ರ ಜನರಿಗೂ ಕೂಡ ಜನ್ಮಮರಣದಿಂದ ಮುಕ್ತರಾಗುವದಕ್ಕಾಗಿ, ತೀವ್ರ ವೈರಾಗ್ಯವು ಉತ್ಪನ್ನವಾಗುತ್ತದೆ ಹೀಗಿರುವ ಜನರಿಗೆ ವಿಷಯೋಪಭೋಗಗಳಲ್ಲಿ

ಮನಸ್ಸಿನಿಂದ ಹೇಸಿಕೆಯುಂಟಾಗುತ್ತದೆ ಆ ನಂತರ ಅವರು ದೇಹ, ವಾಣಿ ಮತ್ತು ಮನಸ್ಸಿನಿಂದ ಸದ್ಗುರುವಿಗೆ ಅನನ್ಯಭಾವನೆಯಿಂದ ಶರಣು ಹೋಗುತ್ತಾರೆ. ಸದ್ಗುರುವಿಗೆ ಹೇಗೆ ಪ್ರಶ್ನಿಸಬೇಕೆಂಬುವದೂ ಕೂಡ ಅವರಿಗೆ ತಿಳಿಯುವದಿಲ್ಲ. ಜನ್ಮಮರಣದಿಂದ ಮುಕ್ತಗೊಳಿಸಬೇಕೆಂದು ಭಕ್ತಿಯಿಂದ ಅವರ (ಸದ್ಗುರುವಿನ) ಚರಣಗಳಲ್ಲಿ ಉರುಳುತ್ತಾರೆ—

—ಪರಮಾರ್ಥದ ವಿಷಯದಲ್ಲಿ ಅವರ ಶ್ರದ್ಧೆಯು ಶುದ್ಧ ಮತ್ತು ಸಂಪೂರ್ಣವಾಗಿರುತ್ತದೆ ಇಂತಹ ಜನರು ಶೂದ್ರರಾದರೇನಾಯಿತು? ಅವರಿಗೆ ಉಪದೇಶಿಸಿದಲ್ಲಿ ಉದ್ಧವಾ! ಎಂದಿಗೂ ದೋಷವುಂಟಾಗಲಾರದು ಈ ನನ್ನ ವಚನವು ಸತ್ಯವಿರುವದೆಂದು ತಿಳಿ ಯಾರು ದ್ರವ್ಯವನ್ನಪೇಕ್ಷಿಸಿ ನಾಲ್ಕೂ ವರ್ಣದವರಿಗೆ ಈ ಜ್ಞಾನವನ್ನು ಉಪದೇಶಿಸುವರೋ, ಅವರು ಧನಲೋಭದಿಂದ ಲುಬ್ಧರಾಗಿರುವರೆಂದು ತಿಳಿದು ಅವರಿಗೆ ಗುರುತ್ವವನ್ನು ಕೊಡಬಾರದು ಎಲ್ಲಿ ಗುರುವೇ ಲೋಭಿಷ್ಟನಿರುವನೋ, ಅಲ್ಲಿ ಶಿಷ್ಯನ ವಿರಕ್ತಿಯು ಲೋಪ ಹೊಂದುವದು ವಿರಕ್ತನು ಇಂತಹ ಗುರುವಿನಿಂದ ಉಪದೇಶವನ್ನು ತೆಗೆದುಕೊಂಡಲ್ಲಿ, ಪರಮಾರ್ಥದ ಹಾನಿಯಾಗುತ್ತದೆ ನಿರ್ಲೋಭದಿಂದ ಮತ್ತು ಪೂರ್ಣ ಕೃಪೆಯಿಂದ ಶೂದ್ರ ಜನರಿಗೆ ಉಪದೇಶಿಸಿದಲ್ಲಿ ಅವನ ಕೈಯಿಂದ ದೀನೋದ್ಧಾರವಾಗುವದು ಆದರೆ ಆ ಉಪದೇಶದಿಂದ ಎಂದಿಗೂ ದೋಷವುಂಟಾಗಲಾರದು ಯಾರ ಸಹವಾಸದಿಂದ ವೈರಾಗ್ಯಕ್ಕೆ ತಳಮಳಿಸಿ ಮರಣವು ಬರುತ್ತದೆಯೋ, ಯಾರ ಸಹವಾಸದಿಂದ ಜ್ಞಾನಿಗಳಿಗೆ ಅಪವಾದವು ಬರುತ್ತದೆಯೋ, ಆ ಸ್ತ್ರೀಯರ ಸಂಗತಿಯನ್ನು ಮಾತ್ರ ಮಾಡಬಾರದು ಸ್ತ್ರೀಯನ್ನು ಅಕಸ್ಮಾತ್ತಾಗಿ ದೃಷ್ಟಿಯಿಂದ ಅವಲೋಕಿಸಿದಲ್ಲಿ, ಕೂಡಲೇ ಅಧಃಪತನಕ್ಕೆ ಕಾರಣವಾಗುತ್ತದೆ ಅಂದಮೇಲೆ, ಅವಳ (ಸ್ತ್ರೀಯರ) ಸಹವಾಸ ಮಾಡಿದರಂತೂ ಜ್ಞಾನಿಗಳ ಗತಿ ಏನಾಗುವದು? ಎಲ್ಲ ರೀತಿಯಿಂದಲೂ ಪ್ರಮಾದಾತ ಎಂದರೆ ದೋಷವನ್ನು ಉತ್ಪನ್ನ ಮಾಡುವಳೆಂದು ತಿಳಿದು, ಅವಳ 'ಪ್ರಮದಾ' ಎಂಬ ಹೆಸರು ಪ್ರಸಿದ್ಧವಾಗಿದೆ ದಿನನಿತ್ಯವೂ ಅವಳ ಸಂಗವುಂಟಾದರೆ, ಸಾಧಕ ಜನರು ಹೇಗೆ ಉದ್ಧರಿಸುವರು? ಅವಳ ಮುಖವನ್ನು ನೋಡಿದ ತಕ್ಷಣ ಕಾಮನು ಕಟಾಕ್ಷ ಬಾಣವನ್ನು ಬಿಡುತ್ತಾನೆ ಅಂದಮೇಲೆ ಅಲ್ಲಿ ಉಪದೇಶವೆಂತಹದು? ಪರಮಾರ್ಥದ ಹಾನಿಯಾಯಿತೆಂದೇ ತಿಳಿಯಬೇಕು ಆದ್ದರಿಂದ ಉದ್ಧವಾ! ನಿನ್ನ ಹತ್ತಿರ ನಾನು ಕೂಡ ಇದನ್ನೇ ಬೇಡಿಕೊಳ್ಳುತ್ತೇನೆ ನೀನು ಸ್ತ್ರೀಯರ ಕೂಡ ಮಾತನಾಡಬೇಡ, ಸ್ತ್ರೀಯರನ್ನು ನಿರೀಕ್ಷಿಸಿ ನೋಡಬೇಡ ಹಾಗೂ ಅವರ ಮಾತುಗಳನ್ನು ಕಿವಿಗಳಿಂದ ಕೇಳಲೂ ಬೇಡ ಬೇಡ ಬೇಡ, ಸ್ತ್ರೀಯರ ಮಾತುಗಳೂ ಬೇಡ, ಸ್ತ್ರೀಯರ ಏಕಾಂತವೂ ಬೇಡ, ಸ್ತ್ರೀಯರ ಸಹವಾಸವೂ ಬೇಡ, ಏಕೆಂದರೆ ಇದೆಲ್ಲವೂ ಎಲ್ಲ ರೀತಿಯಿಂದಲೂ ಜನರಲ್ಲಿ ನಿಂದ್ಯವಾಗಿರುತ್ತದೆ ಸ್ತ್ರೀಯರ ಅನುವಾದವೂ ಬೇಡ, ಸ್ತ್ರೀಯರ ಸಂವಾದವೂ ಬೇಡ, ಸ್ತ್ರೀಯರಿಗೆ ಉಪದೇಶಿಸುವದೂ ಬೇಡ ಏಕೆಂದರೆ

ಅದರಿಂದ ನಿರರ್ಥಕವಾಗಿ ಲೋಕೋಪವಾದ ಮಾತ್ರ ಬರುತ್ತದೆ ಸಾತ್ವಿಕ ವೃತ್ತಿಯ ಸ್ತ್ರೀಯು ಪರಮಾರ್ಥದ ವಿಷಯವಾಗಿ ಮಾತನಾಡಲು ಬಂದರೆ ಆಪ್ತೇಷ್ಟರಲ್ಲಿ ಅವಳ ವಿಷಯವಾಗಿ ಸಂಶಯ ಉಂಟಾಗುತ್ತದೆ

—ಆದ್ದರಿಂದ ಹೆಂಗಸು ಅಂದ ತಕ್ಷಣ ಅವಳನ್ನು ಎಲ್ಲ ರೀತಿಯಿಂದಲೂ ತ್ಯಜಿಸಬೇಕು ಏಕೆಂದರೆ ಸ್ತ್ರೀಯರ ಸಹವಾಸದಿಂದ ಬ್ರಹ್ಮಜ್ಞಾನದ ವೃದ್ಧಿಯು ಎಂದಿಗೂ ಆಗುವದಿಲ್ಲ ಉಪದೇಶಿಸಲು ಸ್ತ್ರೀಯರು ತ್ಯಾಜ್ಯರೆಂದರೆ, ಹಿಂದಕ್ಕೆ ಶ್ರೇಷ್ಠ ಶ್ರೇಷ್ಠರಾದ ವ್ಯಕ್ತಿಗಳು ಅವರಿಗೆ ಹೇಗೆ ಉಪದೇಶಿಸಿದರು? (ಎಂದು ಅನ್ನುವಿಯಾದರೆ) ಎಂಬುದನ್ನು ನಾನು ನಿಜವಾಗಿಯೂ ಹೇಳುತ್ತೇನೆ ಕೇಳು ಯಾಜ್ಞವಲ್ಕನು ಶ್ರೇಷ್ಠ ಜ್ಞಾನಿಯಾಗಿದ್ದನು ಅವನು ನಾನಾ ತರಹದ ಯುಕ್ತಿ ಪ್ರಯುಕ್ತಿಗಳಿಂದ ಮೈತ್ರೇಯಿಗೆ ಉಪದೇಶಿಸಿದ್ದುದರ ಉಲ್ಲೇಖವು ಉಪನಿಷದ್ದಲ್ಲಿದೆ ಪ್ರತ್ಯಕ್ಷ ನಾರದ ಮಹರ್ಷಿಯು ಪ್ರಲ್ಹಾದನ ತಾಯಿಯನ್ನು ಇಂದ್ರನಿಂದ ಬಿಡುಗಡ ಮಾಡಿ ಅವಳಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿದನು ಯೋಗಿಗಳಲ್ಲಿ ಶಿರೋಮಣಿ ನಿಯಾದ ಕೈಲಾಸಾಧಿಪತಿ ಶಂಕರನು, ಭವಾನಿಗೆ (ಪಾರ್ವತಿಗೆ) ಬ್ರಹ್ಮಜ್ಞಾನದ ನಿಜಬೋಧವನ್ನು ಉಪದೇಶಿಸಿದನು ಬೇರೆಯವರ ಕಥೆ ಏಕೆ? 'ಶ್ರೀಕೃಷ್ಣಾ! ಯಾಜ್ಞಪತ್ನಿಯರಿಗೆ ನೀನೇ ಉಪದೇಶಿಸಿರುವಿ' ಎಂದು ಉದ್ಧವಾ! ನೀನು ಅನ್ನಬಹುದು ಅದಿರಲಿ ಸದ್ಭಕ್ತಿಯನ್ನು ಕಂಡು (ಕೃಪಾದೃಷ್ಟಿಯಿಂದ) ಅವರಿಗೆ ಉಪದೇಶಿಸಬೇಕೆಂದು ಅನ್ನುವಿಯಾದರೆ, ಉದ್ಧವಾ! ಅವರು ಉಪದೇಶಕ್ಕೆ ಪಾತ್ರರಿರುವರೋ, ಇಲ್ಲವೋ ಎಂಬುದನ್ನು ತಿಳಿದುಕೊಳ್ಳಬೇಕು ಈ ವಿಷಯದಲ್ಲಿ ನಿಶ್ಚಯವಾಗಿ ಹೇಳುವೆನು ಕೇಳು —

—ಬಾಯಿಗೆ ಬಂದಂತೆ ಬಡಬಡಿಸುವ ಹೆಂಗಸು ಉಪದೇಶಿಸಲು ಯೋಗ್ಯಳಿರುವದಿಲ್ಲ ಅವಳಿಗೆ ಉಪದೇಶಿಸುವದು ನಿರರ್ಥಕವಾಗಿದ್ದು, ಅದರಿಂದ ಗುರುತ್ವಕ್ಕೆ ಬಾಧೆಯುಂಟಾಗುತ್ತದೆ ಯಾವಳಿಗೆ ಬಹಳ ವಟವಟ ಮಾಡುವ ರೂಢಿಯಿರುತ್ತದೆಯೋ ಯಾವಳ ಮುಖದಿಂದ ಬ್ರಹ್ಮಜ್ಞಾನವು ಗರ್ಜಿಸುತ್ತಿದೆಯೋ, ಯಾವಳ ಚಿತ್ತದಲ್ಲಿ ವಿಷಯಗಳ ಚೆಲ್ಲಾಟವಿರುತ್ತದೆಯೋ, ಪರಪುರುಷರ ಜತೆಗೆ ಪರಮಾರ್ಥದ ವಿಷಯವಾಗಿ ಮಾತನಾಡುವದು ಯಾವಳಿಗೆ ರುಚಿಸುತ್ತಿದೆಯೋ, ಯಾವ ಸ್ತ್ರೀಯು ಧೈರ್ಯವಾಗಿ ಬ್ರಹ್ಮಜ್ಞಾನವನ್ನು ನುಡಿಯುತ್ತಿದ್ದು ಮುಖದಿಂದ ಸದೈವ ವಟ ವಟ ಮಾಡುತ್ತಿರುವಳೋ ಅಂಥವಳಿಗೆ ಉಪದೇಶವನ್ನು ಎಂದಿಗೂ ಮಾಡಬಾರದು, ಅದರಿಂದ ಅಪವಾದಕ್ಕೆ ಗುರಿಯಾಗಬೇಕಾಗುತ್ತದೆ (ಶ್ರೀ ಏಕನಾಥ ಮಹಾರಾಜರು ಅನ್ನುತ್ತಾರೆ) "ಶ್ರೀ ಜನಾರ್ದನ ಸ್ವಾಮಿಗಳಲ್ಲಿ ನಾನೂ ವಿನಂತಿಯನ್ನು ಮಾಡಿ ಬೇಡಿಕೊಂಡೆನು ಸ್ತ್ರೀಯರು ಮತ್ತು ಶೂದ್ರರು ಉಪದೇಶಕ್ಕಾಗಿ ಬರುತ್ತಾರೆ ಅವರಿಗೆ ನಿಶ್ಚಯವಾಗಿ ಏನು ಹೇಳಬೇಕು? ಗುರುವಿಲ್ಲದೇ ಮಾರ್ಗವಿಲ್ಲ

ವೆಂದು ಅವರು ಉಪದೇಶಕ್ಕಾಗಿ ಬರುತ್ತಾರೆ ಅವರಿಗೆ ಎಂತಹ ಉಪದೇಶವನ್ನು ಕೊಡಬೇಕೆಂಬುದು ನನ್ನ ಮನಸ್ಸಿಗೆ ಹೊಳೆಯುವದಿಲ್ಲ " ಇದನ್ನು ಕೇಳಿ ಜನಾರ್ಧನ ಸ್ವಾಮಿಗಳಿಗೆ ಸಂತೋಷವಾಯಿತು ಮತ್ತು ಅವರು (ಜನಾರ್ಧನಸ್ವಾಮಿ) ಅವರಿಗೆ (ಸ್ತ್ರೀ, ಶೂದ್ರರಿಗೆ) ಭಗವನ್ನಾಮದ ಉಪದೇಶವನ್ನು ಮಾಡಬೇಕೆಂದು ಹೇಳಿದರು ಅದರಿಂದ ಅವರ ಚಿತ್ತಶುದ್ಧಿಯಾಗುತ್ತದೆ ಚಿತ್ತಶುದ್ಧಿಯಾದ ನಂತರ ಅವರಿಗೆ ಜ್ಞಾನದ ಅಭಿಲಾಷೆಯುಂಟಾಗಿ, ಅವರು ಅನನ್ಯ ಭಾವನೆಯಿಂದ ಶರಣು ಬಂದ ಮೇಲೆ ಅವರಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಬೇಕು ಇರಲಿ (ಶ್ರೀಕೃಷ್ಣನು ಅನ್ನುತ್ತಾನ ) ಯಾವನಿಗ ಸ್ತ್ರೀ ಪುರುಷ ಭಿನ್ನ ವ್ಯಕ್ತಿಗಳಲ್ಲಿಯೂ ಆತ್ಮಸ್ವರೂಪವೇ ಕಂಡುಬರುತ್ತದೆಯೋ, ಯಾವನು ಆತ್ಮಾನುಭವದಿಂದ ಪರಿಪೂರ್ಣನಿರುವನೋ ಅವನೇ ಸ್ತ್ರೀಯರಿಗೆ ಉಪದೇಶಿಸಬೇಕು ಅದು ಕೂಡ ಪಾತ್ರಾಪಾತ್ರತೆಯ ವಿಚಾರ ವನ್ನು ಮಾಡದೆಯೇ ಎಂದಿಗೂ ಅವರಿಗೆ ಉಪದೇಶಿಸಬಾರದು ಆ ಉಪದೇಶದ ನಿಜವಾದ ರೀತಿಯನ್ನು ಹೇಳುವೆನು ಕೇಳು

ನಾನು ಸ್ತ್ರೀಯರ ನಿಂದೆಯನ್ನು ಮಾಡಿದೆನು ಅದರಲ್ಲಿಯೂ ಯಾವ ಸ್ತ್ರೀಯು ಸತ್ವವೃತ್ತಿಯಿಂದ ಭಾಗ್ಯವಂತಳಿದ್ದು, ವಿಷಯವಾಸನೆಗಳನ್ನು ತ್ಯಜಿಸಿ ಪರಮಾರ್ಥ ವಿಷಯದಲ್ಲಿ ಉದ್ಯುಕ್ತಳಾಗುವಳೋ, ಪ್ರಪಂಚದ ಆಸಕ್ತಿಯನ್ನು ಬಿಟ್ಟವಳು ಹಾಗೂ ವಿಷಯಗಳಲ್ಲಿ ಯಾವಳಿಗೆ ಅಭಿರುಚಿಯಿರುವದಿಲ್ಲವೋ ಯಾವ ಳಿಗೆ ವೈರಾಗ್ಯದಿಂದ ಸದ್ಭಕ್ತಿಯುಂಟಾಗಿ ಪರಮಾರ್ಥದತ್ತ ಧಾವಿಸಿರುವಳೋ, ಯಾವಳು ಊಟಕ್ಕೆ ಬಡಿಸುವ ಸಮಯದಲ್ಲಿ ಅತಿಥಿ, ಪತಿ, ಪುತ್ರರನ್ನು ಒಂದೇ ಸಮನಾಗಿ ಕಾಣುವಳೋ, ಯಾವಳಿಗ ಹಣದಾಸೆಯಿರುವದಿಲ್ಲವೋ, ಅವಳಿಗೇ ಪರಮಾರ್ಥದ ಅಧಿಕಾರವಿರುತ್ತದ ಜನ್ಮಮರಣದಿಂದ ಮುಕ್ತಳಾಗಬೇಕೆಂಬ ಪ್ರಬಲ ವಾದ ಇಚ್ಛೆಯಿಂದ ಯಾವಳು ತೀವ್ರ ಭಾವನೆಯಿಂದ ತಳಮಳಿಸುವಳೋ ಹಾಗೂ ಅವಳ ಸಂಸಾರ ಪಾಶವನ್ನು ಹರಿದೊಗೆಯುವಂತಹ ಧರ್ಮಜ್ಞನು ಯಾರಾದರೂ ಭೆಟ್ಟಿಯಾಗುವರೋ ಹೇಗೆ? ಎಂದು ಸದ್ಗುರು ಪ್ರಾಪ್ತಿಗಾಗಿ, ದೇಹ, ವಾಣಿ, ಮನಸ್ಸು ಮತ್ತು ಧನದಿಂದ ತನ್ನ ಜೀವನವನ್ನೇ ಸದ್ಭಾವದಿಂದ ಪರಮಾರ್ಥವನ್ನು ಸಾಧಿಸುವದಕ್ಕಾಗಿ ನಿವಾಳಿಸುವಳೋ, ಉದ್ಧವಾ! ಈ ಪ್ರಕಾರವಾಗಿ ಯಾವ ಸ್ತ್ರೀಯು ಏಕನಿಷ್ಠಳಾಗಿ ಪರಮಾರ್ಥ ಪ್ರಾಪ್ತಿಗಾಗಿ ಪ್ರಯತ್ನಿಸುವಳೋ ಇಂತಹ ಸ್ತ್ರೀಗೆ ಉಪದೇಶಿಸಿದಲ್ಲಿ ದೋಷವು, ಎಂದಿಗೂ ಹತ್ತಲಾರದು ಕ್ಷತ್ರಿಯ, ವೈಶ್ಯಸ್ತ್ರೀ, ಇಲ್ಲವ ಶೂದ್ರ ಜನರ ದೃಢತರವಾದ ಶ್ರದ್ಧೆಯನ್ನು ಅವಲೋಕಿಸಿ ಬ್ರಹ್ಮಜ್ಞಾನವನ್ನು ಉಪದೇಶಿಸಿದಲ್ಲಿ ಶಿಷ್ಯನ ದೋಷಕ್ಷಾಲನವಾಗುವದು ಬ್ರಹ್ಮ ಜ್ಞಾನವನ್ನು ಉಪದೇಶಿಸುವದರಿಂದ ಗುರುವಿಗೇ ದೋಷ ಉಂಟಾಗುವದಾದರೆ ಶಿಷ್ಯನ ಉದ್ಧಾರವನ್ನು ಯಾರು ಮಾಡುವರು? ಈ ನುಡಿಯೇ ಪ್ರಮಾಣವಾಗಿದೆ.

ಬ್ರಹ್ಮಜ್ಞಾನವನ್ನು ಉಪದೇಶಿಸುವಾಗ ಯೋಗ್ಯಾಯೋಗ್ಯತೆಯ ವಿಚಾರವನ್ನು ತಿಳಿದುಕೊಳ್ಳುವದಕ್ಕಾಗಿ ನಾನು (ಶ್ರೀಕೃಷ್ಣನು) ಈ ಎಲ್ಲ ದೋಷಗಳ ವಿಷಯ ವಾಗಿ ಮಾತನಾಡಿದೆನು ಇದರ ವ್ಯತಿರಿಕ್ತ ಬ್ರಹ್ಮಜ್ಞಾನವನ್ನು ಉಪದೇಶಿಸಿದಲ್ಲಿ ಎಂದಿಗೂ ದೋಷವು ತಗಲಲಾರದು ಈ ಜ್ಞಾನವನ್ನು ಅರಿತ ನಂತರ ಜಗತ್ತಿನಲ್ಲಿ ಅರಿತುಕೊಳ್ಳುವದೆಲ್ಲವೂ ಮುಕ್ತಾಯವಾಗುತ್ತದೆ ಸಂಸಾರ ಬಂಧನವು ಹರಿದು ಹೋಗುತ್ತದೆ ಮತ್ತು ದೋಷಗಳ ವಾರ್ತೆಯೂ ಉಳಿಯುವದಿಲ್ಲ

## ಪ್ರಕರಣ ೪೯

ಯಾವನಾವರೊಬ್ಬ ನನ್ನ ಭಕ್ತನು ಸುಖೋಪಭೋಗವನ್ನು ಅಪೇಕ್ಷಿಸಿದಲ್ಲಿ ಅವನಿಗೆ ಸುಖವನ್ನು ಅನುಭವಿಸುವಾಗ ಹೇಗ ನಿಷ್ಕಾಮನಾಗಿರಬೇಕೆಂಬುದರ ಗುಟ್ಟನ್ನು ಆತ್ಮಾರಾಮನಾದ ನಾನು ಹೇಳಿಕೊಡುತ್ತೇನೆ ಬೇರೊಬ್ಬ ಭಕ್ತನು ಬಹಳ ಬಡವನಿರುವದರಿಂದ ಬಹಳಷ್ಟು ಹಣವನ್ನು ಬೇಡಿದಲ್ಲಿ ನಾನು ಅವನಿಗೆ ನನ್ನ ಷಡ್ಗುಣೈಶ್ವರ್ಯವನ್ನೇ ಅರ್ಪಿಸುತ್ತೇನೆ ಭಕ್ತನು ಸರ್ವಭೂತಾಕೃತಿಗಳಲ್ಲಿ ನನ್ನ (ಭಗವಂತನ) ಭಾವನೆಯನ್ನಿಟ್ಟು ಅನ್ಯೋನ್ಯವಾದ ಪ್ರೀತಿಯಿಂದ ನನ್ನ ಭಜನೆಯನ್ನು ಮಾಡಿದರ ನಾಲ್ಕೂ ಮುಕ್ತಿಗಳು ಅವನಿಗೆ ಶರಣು ಬರುತ್ತವೆ ಏಕೆಂದರ ನನ್ನ ಭಕ್ತನಿಗೆ ಮುಕ್ತಿಯು ಸ್ವಯಂಸಿದ್ಧವೇ ಇರುತ್ತದೆ ವೈದ್ಯನು ನಿಜವಾಗಲೂ ಧನ್ವಂತರಿಯಾಗಿದ್ದಲ್ಲಿ ಅಂದರೆ ಅತ್ಯಂತ ಕುಶಾಗ್ರಬುದ್ಧಿಯವನಾಗಿ ದ್ದರೆ ಅವನು ರೋಗಿಯು ಬಯಸಿದ್ದೆಲ್ಲವನ್ನೂ ಕೊಟ್ಟು ತನ್ನ ಚಾತುರ್ಯದಿಂದ ಔಷಧಿಯನ್ನು ಕೊಟ್ಟು ಅವನನ್ನು ಉಳಿಸುತ್ತಾನ ಅದರಂತೆಯೇ ಭಕ್ತನ ಧರ್ಮ ಅರ್ಥ ಹಾಗೂ ಕಾಮಃಚ್ಛೆಯನ್ನು ಪೂರೈಸಿ ನಾನು ಅವನಿಗೆ ಸಾಯುಜ್ಯ ಪದವಿ ಯನ್ನು ಕೊಡುವೆನು ಅದರ ಪ್ರಕಾರವನ್ನು ಮೇಲೆ ಹೇಳಿದ್ದೇನ ಉದ್ಧವಾ! ಅನೇಕ ತರಹದ ಸಾಧನೆಗಳ ಅಭಿಮಾನವನ್ನು ಬಿಟ್ಟು ಯಾರು ನನಗೆ ಅನನ್ಯರಾಗಿ ಶರಣು ಬರುವರೋ, ಅವರಿಗೂ ನನ್ನ ಪೂರ್ಣ ಸ್ವರೂಪ ಪ್ರಾಪ್ತಿಯಾಗುತ್ತದೆಂಬು ದನ್ನು ನಿಶ್ಚಯವಾಗಿ ತಿಳಿದುಕೋ ನನ್ನ ಭಕ್ತನು ಮನಸ್ಸಿನಿಂದ ಸಕಾಮನಿದ್ದು ಅವನು ನನ್ನ ಅನನ್ಯ ಭಕ್ತಿಯನ್ನು ಮಾಡಿದಲ್ಲಿ ನಾನು ಅವನ ಮನದಾಸೆಯನ್ನು ಪೂರೈಸಿ ಅವನಿಗೆ ಮುಕ್ತಿಯನ್ನು ಕೊಡುವೆನು ಭಕ್ತನ ಅಧಃಪತನವು ಎಂದಿಗೂ ಆಗಲಾರದು ಚಿಕ್ಕ ಮಗು ಹಟದಿಂದ ತಾಯಿಯ ಕಾಲನ್ನು ಅಪ್ಪಿದಲ್ಲಿ ಅವಳು ಹಣವನ್ನು ಖರ್ಚುಮಾಡಿ ಮಗು ಬೇಡಿದ್ದನ್ನು ತಂದು ಕೊಡುತ್ತಾಳೆ. ಆದರೆ ಮಗುವಿನ ಪ್ರಾಣವನ್ನೇನೂ ಅವಳು ತೆಗೆದುಕೊಳ್ಳುವದಿಲ್ಲ ಅದರಂತೆಯೇ ನನ್ನ

ಅನನ್ಯ ಭಕ್ತಿಯನ್ನು ಮಾಡುವಾಗ, ಭಕ್ತನು ಏನೇನು ಇಚ್ಛಿಸುವನೋ, ಅವೆಲ್ಲವುಗಳನ್ನೂ ಪೂರ್ತಿಗೊಳಿಸಿ ನಾನು ಅವನಿಗೆ ಮುಕ್ತಿಯನ್ನು ಕೊಡುವೆನು ಆದರೆ ಅವನಿಗೆ ಅಧೋಗತಿಯು ಎಂದಿಗೂ ಆಗುವದಿಲ್ಲ ಮಗುವಿನ ಕಷ್ಟ (ದುಃಖ)ವನ್ನು ಕಂಡು ಮಾತೆಯು ಹೇಗೆ ಮನಸ್ಸಿನಲ್ಲಿ ತಳಮಳಿಸುವಳೋ ಹಾಗೆಯೇ ನನ್ನ ಭಕ್ತನ ದುಃಖವು ನನಗೆ ಸಹಿಸಲು ಆಗುವದಿಲ್ಲ ಅವನ ವಿಲಾಸಗಳನ್ನು ತೃಪ್ತಗೊಳಿಸಿ ಅವನನ್ನು ಮುಕ್ತನನ್ನಾಗಿ ಮಾಡಲು ನನ್ನಲ್ಲಿ ಸಾಮರ್ಥ್ಯವಿಲ್ಲವೇನು? ಭಕ್ತರನ್ನು ಸಲಹುವವ ಶ್ರೀಪತಿಯು ನಾನಿರುವಾಗ, ಅವರಿಗೆ ಅಧೋಗತಿಯು ಎಂದಿಗೂ ಆಗುವದಿಲ್ಲ

## ಪ್ರಕರಣ ೩೦

ಯಾವದು ಸಾಕಾರವಾಗುವದಿಲ್ಲವೋ, ಅದನ್ನು ಸಾಕಾರ ಮಾಡುವಿ, ಇಲ್ಲದ ಚಮತ್ಕಾರಗಳನ್ನು ತೋರುವಿ ಹಾಗೂ (ಚೈತನ್ಯ ಮತ್ತು ಜಡ ದೇಹದ) ಜೀವ ಶಿವನ ಲಗ್ನವನ್ನು ಮಾಡಿ (ಒಂದು ಗೂಡಿಸಿ) ನಿನ್ನ ಮಾಯೆಯಿಂದ ಅವರ ಪಾಲನೆಯನ್ನು ಮಾಡುವವನಾಗಿರುವಿ ಯೋಗಿಗಳಿಗೆ ಕಠಿಣವಾದ, ಬ್ರಹ್ಮದೇವ ಮತ್ತು ಶಂಕರನನ್ನು ಮೋಹಿಸಿದ ನಿನ್ನ ಮಾಯೆಯು ಕೇವಲ ನಿನ್ನ ದಾಸಿಯಾಗಿರುವಳು ನೀನು ಪರಾತ್ಪರ ಮಹಾಯೋಗಿಯಾಗಿರುವಿ ಆ ನಿನ್ನ ಕೃಪೆಯಿಂದಲೇ ನಾನು ಈವತ್ತು ಕೃತಕೃತ್ಯನಾದೆನು ಸಂಸಾರ ಭಯದ ಅರಿವೇ ಇಲ್ಲದಂತಾಗಿ ನಾನು ಯಾವಾಗಲೂ ಸ್ವಾನಂದದಲ್ಲಿ ತಲ್ಲೀನನಾಗಿರುವೆನು ದೃಶ್ಯ, ದೃಷ್ಟಾ, ದರ್ಶನ ಈ ತ್ರಿಪುಟಿಗಳಿಲ್ಲ ಹಾಗೂ ಮೂರೂ ಗುಣಗಳೂ ಇಲ್ಲ ಆತ್ಮ ಬೋಧದಿಂದ ಪೂರ್ಣ ಆನಂದವು ಪ್ರಾಪ್ತವಾಗಿರುವದರಿಂದ, ನೀನು 'ನಾನು' ಎಂಬುವದೂ ಲೋಪವಾಯಿತು ಆತ್ಮಜ್ಞಾನದಿಂದ ಸ್ವಾನಂದ ಪೂರ್ಣನಾಗಿರುವೆನೆಂಬುವದೂ ಕೂಡ ಮಾಯೆಯೇ ಆಗಿರುತ್ತದೆ ಪರಾ, ಪಶ್ಯಂತಿ, ಮಧ್ಯಮಾ ಮತ್ತು ವೈಖರೀ ಈ ನಾಲ್ಕೂ ವಾಣಿಗಳು ಶೂನ್ಯವಾದುದರಿಂದಲೇ ವೇದಗಳು ಮೌನವನ್ನು ತಾಳಿದವು ಕಾರ್ಯ, ಕಾರಣ ಮತ್ತು ಕರ್ತವ್ಯವೂ ನನಗಿರುವದಿಲ್ಲ ಆದರೂ "ಶ್ರೀಕೃಷ್ಣನಾಥಾ! ನಾನು ನಿನ್ನಲ್ಲಿ ಏನಾದರೂ ಬೇಡುವವನಿದ್ದೇನೆ ತಾಯಿಯು ಮಗುವಿನ ಹಟವನ್ನು (ಇಚ್ಛೆಯನ್ನು) ಕಳವಳಿಯಿಂದ ಪೂರೈಸುವಳೋ, ಅದರಂತೆಯೇ ಶ್ರೀಕೃಷ್ಣನಾದ! ಈ ನನ್ನ ಬೇಡಿಕೆಯನ್ನು ಕೇಳು ಇದು ನನ್ನ ಕೊನೆಯ ಬೇಡಿಕೆಯಾಗಿದೆ

ದೇವಾಧಿದೇವನೇ! ಇದನ್ನು ಲಕ್ಷಪೂರ್ವಕವಾಗಿ ಕೇಳು ಹೀಗೆಂದು ಅವನು (ಉದ್ಧವನು) ಶ್ರೀಕೃಷ್ಣನ ಚರಣಗಳನ್ನು ವಂದಿಸಿ ಅಗಮ್ಯವಾದ ಬೇಡಿಕೆಯನ್ನು ಬೇಡಿದನು ಜೀವನ್ಮುಕ್ತಿಯು ಬಹಳ ಶ್ರೇಷ್ಠವಾಗಿದೆಯೆಂದು ನನ್ನ ಚಿತ್ತಕ್ಕೆ ಭ್ರಾಂತಿಯಾಗಿತ್ತು ಆದರೆ ಅದರಲ್ಲ ನಿನ್ನ ಭಕ್ತಿಯು ನನಗೆ ತೋರುವದಿಲ್ಲ, ಆದ್ದರಿಂದ

ಆ ಶುಷ್ಕವಾದ ನಿನ್ನ ಮುಕ್ತಿಯು ನನಗೆ ಬೇಡ ಸದ್ಗುರು ಕೃಪೆಯ ವಚನದಿಂದಲೇ ಶಿಷ್ಯನಿಗೆ ಕೂಡಲೇ ಮುಕ್ತಿಯುಂಟಾಗುತ್ತದೆ ಆದರೆ ಅವರಲ್ಲಿ ಸದ್ಗುರುಭಕ್ತಿಯಿಲ್ಲದಿದ್ದರೆ, ಆ ಮುಕ್ತಿಯನ್ನು ತೆಗೆದುಕೊಂಡೇನು ಸುಡಬೇಕು? ಆ ಮುಕ್ತಿಯೂ ನನಗೆ ಬೇಡ ಅದಕ್ಕಾಗಿ ನಾನು ನಿನಗೆ ಮತ್ತೆ ಶರಣು ಬಂದಿದ್ದೇನೆ, ನನಗ ನಿನ್ನ ಸಾಯುಜ್ಯ ಮುಕ್ತಿಯ ಮೇಲಿನ ಗುರುಭಜನೆಯನ್ನು ಕೊಡು. ಹಿಂದಕ್ಕ ಬಹಳ ಜನರು ಭಕ್ತಿಯನ್ನು ಮಾಡಿದರು, ಅವರಿಗೆಲ್ಲ 'ನಾನು ಮುಕ್ತಿಯನ್ನೇ ಕೊಟ್ಟನು ಆದರೆ ಅವರಲ್ಲಿ ಯಾರೊಬ್ಬರೂ ಮುಕ್ತಿಯ ಮೇಲಿನ ಭಕ್ತಿಯನ್ನು ಬೇಡಲಿಲ್ಲ'ವೆಂದು ನೀನು ಅನ್ನಬಹುದು ಆದರೆ ಹಿಂದಕ್ಕೆ ಯಾರು ಯಾರು ನಿನ್ನ ಭಕ್ತಿಯನ್ನು ಮಾಡಿದರೋ, ಅವರೆಲ್ಲರಿಗೂ ನೀನು ಮುಕ್ತಿಯನ್ನು ಕೊಟ್ಟು ಮೋಸಗೊಳಿಸಿರುವಿ, ಆದರೆ ನನ್ನೆದುರು ನಿನ್ನ ಮೋಸವು ನಡೆಯಲಾರದು ಏಕೆಂದರೆ ಯಾರು ಅಹಂಕಾರ ಶೂನ್ಯರಾಗಿ ಸುಲಭವಾಗಿ ಆತ್ಮಾರಾಮನಾದರೋ, ಅವರು ಕೂಡ ನಿನ್ನ ನಿಷ್ಕಾಮ ಭಕ್ತಿಯನ್ನು ಮಾಡುತ್ತಾರೆ ನಿನ್ನ ಸ್ವರೂಪದ ಸ್ಥಿತಿಯೇ ಹೀಗಿರುತ್ತದ ಅಂದಮೇಲೆ ನಿನ್ನ ಗುರು ಭಕ್ತಿಯನ್ನು ಬಿಟ್ಟು ಮುಕ್ತಿಯನ್ನು ಬೇಡುವದೊಂದು ಭ್ರಮೆಯೆ ಆಗಿರುತ್ತದೆ ಆ ನಿನ್ನ ಮುಕ್ತಿಯು ನನಗೆ ಬೇಡ ನಿನ್ನ ಗುರುಭಕ್ತಿಯನ್ನೇ ನನಗೆ ಕೊಡು ಮುಕ್ತಿಯು ತನ್ನ ಕೈಯಲ್ಲಿ ಸಿಕ್ಕಮೇಲೆ, ಅವನಿಗೆ ಈಗ ಭಕ್ತಿಯನ್ನು ಕೊಡಲು ಬರುವದಿಲ್ಲವೆಂದು ನೀನು ಅನ್ನುವಿಯಾದರೆ, ಅಂತಹ ಕತೆಗಳೆಲ್ಲವನ್ನೂ ನನಗೆ ಹೇಳಬೇಡ, ಏಕೆಂದರೆ ನಿನ್ನ ಸಾಮರ್ಥ್ಯವೆಲ್ಲವನ್ನೂ ನಾನು ನಿಜವಾಗಿಯೂ ಬಲ್ಲೆನು ಯಾವದು ಮಾಡಲು ಅಸಾಧ್ಯವೋ, ಅದನ್ನು ಸಾಧ್ಯಮಾಡುವಿ ಯಾವದು ಚಲನವಾಗುವದಿಲ್ಲವೋ, ಅದನ್ನು ಚಲಿಸುವಿ, ಯಾವದು ಯಾರಿಗೂ ಮಾಡಲಾಗುವದಿಲ್ಲವೋ, ಅದನ್ನು ಮಾಡಿ ತೋರುವಿ! ನಿನ್ನ ಸಾಮರ್ಥ್ಯಕ್ಕೇ ಬೆಲೆಯೇ ಇರುವದಿಲ್ಲ ನಿನ್ನ ಸಾಮರ್ಥ್ಯವು ಅಮರ್ಯಾದಿತವಾಗಿರುತ್ತದೆ—

—ಹೇ ಶ್ರೀರಾಮಾ! ಪೂಲು ಕಟ್ಟುವ ಸಮಯದಲ್ಲಿ ಮುಳುಗುವ ಕಲ್ಲುಗಳನ್ನು ತೇಲುವಂತ ಮಾಡಿ, ಆ ಪೂಲಿನ ಮೇಲಿಂದ ವಾನರ ಸೈನ್ಯವನ್ನು ದಾಟಿಸಿರುವಿ! ವನದಲ್ಲಿ ವಾಸಿಸುವ ಮತ್ತು ಎಲೆ ಹಣ್ಣು ಹಂಪಲಗಳನ್ನು ಭಕ್ಷಿಸುವ ಮಂಗಗಳಿಗ, ನಾಲ್ಕೂ ಮುಕ್ತಿಗಳು ದಾಸಿಗಳಾದರು ಹಾಗೂ ಶ್ರೇಷ್ಠರಾದ ದೇವ ದೇವತೆಗಳು ಕೂಡ ಅವುಗಳನ್ನು ನಮಸ್ಕರಿಸಲು ಆರಂಭಿಸಿದರು ಕೇವಲ ವ್ಯಭಿಚಾರಿಣಿಯರೂ ಹಾಗೂ ಕುಮಾರಿಗಳಾದ ಗೋಪಿಕಾಸ್ತ್ರೀಯರೂ ಕೂಡ ಮೋಕ್ಷವನ್ನು ಹೊಂದಿದರು ಮತ್ತು ಅವರ ಕಾಲಧೂಳಿಯಲ್ಲಿ ಬ್ರಹ್ಮದೇವನೂ ಕೂಡ ಉರುಳಾಡಿದನು ನೀನು ಪರಮಾತ್ಮಾ ಪರಮೇಶ್ವರನಿರುವಿಯೆಂಬುದು ಆ ಗೋಪಿಕಾಸ್ತ್ರೀಯರಿಗೆ ಹಾಗೂ ಮಂಗಗಳಿಗೆ ಗೊತ್ತಿರಲಿಲ್ಲ ಆದರೂ ನಿನ್ನ ಭಕ್ತಿಯಿಂದಲೇ ಅವರಿಗ ನಿಜವಾಗಲೂ ಪರಬ್ರಹ್ಮ ಸ್ವರೂಪದ ಲಾಭವಾಯಿತು ಹೀಗೆ ನಿನ್ನ ಭಜನಯು ಅಚ್ಚರಿಯುಳ್ಳದ್ದಾಗಿದೆ, ನಿನ್ನ

ಭಜನೆಯ ಮಹಿಮೆಯು ತಿಳಿಯದಂತಾಗಿದೆ ನಿನ್ನ ದೇವತ್ವವು ಭಕ್ತಿಯ ಆಧೀನವೇ ಆಗಿದ್ದರೆ, ಮೋಕ್ಷದಲ್ಲಿಯಾದರೂ ಹೆಚ್ಚಿಗೆ ಏನಿರುವದು? ಭಕ್ತಿಯ ಉದರದಲ್ಲಿಯೇ ಮುಕ್ತಿಯ ಜನ್ಮವಾಯಿತು ಭಕ್ತಿಯ ಬಲದಿಂದಲೇ ಅವಳು (ವಿಸ್ತಾರವಾಯಿತು) ಬೆಳೆದಳು ಆ ಮುಕ್ತಿಯೇ ಭಕ್ತಿಯನ್ನು ನಾಶಗೊಳಿಸಲು ಉದ್ಯುಕ್ತಳಾದರೆ, ಅಂತಹ ಮಾತೃಘಾತಕಿಯಾದ ಮುಕ್ತಿಯನ್ನು ನಾನು ಎಂದಿಗೂ ಸ್ಪರ್ಶಿಸಲಾರೆನು—

—ಯಾರ ಸಹಾಯದಿಂದ ಮುಕ್ತಿಯನ್ನು ಆವರಿಸಿದ ದೋಷವು ಇಲ್ಲದಂತಾಗಿ ಅವಳು ಪವಿತ್ರಳಾಗುವಳೋ, ಅಂತಹದೊಂದು ಗುಟ್ಟನ್ನು ನಾನು ನಿನಗೆ ಹೇಳುವೇನು ಹೇ ಶ್ರೀಕೃಷ್ಣನೇ ಅದನ್ನು ಲಕ್ಷ್ಯಗೊಟ್ಟು ಕೇಳಬೇಕು ಅದೇನೆಂದರೆ ಮುಕ್ತನಾದ ಮೇಲೂ ನನಗೆ ನಿನ್ನ ಗುರುಭಜನೆಯನ್ನು ನೀಡಬೇಕು ಅದರಿಂದ ಮುಕ್ತಿಯೂ ಪವಿತ್ರಳಾಗುತ್ತಾಳೆ ಹೀಗೆಂದು ಉದ್ಧವನು ಶ್ರೀಕೃಷ್ಣನ ಚರಣಗಳಲ್ಲಿ ಉರುಳಾಡಿದನು ಹಾಗೂ ಅವನ ಚರಣಗಳನ್ನು ತನ್ನ ಮಸ್ತಕದ ಮೇಲಿರಿಸಿಕೊಂಡನು, ಅವನು ಏನಾದರೂ ಅವುಗಳನ್ನು ಬಿಡಲಾರದಾದನು ಅದರಿಂದ ಶ್ರೀಕೃಷ್ಣನು ಆಶ್ಚರ್ಯಚಕಿತನಾಗಿ, ಅವನಿಗೆ ಸಂತುಷ್ಟನಾದನು 'ನಾನು ಮುಕ್ತನಾದರೂ ಕೂಡ ನಿನ್ನ ಭಜನೆಯನ್ನು ಬಿಡಲಾರೆನು ನೀನು ಹೀಗೆ ನನ್ನ ಮೇಲೆ ಪೂರ್ಣ ಕೃಪೆದೋರು' ಎಂದು ಅವನು ಶ್ರೀಕೃಷ್ಣನ ಚರಣಗಳನ್ನು ಏನು ಮಾಡಿದರೂ ಬಿಡಲಾರದಾದನು ಸಂಪೂರ್ಣವಾಗಿ ಮುಕ್ತತೆಯು ಪ್ರಾಪ್ತವಾದನಂತರ ಸದ್ಗುರುವಿನ ಭಜನೆಯು ಸಿಗಲಾರದು ಆದರೆ ಇಂತಹ ವಿಘ್ನವು ಬಾಧಿಸಲಾರದಂತಹ ನಿನ್ನ ನಿರ್ವಿಘ್ನವಾದ ಭಕ್ತಿಯನ್ನು ನನಗೆ ಹೇಳಬೇಕು ನೀನು ಅನ್ನಬಹುದು, 'ಕೋಟ್ಯಾನುಕೋಟಿ ಜನ್ಮ ಪ್ರಯತ್ನಿಸಿದರೂ ದೊರೆಯಲಾರದ ಮುಕ್ತಿಯು ನಿನಗೆ ದೂರೆತರೆ, ಅದಕ್ಕೆ ನೀನು ವಿಘ್ನವೆನ್ನುವಿಯಾದರೆ, ನಿನ್ನಂತಹ ಮೂರ್ಖನು ಯಾರೂ ಇರುವದಿಲ್ಲ' ಎಂದು ಅನ್ನುವಿಯಾದರೆ, ಯಾವ ಕಾರಣದಿಂದ ನಿನ್ನ ಭಜನೆಗೆ ವಿಮುಖರಾಗುವೆವೋ, ಅದಕ್ಕೆ ಬಹಳ ದೊಡ್ಡ ವಿಘ್ನವೆಂದೇ ತಿಳಿಯುತ್ತೇನೆ ಶ್ರೀಕೃಷ್ಣಾ! ನಿನ್ನ ಭಕ್ತಿಯಿಲ್ಲದ ಮುಕ್ತಿಯು ನನಗೆ ರುಚಿಸುವದಿಲ್ಲ ನನ್ನ ನಿತ್ಯಮುಕ್ತತೆಯು ಭಂಗವಾಗದೆಯೇ, ಯಾವ ಉದ್ದೇಶವೂ ಇಲ್ಲದೆಯೇ ನಿನ್ನ ಭಕ್ತಿಮಾರ್ಗವು ನಡೆಯುವಂತೆ, ಹೇ ಶ್ರೀಕೃಷ್ಣಾ ನನ್ನ ಮೇಲೆ ಕೃಪೆದೋರು ಇದಕ್ಕೆ ಮಾತ್ರ ಕೃಪಣನಾಗಬೇಡ

'ನಿತ್ಯ ಮುಕ್ತಿಯನ್ನು, ನಾನು ನಿನಗೆ ಕೊಟ್ಟಿರುವೆನು' ಎಂದು ನೀನು ಅನ್ನಬಹುದು ಆದರೆ 'ಆ ನಿತ್ಯಮುಕ್ತಿಯು ನನ್ನ ಬಳಿ ಸಿದ್ಧವಾಗಿಯೇ ಇತ್ತು ಅದನ್ನು ಕೊಟ್ಟೆನೆನ್ನುವದು ನಿರರ್ಥಕವಾಗಿದೆ ಇದು ನಿನ್ನ ಧಾತೃತ್ವದ ಬಯಲು ಡಂಭವೇ ಆಗಿದೆ ಏಕೆಂದರೆ ನಿತ್ಯಮುಕ್ತತೆಯು ನನ್ನ ಬಳಿ ಸ್ವತಃ ಸಿದ್ಧವೇ ಇರುತ್ತದೆ ನಾನು ಈಗ ಅದಕ್ಕಿಂತಲೂ ಶ್ರೇಷ್ಠವಾದ ನಿನ್ನ ಭಕ್ತಿಯನ್ನು ಬೇಡುತ್ತಿದ್ದೇನೆ ಅದನ್ನು ನೀನು ದಯ ಮಾಡಿಸಿದರೆ, ನೀನು ನಿಜವಾಗಿಯೂ ದಾನವಂತನು (ದಾನ

ಶೂರನು) ಇರುವಿ ಇದಕ್ಕೇನೇ ನಾನು ಉದಾರತೆಯೆನ್ನುತ್ತೇನೆ ಆದರೆ ಹರ್ಷಚಿತ್ತ ನಾಗಿ, ಭಕ್ತಿಯನ್ನು ಕೊಡುವದು ನಿನ್ನ ಮನಸ್ಸಿಗೆ ಆಲ್ಹಾದ ಉಂಟಾದಂತೆ ಕಾಣು ವದಿಲ್ಲ ಕೃಷ್ಣಾ! ನನ್ನ ವಿಷಯದಲ್ಲಿ ನೀನು ಬಹಳ ಕೃಪಣನಾಗಿರುವಿ ಸದ್ಗುರು ಭಕ್ತಿ ಯನ್ನು ಇಲ್ಲದಂತೆ ಮಾಡುವ ಆ ನಿನ್ನ ಜೀವನ ಮುಕ್ತಿಯು ನಮಗೆ ಬೇಡವೇ ಬೇಡ ಅದಕ್ಕೆ ಮುಕ್ತಿ ಎನ್ನುವದೂ ಕೂಡ ಕೇವಲ ಭ್ರಮೆಯೇ ಆಗಿದೆ ಕೃಷ್ಣಾ ಅದು ಹೇಗೆಂಬುದನ್ನು ನಾನು ನಿನಗೆ ಹೇಳುವೆನು ಕೇಳು ಮೊಟ್ಟ ಮೊದಲು ಬದ್ಧತೆಯೇ ಇಲ್ಲವೆಂದ ಮೇಲೆ ಮುಕ್ತತೆಯು ಎಲ್ಲಿಯದು? ಅಂದಮೇಲೆ ಇಂತಹ ಸುಳ್ಳು ಮುಕ್ತಿ ಯನ್ನು ನಾನು ಸ್ಪರ್ಶಿಸಲಾರೆನು ನನ್ನ ಗುರುಭಕ್ತಿಯನ್ನೇ ನನಗೆ ಕೊಡು ಹಿಂದಕ್ಕ ಯಾರಿಗೆ ನೀವು ಮುಕ್ತಿಯನ್ನು ಕೊಟ್ಟರೋ ಅವರನ್ನು ಹೀಗೆಯೇ ಮೋಸಗೊಳಿಸಿದಿರಿ. ಹಾಗೆಯೇ ನನ್ನನ್ನು ಪರೀಕ್ಷಿಸಬೇಡ ಮುಕ್ತಿಗಿಂತ ಶ್ರೇಷ್ಠವಾದ ನಿನ್ನ ಭಕ್ತಿಯನ್ನೇ ನನಗೆ ಕೊಡು ' ಹೀಗೆಂದು ಅವನು ದಿಂಡುರುಳಿದನು ಹಾಗೂ ಓಡಿ ಹೋಗಿ ಶ್ರೀಕೃಷ್ಣನ ಚರಣಗಳನ್ನು ಅಪ್ಪಿದನು ಆವಾಗಲೇ ಶ್ರೀಕೃಷ್ಣನ ಪ್ರೇಮದ ಸೀಮೆಯು ಮೀರಿತು ಮತ್ತು ಉದ್ಧವನಿಗೆ ಅವನು ಪ್ರಸನ್ನನಾದನು ಮುಕ್ತಿಗಿಂತಲೂ ಶ್ರೇಷ್ಠವಾದ ಆ ಸದ್ಗುರು ಭಕ್ತಿಯನ್ನೇ ಉದ್ಧವನು ಯುಕ್ತಿ ಪ್ರಯುಕ್ತಿಗಳಿಂದ ಬೇಡಿಕೊಂಡನು ಮತ್ತು ಆ ಸಮಯದಲ್ಲಿ ಮಾಡಿದ ಭಾಷಣದಿಂದ ಶ್ರೀಕೃಷ್ಣನು ಸಂತುಷ್ಟನಾದನು—

—ಪ್ರೇಮಸುಖದಿಂದ ಸುಖಿಯಾಗಿ, ಸ್ವಾನಂದದಿಂದ ತಲೆದೂಗಹತ್ತಿದನು ಮತ್ತು ಆ ಆನಂದಮಯವಾದ ಸ್ಥಿತಿಯಲ್ಲಿ ಶ್ರೀಕೃಷ್ಣನು ಭಕ್ತಿಮುಕ್ತಿಗಳೆರಡನ್ನೂ ಉದ್ಧವನಿಗೆ ಅರ್ಪಿಸಿದನು ಜಗತ್ತಿನಲ್ಲಿ ಉದ್ಧವನೇ ಬಹಳ ಪುಣ್ಯವಂತನು, ಜಗತ್ತಿನಲ್ಲಿ ಉದ್ಧವನೇ ಧನ್ಯ,ಧನ್ಯನಿರುತ್ತಾನೆ ಏಕೆಂದರೆ ಅವನಿಗೆ, ಶ್ರೀಕೃಷ್ಣನು ಮುಕ್ತಿಗಿಂತಲೂ ಶ್ರೇಷ್ಠವಾದ ಗುರುಭಕ್ತಿಯನ್ನು ಸ್ವಾನಂದದಿಂದ ಅರ್ಪಿಸಿದನು ಗುರು ಮತ್ತು ಬ್ರಹ್ಮ ಇವರಿಬ್ಬರೂ ಒಂದೇ ಆಗಿರುವರೆಂಬುದನ್ನೂ ಸದ್ಗುರುವೇ ಶಿಷ್ಯನಿಗೆ ಉಪದೇಶಿಸುತ್ತಾರ ಆದ್ದರಿಂದ ಮುಕ್ತಿಗಿಂತಲೂ ಶ್ರೇಷ್ಠವಾದ ಗುರುಭಜನಯಿಂದ, ಸತ್–ಶಿಷ್ಯನಿಗೆ ದೋಷ ಉಂಟಾಗುವದಿಲ್ಲ ಈ ಮೊದಲಿನ ತನ್ನ ಭಕ್ತರಿಗೆ ಶ್ರೀಕೃಷ್ಣನು ಪ್ರಸನ್ನನಾಗಿ ಅವರು ಬೇಡಿದ ತನ್ನ ಮುಕ್ತಿಯನ್ನೇ, ಕೊಟ್ಟನು ಅವರಿಗೆ (ಭಕ್ತರಿಗೆ) ಈ ಭಕ್ತಿಯ ಅತರ್ಕ್ಯಸ್ಥಿತಿಯೇ ಗೊತ್ತಾಗಲಿಲ್ಲ ಆದರೆ ಎಲ್ಲರಲ್ಲಿಯೂ ಉದ್ಧವನು ಪ್ರಖ್ಯಾತ ನಾದನು ಮುಕ್ತಿಯ ಶಿರದ ಮೇಲೆ ಭಕ್ತಿಯನ್ನು ಕುಳ್ಳಿರಿಸಿದನು ಹಾಗೂ ಅಗಮ್ಯ ಸ್ಥಿತಿಯನ್ನು ಬೇಡಿಕೊಂಡನು ಮತ್ತು ಶ್ರೀಕೃಷ್ಣನು ಅದನ್ನು ಅವನಿಗ ಕೊಟ್ಟನು ಉದ್ಧವಾ! ಮುಕ್ತಿಗಿಂತಲೂ ಶ್ರೇಷ್ಠವಾದ ಭಕ್ತಿಯೇ ನನ್ನ ಅವತಾರದಲ್ಲಿಯ ಅವತಾರ ಶಕ್ತಿಯಾಗಿರುತ್ತದೆ ಅದರ ಸಹಾಯದಿಂದಲೇ ಶ್ರೀಪತಿಯಾದ ನಾನು ಉತ್ಪತ್ತಿ, ಸ್ಥಿತಿ ಹಾಗೂ (ಪ್ರಲಯ) ಸಂಹಾರವನ್ನು ಮಾಡಿ ಕೊನೆಗೆ ಅಲಿಪ್ತನಾಗಿರುವೆನು

ಮತ್ತು ನಿಜವಾಗಿಯೂ ಭಕ್ತಿಯ ಸಾಮರ್ಥ್ಯದಿಂದಲೇ ನಾನು ಕರ್ಮ ಮಾಡಿಯೂ ಮಾಡದವನಂತೆ, ಭೋಗವನ್ನು ಉಪಭೋಗಿಸಿಯೂ, ಅಭೋಕ್ತನಾಗಿರುವೆನೆಂಬುದನ್ನು ತಿಳಿದುಕೋ ಈ ಯೋಗವು ಯಾರಿಗೆ ತಿಳಿಯುವದಿಲ್ಲವೋ, ಅವರ ಸಂಸಾರವು ದುಃಖಮಯವಾಗುತ್ತದೆ ಆದರೆ ಈ ಯೋಗವು ನನ್ನ ಬಳಿ ನಿರಂತರವಾಗಿರುವದರಿಂದ ನಾನು ಸಂಸಾರದಲ್ಲಿದ್ದರೂ ಕೂಡ ಪೂರ್ಣಸುಖ ಸ್ವರೂಪನಾಗಿದ್ದೇನೆ ಈ ಯೋಗವನ್ನು ಶಂಕರನೊಬ್ಬನು ಅರಿಯುತ್ತಾನೆ ಹಾಗೂ ನಾನೊಬ್ಬನು ಅರಿಯುತ್ತೇನೆ ಆ ಯೋಗವು ಅಗಮ್ಯವಾಗಿರುವದರಿಂದ ಇತರರ ಬುದ್ಧಿಯು ಅದರಲ್ಲಿ ಪ್ರವೇಶಿಸುವದಿಲ್ಲ ಹೀಗೆ ಶ್ರೀಕೃಷ್ಣನು ತನ್ನ ಗುಪ್ತವಾದ ರಹಸ್ಯವನ್ನು ಉದ್ಧವನಿಗೆ ಹೇಳಿದನು ಮತ್ತು ಅದು ಅವನ ಅಂತಃಕರಣದಲ್ಲಿ ಸ್ಥಿರವಾಯಿತು ಆತ್ಮಜ್ಞಾನದಿಂದ ಇಬ್ಬರೂ ಏಕರೂಪವಾದರು ಮತ್ತು ಭಜನೆಯ ಮಹಿಮೆಯು ವಿದಿತವಾಯಿತು ಮುಕ್ತಿಗೆ ಭಕ್ತಿಯದೇ ಆಧಾರವಿದೆಯೆಂಬುದು ಸಂಪೂರ್ಣವಾಗಿ ತಿಳಿಯಿತು ಅದರಿಂದ ಅವನಿಗೆ ಹೊಟ್ಟೆಯಲ್ಲಿ ಹಿಡಿಸಲಾರದಷ್ಟು ಆನಂದವಾಯಿತು ಸ್ವಾನಂದಪುಷ್ಟಿಯಿಂದ ಅವನು ಭರಿತನಾದನು ಮಗುವಿನ ಹಟವನ್ನು ಪೂರ್ಣ ಮಾಡುವದಕ್ಕಾಗಿ ತಾಯಿಯು ತನ್ನ ಆಭರಣಗಳನ್ನು ತೊಡಿಸುವಳೋ, ಅದರಂತೆ ಶ್ರೀಕೃಷ್ಣನು ಉದ್ಧವನಿಗೆ ತನ್ನ ಅವತಾರ ಸ್ಥಿತಿಯನ್ನು ಸಿಕ್ಷಿತವಾಗಿ ಅರ್ಪಿಸಿದನು—

—ಮನಸ್ಸಿನ ಕಿವಿಯಿಂದ ಕೇಳದಂತೆ, ಬುದ್ಧಿಯ ಕಣ್ಣಿನಿಂದ ಕಾಣದಂತೆ ಹಾಗೂ ಕೊನೆಗೆ ಆಕಾಶಕ್ಕೂ ತಿಳಿಯದಂತೆ ಕಳನಿನಿಂದ ಭಗವಂತನು ಉದ್ಧವನಿಗೆ ತನ್ನ ಸ್ವರೂಪವನ್ನು ಅರ್ಪಿಸಿದನು ಯಾವನು ಬ್ರಹ್ಮನನ್ನು ಬಲ್ಲವನಿರುವನೋ, ಅವನ ಅನುಭವಕ್ಕೆ ಬಾರದ, ಯಾವದು ವೇದಾನುವಾದಕ್ಕೂ ತಿಳಿಯುವದಿಲ್ಲವೋ, ಅಂತಹ ಸ್ಥಿತಿಯನ್ನು ಶ್ರೀಕೃಷ್ಣನು ಉದ್ಧವನಿಗ ಕೃಪೆದೋರಿ ಅರ್ಪಿಸಿದನು ಆಹಾ! ನೋಡಿರಿ, ಒಂದಕ್ಕೆ ಶ್ರೀಕೃಷ್ಣನು ವಿಚಾರಿಸಿದಾಗ, ಉದ್ಧವನು 'ನಾನು ಉದ್ಧಾರಾದೆನು' ಎಂದು ಅಂದಿದ್ದನು ಮತ್ತು ಅವನು ಈಗ ಭಜನಭಾವನೆಯನ್ನು ಬೇಡಿಕೊಂಡನು ಇದರಲ್ಲಿಯ ಗುಹ್ಯವಾದ ಮರ್ಮವೇನಿದೆಯೆಂಬುದು ಶ್ರೀಕೃಷ್ಣನೊಬ್ಬನಿಗ ಗೊತ್ತು ಮುಕ್ತಿಗಿಂತ ಶ್ರೇಷ್ಠವಾದ ಭಕ್ತಿಯನ್ನು ಬೇಡಿದುದರಿಂದ, ಶ್ರೀಕೃಷ್ಣನ ಅವತಾರ ಶಕ್ತಿ ಅಂದರೆ ಮಾಯೆಯನ್ನು ನಿಯಂತ್ರಿಸುವ ಪೂರ್ಣಸ್ಥಿತಿಯು ಉದ್ಧವನ ಕೈಯಲ್ಲಿ ಸುಲಭವಾಗಿ ಸಿಕ್ಕಿತು ಮಿಥ್ಯಾ ಮಾಯೆಯ ಸ್ವರೂಪವನ್ನು ಪೂರ್ಣವಾಗಿ ತಿಳಿದೂ, ಅದರ ಇಚ್ಛಾ ಶಕ್ತಿ ಹಾಗೂ ಆಚ್ಛಾದನ ಮುಂತಾದ 'ಮಾಯೆಯನ್ನು ನಿಯಂತ್ರಿಸುವ' ಲಕ್ಷಣಗಳಿರುವವೋ, ಅದನ್ನು ಉದ್ಧವನಿಗ ಶ್ರೀಕೃಷ್ಣನು ಸ್ವತಃ ಕೊಟ್ಟನು ಬುದ್ಧಿಬಲದ ಆಟದಲ್ಲಿ, ಯಾವ ರೀತಿಯಾಗಿ ಪ್ರಾಕ್ತನ ಕರ್ಮದ ಸಂಚಯವು ಯಾವದೂ ಇಲ್ಲದೆಯೇ, ರಾಜಾ ಪ್ರಧಾನಿ, ಆನೆ, ಕುದುರ ಅಪಾಯುಗಳೆಲ್ಲರೂ ಒಂದುಗೂಡುತ್ತಾರ

ಆದರೆ ನಿಜವಾಗಿ ಪರೀಕ್ಷಿಸಿದಲ್ಲಿ ಎಲ್ಲ ಕಟ್ಟಿಗೆಯು ಒಂದೇ ಇರುತ್ತದೆ ಎರಡೂ ಕಡೆಯ ಸೈನ್ಯವು ಕಟ್ಟಿಗೆಯದೇ ಆಗಿರುತ್ತದೆ ಅದರಲ್ಲಿ ಯಾರು ಯಾರ ಶತ್ರುಗಳಿರುವರು? ನಿಜವಾಗಿಯೂ ನೋಡಿದಲ್ಲಿ, ಶತ್ರುತ್ವನಿಲ್ಲದೆಯೇ, ರಣಾಂಗಣದಲ್ಲಿ ನಿರ್ಜೀವಿಗಳ ಯುದ್ಧವಾಗುತ್ತದೆ ಆನೆ, ಕುದುರೆ ಹಾಗೂ ಮಂತ್ರಿಯು ಸತ್ತನೆಂದನ್ನುತ್ತಾರೆ ಆದರೆ ಸತ್ಯವಾಗಿಯೂ ಅದರಲ್ಲಿ ಯಾರ ಜೀವವು (ಪ್ರಾಣವು) ಹೋಗುತ್ತದೆ? ಇಲ್ಲವೆ ಶಿಪಾಯಿಯಿದ್ದವನು ಮಂತ್ರಿಯಾಗುತ್ತಾನ ಅಂದರೆ ಅವನಿಗೇನು ಗಜಾಂತಲಕ್ಷ್ಮಿಯು ಲಭಿಸುತ್ತಾಳೆಯೋ? ನಿಜವಾಗಿಯೂ ಜೀವವಿಲ್ಲದೆಯೇ, ಹೊಡದೆವು, ಹೊಡದೆವು ಎಂದು ಕೂಗುತ್ತಾರೆ! ಒಬ್ಬರಿಗೆ ಗೆಲವು (ವಿಜಯವು) ಮತ್ತು ಇನ್ನೊಬ್ಬರಿಗೆ ಸೋಲು ಆಗುತ್ತದೆ—

—ಆದರೆ ಅದರಲ್ಲಿಯ ಸೈನ್ಯಕ್ಕೆ, ಸೋಲು ಗೆಲುವಿನ ಜ್ಞಾನವೇ ಇರುವದಿಲ್ಲ ಸೈನ್ಯವು ನಷ್ಟನಾದ ನಂತರ, ಅದರಲ್ಲಿಯ ಯಾವ ಧರ್ಮಾತ್ಮನು ವೈಕುಂಠಕ್ಕ ಹೋಗುವನು? ಹಾಗೂ ಯಾವನು ನರಕದಲ್ಲ ಬೀಳುವನು? ಅದರಂತೆ ಬಂಧ ಮೋಕ್ಷಗಳೆರಡೂ ಸುಳ್ಳಾಗಿರುವವು ತಾತ್ಪರ್ಯವೇನೆಂದರೆ, ಬುದ್ಧಿ ಬೆಳೆದಂತೆಯೇ ಯಾವನು ಸಂಸಾರದಲ್ಲಿ ದೃಷ್ಟಿಯನ್ನಿಡುವನೋ, ಅವನೇ ಅವತಾರದಲ್ಲಿಯ ಅವತಾರಿಯಾಗಿರುವನು ಮತ್ತು ನಿಜವಾಗಿಯೂ ಅವನೇ ಭಗವಂತನಾಗಿರುವನು ವೇದ ವಚನಗಳೂ ಸುಳ್ಳಾಗಿವೆ ಬದ್ಧ ಮುಕ್ತತೆಯೂ ಸುಳ್ಳಾಗಿವೆ ಹೀಗೆ ತಿಳಿದೂ ಕೂಡ ಯಾವನು ವೇದದಲ್ಲಿ ಹೇಳಿದಂತೆ ಧರ್ಮಾಚರಣೆಯನ್ನು ಮಾಡುವನೋ, ಅದೇ ಅವನ ಮುಕ್ತಿಗಿಂತ ಶ್ರೇಷ್ಠವಾದ ಭಕ್ತಿಯಿರುವದು ಸಂಸಾರಪಾಶವನ್ನು ಹರಿದು ಅನೇಕ ಜನರು ನಿತ್ಯಮುಕ್ತರಾಗಿದ್ದಾರೆ ಆದರೆ ಅವರಿಗೆ ಈ ಭಕ್ತಿಯು ಬಹಳ ಕಠಿಣವಾಗಿದೆ ಅವರಿಗ ಈ ಅತರ್ಕ್ಯ ಸ್ಥಿತಿಯ ಕಲ್ಪನೆಯೂ ಕೂಡ ಬರಲಾರದು ಉದ್ಧವಾ! ಇಂತಹ ನನ್ನ ಸ್ಥಿತಿಯು ಯಾರ ಬಳಿ ಇರುವದೆಯೋ, ಅವನೇ ಮುಕ್ತಿಗಿಂತ ಶ್ರೇಷ್ಠವಾದ ಭಕ್ತಿಯನ್ನು ಮಾಡುವನು ಇತರರಿಗೆ ಈ ಸ್ಥಿತಿಯು ಅತರ್ಕ್ಯವಾಗಿದೆ ಇದನ್ನು ನಿಶ್ಚಯಪೂರ್ವಕವಾಗಿ ತಿಳಿದುಕೋ ಈ ರೀತಿಯಾಗಿ ಉದ್ಧವನಿಗೆ ಶ್ರೇಷ್ಠ ಗತಿಯು ಪ್ರಾಪ್ತವಾಯಿತು

## ಪ್ರಕರಣ ೫೧

ಉದ್ಧವನ ಮೊದಲಿನ ಪಂಕ್ತಿಯಲ್ಲಿ ಶ್ರವಣಕ್ಕಾಗಿ ಸಂಕಲ್ಪವನ್ನು ಮಾಡಿ ಕುಳಿತ ಪರೀಕ್ಷಿತಿ ರಾಜನು, ಶುಕಮುನಿಯ ಮುಖದಿಂದ ಆತ್ಮಜ್ಞಾನವನ್ನು ಕೇಳಿ ನಿಜಾತ್ಮತೃಪ್ತಿಯಿಂದ ಸಮಾಧಾನವನ್ನು ಹೊಂದಿದನು ಅಂತಹದೇ ಶ್ರೇಷ್ಠರಾದ ಜನರ ಪಂಕ್ತಿಯಲ್ಲಿ ಶ್ರೀಧರನು ಭಾವಾರ್ಥದೀಪಿಕಾರೂಪ ದೀಪವನ್ನು ಕೈಯಲ್ಲಿಪಿಡಿದುಕೊಂಡು

ಶಬ್ದಗಳಲ್ಲಿಯ ಶಬ್ದಾರ್ಥವನ್ನು ತಿಳಿಸಿಕೊಟ್ಟು, ಆತ್ಮಜ್ಞಾನದಿಂದ ತೃಪ್ತನಾದನು ಅಲ್ಲಿ ದೇಶ ಭಾಷೆಯಲ್ಲಿ ಪದಗಳನ್ನು ರಚಿಸಿ, ನೋಣವಾದ ಏಕನಾಥನು, ಜನಾರ್ಧನನ ಕೃಪೆಯಿಂದ ಅವರೆಲ್ಲರ ಜತೆಗೆ ಉಂಡು ತೃಪ್ತನಾದನು ಏಕನಾಥನು ನೋಣದ ರೂಪವನ್ನು ತಾಳಿದ್ದರಿಂದ, ಅವನಿಗೆ ಎಲ್ಲಿ ಬೇಕಾದಲ್ಲಿ ಹೋಗಲು ಬಂಧನವಿರಲಿಲ್ಲ ಏಕನಾಥನು ಜನಾರ್ಧನನ ಪ್ರೀತಿಯಿಂದ ಹುಚ್ಚಾಗಿ, ಭಾವಾರ್ಥ ದೀಪಿಕೆಯ ಪ್ರಕಾಶದಿಂದ, ಉತ್ತಮ ರಸಭರಿತವಾದ ಪದಾರ್ಥಗಳನ್ನು ಕಂಡು ತಾಟಿನ ಬಳಿ ಬೆಕ್ಕಾಗಿ ಬಂದನು 'ನಾನು ಬರಲೇನು?'' (ಮೀ ಯೇವು ಕಾ?) 'ನಾನು ಬರಲೇನು?'' (ಮೀ ಯೇವು ಕಾ?) 'ಮ್ಯಾಂ, ಮ್ಯಾಂ ಎಂದು ಉಚ್ಚರಿಸಿದ ತಕ್ಷಣ, ಸಜ್ಜನರು ಹರ್ಷಭರಿತರಾಗಿ ಕೃಪೆಯಿಂದ ಶೇಷಪ್ರಸಾದವನ್ನು ಅವನಿಗೆ ಕೊಟ್ಟು ಸಂತುಷ್ಟನನ್ನಾಗಿ ಮಾಡಿದರು ಏಕನಾಥನು ಜನಾರ್ಧನನ ದಾಸನಾಗಿರುವದರಿಂದ ಅವನು ನಮ್ರತೆಯಿಂದ ಬೆಕ್ಕಾದನು ಹಾಗೂ ನಂತರ ಎಂಜಲ ತಾಟನ್ನು ನೆಕ್ಕಿ ಪೂರ್ಣ ತೃಪ್ತನಾದನು ಅಥವಾ ಆ ಸಂತಸಮರ್ಥರ ತಾಟಿನಲ್ಲಿಯ, ಬ್ರಹ್ಮರಸದಿಂದ ತುಂಬಿದ ಬಟ್ಟಲನ್ನು ಪ್ರೀತಿಯಿಂದ ನೆಕ್ಕಿದುದರಿಂದ, ಸ್ವಾನಂದದಿಂದ ಪುಷ್ಟಿಯನ್ನು ಹೊಂದಿದನು ಯಾವನು ದೇಹ, ವಾಣಿ, ಮನಸ್ಸಿಂದ ನಮ್ರನಾಗಿ ಸದ್ಭಕ್ತಿಯಿಂದ ದಾಸನ ದಾಸನಾಗುವನೋ, ಅವನೇ ಏಕಾದಶಸ್ಕಂಧದ ಅಧಿಕಾರಿಯಾಗಿರುವನೆಂಬುದು ಜನಾರ್ಧನನ ಉಪದೇಶವಿರುತ್ತದೆ—

—ಯಾರು ಯಾರು ಜ್ಞಾನಾಭಿಮಾನಿಗಳಿರುವರೋ, ಯಾರು ಯಾರು ಪ್ರತಿಷ್ಠೆ ಮತ್ತು ಮಾನಸನ್ಮಾನವನ್ನಿಚ್ಛಿಸುವರೋ, ಅವರೆಲ್ಲರಿಗೂ ಈ ಏಕಾದಶಸ್ಕಂಧದಲ್ಲಿಯ ಜ್ಞಾನವು ತಿಳಿಯಲಾರದು ಪರಿಪೂರ್ಣವಾದ ಸದ್ಭಾವನೆಯಿಂದ ಎಲ್ಲಿಯವರೆಗೆ ಎಲ್ಲ ಪ್ರಾಣಿ ಮಾತ್ರಗಳಲ್ಲಿ ಭಗವದ್ಭಾವನೆಯು ಉತ್ಪನ್ನವಾಗುವದಿಲ್ಲವೋ, ಅಲ್ಲಿಯವರೆಗೆ ಏಕಾದಶ ಸ್ಕಂಧದಲ್ಲಿಯ ಜ್ಞಾನವು ತಿಳಿಯುವದೇ ಇಲ್ಲ ಈ ರೀತಿಯಾಗಿ ಭಾಗವತ ರೂಪ ಹೊಲದಲ್ಲಿ ಅತ್ಯಂತ ಶುದ್ಧವಾದ ಬೆಳೆಯು ಬಂದಿದೆ ಯಾರಿಗೆ ಎಲ್ಲ ಪ್ರಾಣಿ ಮಾತ್ರಗಳಲ್ಲಿ ಅತ್ಯಂತ ಆದರವಿರುವದೋ, ಆ ಸಾಧಕ ಜನರೇ ಇಲ್ಲಿ ಸುಖಿಯಾಗುವರು ಏಕಾದಶಸ್ಕಂಧವು ಕೇವಲ ಹೊಲವೇ ಅಲ್ಲ ಆದರ ಅದು ಪರಿಪೂರ್ಣ ಚಿತ್ಸಮುದ್ರವೇ ಆಗಿದೆ ಯಾರು ಅದರಲ್ಲಿ ಆಳವಾಗಿ ಮುಳುಗುವರೋ, ಅವರಿಗೇನೇ, ಅದರಲ್ಲಿಯ ಚಿದ್ರತ್ನಗಳು ಕೈ ಸೇರುತ್ತವ ಇದು ನಿಜವಾಗಿಯೂ ಬರಿ ಏಕಾದಶ ಸ್ಕಂಧವೇ ಅಲ್ಲ ಆದರ ಜೀವರೂಪ ಗಜೇಂದ್ರನನ್ನು ಉದ್ಧರಿಸುವದಕ್ಕಾಗಿ, ಜ್ಞಾನ ಚಕ್ರವನ್ನು ಕೈಯಲ್ಲಿ ಹಿಡಿದು ವೇಗದಿಂದ ಬಂದ ಶ್ರೀಹರಿಯೇ ಆಗಿರುವನು ಆದರೆ ಈ ತುಲನೆಯು ಕೂಡ ಏಕಾದಶಸ್ಕಂಧದ ನಿಜವಾದ ಮಹಿಮೆಯಲ್ಲದೆ, ಅಹಂಕಾರ ರೂಪ ಹಿರಣ್ಯಕಶ್ಯಪುವನ್ನು ಸೀಳಲು ಪ್ರಕಟನಾದ ಭಕ್ತಕೈವಾರಿ ಪೂರ್ಣಕೃಪಾಳುವಾದ ನರಹರಿಯೇ ಆಗಿರುತ್ತಾನೆ ಇಲ್ಲವೇ ಹೀಗೂ ಅನ್ನಬಹುದು ಕೃಷ್ಣ ಮತ್ತು ಉದ್ಧವ

ಇವರಿಬ್ಬರೂ ಗಂಗಾ ಹಾಗೂ ಯಮುನಾ ನದಿಗಳು ಮತ್ತು ಆತ್ಮಬೋಧವು ಗುಪ್ತ ವಾಗಿದ್ದ ಸರಸ್ವತೀ ನದಿಯು ಅಂದಮೇಲೆ ಏಕಾದಶಸ್ಕಂಧವು ತ್ರಿವೇಣಿ ಸಂಗಮದ ಪ್ರಯಾಗವೆಂದೇ ತಿಳಿಯಬೇಕಾಗುವದು –

—ಇಲ್ಲಿ ವೈರಾಗ್ಯರೂಪ ಮಾಘ ಮಾಸದಲ್ಲಿ ಶ್ರದ್ಧೆಯಿಂದ ಸೂರ್ಯೋದಯಕ್ಕೆ ಯಾರು ದಿನಾಲು ಸ್ನಾನ ಮಾಡುವರೋ, ಅವರು ಪವಿತ್ರರಾಗಿ ಪೂರ್ಣ ಕೃಷ್ಣಪದ ವನ್ನು ಪ್ರಾಪ್ತ ಮಾಡಿಕೊಳ್ಳುತ್ತಾರ ಆದರೆ ಈ ಉಪಮೆಯು ಕೂಡ ಏಕಾದಶಸ್ಕಂಧಕ್ಕೆ ಸರಿಯಾಗಲಾರದು. ಶ್ರೀಕೃಷ್ಣ ಹಾಗೂ ಉದ್ಧವನ ಗುಪ್ತ ರಹಸ್ಯದ, ಕಪಿಲಾಷಷ್ಠಿಯ ಮನೋಹರವಾದ ಪರ್ವಕಾಲದ ಯೋಗವು, ಸಾಧಕ ಜನರಿಗೆ ಬಹಳ ದಿನಗಳ ನಂತರ ಲಭಿಸಿದಂತಾಗಿದೆ ಇದರಲ್ಲಿ ಯಾರು ಮೀಯುವರೋ, ಅವರ ಕಲ್ಯಾಣವು ಕೂಡಲೇ ಆಗುವದು ಅವರಿಗೆ ಜನ್ಮಮರಣವು ಬಾಧಿಸುವದಿಲ್ಲ ಅವರು ಸ್ವತಃ ಪರಿಪೂರ್ಣ ಬ್ರಹ್ಮಸ್ವರೂಪವನ್ನು ಹೊಂದುವರು ಈ ಏಕಾದಶಸ್ಕಂಧವಂದರೆ, ಇದೊಂದು ಮೂವತ್ತೊಂದು ಅಂಕಣದ (ಖಣದ) ತುಳಸೀ ವೃಂದಾವನವೇ ಆಗಿರುತ್ತದೆ ಇಲ್ಲಿ ಸ್ವಾನಂದಪೂರ್ಣ ಶ್ರೀಕೃಷ್ಣನು ತನ್ನ ಸತ್ತ್ವಯಿಂದ ವಾಸ ಮಾಡುತ್ತಾನೆ ಇದರಲ್ಲಿಯ (೧೧ನೇ ಸ್ಕಂಧ) ೧೫೦೦ ಶ್ಲೋಕಗಳೆಂಪರೆ ಆ ವೃಂದಾವನದಲ್ಲಿಯ ತುಳಸೀ ಎಲೆಗಳಾಗಿ ರುತ್ತದೆ ಅದರಲ್ಲಿ ಜ್ಞಾನರೂಪ ಗೊನೆಯ ಗುಚ್ಛವು ಸುಶೋಭಿತವಾಗಿ ಕಾಣುತ್ತದೆ ಯಾರು ಅದಕ್ಕ ತಮ್ಮ ಜೀವನರೂಪ ನೀರನ್ನು ಎರೆಯುವರೋ, ಅವರು ಅತ್ಯಂತ ಪವಿತ್ರರಾಗುತ್ತಾರ ಹಾಗೂ ಪರಿಪೂರ್ಣ ಬ್ರಹ್ಮ ಸ್ವರೂಪರಾಗಿ ಕೃಷ್ಣನ ಮಂದಿರಕ್ಕೆ ತಲುಪುತ್ತಾರೆ ಯಾರು ಬೇರಿಗ ಹಾಕಿದ ನೀರನ್ನು ನಮಸ್ಕರಿಸುತ್ತಾರೋ, ಯಾರು ಬೇರಿನಲ್ಲಿಯ ಮಣ್ಣನ್ನು ಹಚ್ಚಿಕೊಳ್ಳುತ್ತಾರೋ, ಅವರು ಮೂರೂ ಲೋಕದಲ್ಲಿ ವಂದ್ಯ ರಾಗಿ, ನಿತ್ಯವೂ ನಿಜಸಖನಾದ ಶ್ರೀಕೃಷ್ಣನ ಪದವಿಯನ್ನು ಪ್ರಾಪ್ತಮಾಡಿಕೊಳ್ಳುತ್ತಾರೆ ಹಾಗೂ ಹೇ ಜಾಣನಾದ ಪರೀಕ್ಷಿತಿಯೇ! ಯಾರು ಪರಣದಿಂದ, ಸ್ವಸ್ವರೂಪಾಕಾರ ವಾಗಬೇಕೆಂದು ಪ್ರದಕ್ಷಿಣೆಯನ್ನು ಹಾಕುವರೋ, ಅವರು ಶ್ರೀಕೃಷ್ಣನ ಚರಣಗಳಲ್ಲಿ ತಲ್ಲೀನರಾಗುವರು ಯಾರು ಈ ಕಥೆಯಲ್ಲಿಯ ವಿಚಿತ್ರ ಲೀಲೆಯಿಂದ ತುಂಬಿದ ರಂಗೋಲಿಗಳನ್ನು ತುಳಸೀ ವೃಂದಾವನ ಮುಂದೆ ದಿನನಿತ್ಯವೂ ಹಾಕುವರೋ, ಅವರ ಬಳಿ ಶ್ರೀಕೃಷ್ಣನ ಸಾನ್ನಿಧ್ಯವು ನಿಶ್ಚಿತ ಇರುವದರಿಂದ, ಅವರು ಕಲಿಕಾಲನನ್ನು ಕೂಡ ಗೆಲ್ಲುತ್ತಾರ—

—ಈ ಏಕಾದಶಸ್ಕಂಧರೂಪ ವೃಂದಾವನದ ಪೂಜೆಯನ್ನು ಯಾರು ಮಾಡು ವರೋ, ಅವರಿಗ ಶ್ರೀಕೃಷ್ಣನು ಸಂತುಷ್ಟನಾಗಿ, ಅವರ ದೇಹಾಭಿಮಾನವನ್ನು ಕಳೆಯು ವನು ಇಲ್ಲಿ ಯಾವನು ಮನನರೂಪದಿಂದ ಪುಷ್ಪಾಂಜಲಿಗಳನ್ನು ನಿತ್ಯವೂ ಮೂರು ಕಾಲದಲ್ಲಿಯೂ ಅರ್ಪಿಸುವನೋ, ಅವನೂ ಆತ್ಮನಿಷ್ಠೆಯಿಂದ ಶ್ರೀಹರಿಯ ಸಾನ್ನಿಧ್ಯ ವನ್ನು ಹೊಂದುವನು ಶ್ರೀ ಭಾಗವತರೂಪ ವೃಂದಾವನದ ಬಳಿ, ಸಂತ ಸಜ್ಜನರೊಡ

ಗೂಡಿ, ಇದರಲ್ಲಿಯ ಕಥೆಯ ನಿರೂಪಣೆಯನ್ನು ಯಾವನು ಮಾಡುವನೋ, ಅವನು ನಿರಪೇಕ್ಷತೆಯಿಂದ ಆ ವೃಂದಾವನದ ಮಹಾಪೂಜೆಯನ್ನು ಮಾಡಿದಂತಾಗುವದು ಇಂತಹ ಮಹಾ ಪೂಜೆಯನ್ನು ಕಂಡು ಶ್ರೀ ಜನಾರ್ದನನು ಸಂತುಷ್ಟನಾಗುವನು ಮತ್ತು ಶ್ರವಣ ಮಾಡುವವರು ಹಾಗೂ ವಕ್ತೃತ್ವ ಮಾಡುವವರು ಇಬ್ಬರೂ ಜಾಗೃತರಾಗಿದ್ದಲ್ಲಿ, ಅವನು ಅವರಿಗೆ ತನ್ನ ನಿಜಾತ್ಮ ಜ್ಞಾನವನ್ನು ಕೊಡುವನು ಶ್ರವಣದಿಂದ, ಪಠಣದಿಂದ, ಮನನದಿಂದ ಹಾಗೂ ಅರ್ಥವನ್ನು ವಿವರಿಸುವದರಿಂದ, ಏಕಾದಶಸ್ಕಂಧವು ಎಲ್ಲರಿಗೂ ಸರಿಸಮಾನವಾದ ಫಲವನ್ನೇ ಕೊಡುವದು ಇದರಲ್ಲಿ ಜ್ಞಾನಾಜ್ಞಾನದ ಭೇದಭಾವವಿರುವದಿಲ್ಲ ಶ್ರವಣ, ಮನನ ಇಲ್ಲವೆ ಪಠಣ ಇವುಗಳಲ್ಲಿ ಯಾವದನ್ನೂ ಮಾಡಲಾಗದಿದ್ದರೆ, ಏಕಾದಶಸ್ಕಂಧದ ಪುಸ್ತಕವನ್ನಾದರೂ ಬ್ರಾಹ್ಮಣನಿಗೆ ದಾನ ಮಾಡಬೇಕು ಅಂದರೆ ಅದರಿಂದಲೂ ವಿವೇಕಜ್ಞಾನವು ಉತ್ಪನ್ನ ವಾಗುವದು ಏಕಾದಶಸ್ಕಂಧದ ದಾನವನ್ನು ಕೊಡಬೇಕು, ಏಕಾದಶಸ್ಕಂಧವನ್ನು ಪೂಜಿಸಬೇಕು, ಇಲ್ಲವಾದರೆ ಏಕಾದಶಸ್ಕಂಧದ ಸ್ಮರಣೆ ಮಾತ್ರದಿಂದಲೂ ಎಲ್ಲ ದುರಿತ ಗಳು ನಾಶ ಹೊಂದುತ್ತವೆ ಯಾರು ಏಕಾದಶಸ್ಕಂಧದ ಜೋಪಾನ ಮಾಡುವರೋ ಅವನ ಮನೆಯಲ್ಲಿ ಶ್ರೀಕೃಷ್ಣನು ವಾಸಮಾಡುತ್ತಾನೆ ಯಾವನಿಗೆ ಏಕಾದಶಸ್ಕಂಧದಲ್ಲಿ ಪೂರ್ಣ ಶ್ರದ್ಧೆಯಿರುವದೋ, ಅವನಿಗೆ ಜ್ಞಾನೋದಯವು ತಾನಾಗಿಯೇ ಆಗುತ್ತದೆ ಯಾವನು ಮುಖದಿಂದ ಇದರಲ್ಲಿಯ ಒಂದು ಶ್ಲೋಕವನ್ನು ಅರ್ಧ ಶ್ಲೋಕವನ್ನು ಇಲ್ಲವೇ ಒಂದು ನಾಲ್ಕಾಂಶ (ಪಾದ) ಶ್ಲೋಕವನ್ನು ದಿನಾಲು ಮರೆಯದೆ ಸ್ಮರಣ ಮಾಡುವನೋ, ಅವನು ಕೂಡ ಅತ್ಯಂತ ಪವಿತ್ರನಾಗುತ್ತಾನೆ ಹೀಗೆ ಈ ಏಕಾದಶ ಸ್ಕಂಧದ ಚರಿತ್ರೆಯು ಉದಾರವಾಗಿರುತ್ತದೆ—

—ಯಾವದಾದರೊಂದು ಕೆಲಸಕ್ಕೆ ಹೊರಟ ಸಮಯದಲ್ಲ, ಆಕಸ್ಮಿಕವಾಗಿ ಏಕಾದಶಸ್ಕಂಧದತ್ತ ದೃಷ್ಟಿಯು ಹೊರಳಿದಲ್ಲಿ, ಎಲ್ಲ ದುರಿತಗಳು ಹೆದರಿ ದಿಕ್ಕೆಟ್ಟು ಓಡಿ ಹೋಗುತ್ತವೆ ಯಾವನ ಕೈಯಲ್ಲಿ ಏಕಾದಶಸ್ಕಂಧವಿರುವದೋ, ಅವನನ್ನು ದೇವರು ಶಿರಸಾ ವಂದಿಸುತ್ತಾರೆ ಅವನು ಎಲ್ಲ ಜಗತ್ತಿನ ಉದ್ಧಾರವನ್ನೂ ಮಾಡಬಹುದು ಇಷ್ಟೊಂದು ಏಕಾದಶಸ್ಕಂಧದ ಮಹತ್ವವಿರುವದು ಎಲ್ಲ ಪುರಾಣಗಳಲ್ಲಿ, ಈ ಏಕಾದಶ ಸ್ಕಂಧವೆಂದರೆ, ಒಂದು ವನಕೇಸರಿ (ಸಿಂಹವೇ)ಯೇ ಆಗಿದೆ ಅದು (ಸಿಂಹ) ಒಂದರ್ಧಕ್ಷಣದಲ್ಲಿಯೇ ಸಂಸಾರ ರೂಪ ಆನೆಯನ್ನು ಸೀಳಿಬಿಡುತ್ತದೆ 'ಮಾಮೇಕ ಮೇವ ಶರಣಂ' (ಅ ೧೨ ಶ್ಲೋಕ ೧೫) ಈ ಶ್ಲೋಕದ ಪಠಣವನ್ನು ಮಾಡುವದ ರಿಂದ, ಸಂಸಾರವು ಮಾಯೆಯ ಕತ್ತನ್ನು ಒಚುಕಿ ಭಯದಿಂದ ಇದ್ದಲ್ಲಿಯೇ ನಷ್ಟ ವಾಗುತ್ತದೆ 'ನಿರಪೇಕ್ಷಂ ಮುನಿಶಾಂತಂ'ರ (ಅಧ್ಯಾಯ ೧೪ ಶ್ಲೋಕ ೧೬) ಎಂಬ ಶ್ಲೋಕವು ಅವಗತವಾದಲ್ಲಿ, ಅಂದರೆ ಹೃದಯದಲ್ಲಿ ಬಿಂಬಿಸಿತೆಂದರೆ, ಶ್ರೀಕೃಷ್ಣನೂ ಕೂಡ ಅವನ ಸೇವೆಯನ್ನು ಮಾಡುತ್ತಾನೆ ಅಂದಮೇಲೆ ಅಲ್ಲಿ ಸಂಸಾರ ಭಯವು

ಹೇಗೆ ಉಳಿಯುವದು? ಏಕಾದಶಸ್ಕಂಧದಲ್ಲಿಯ ಪ್ರತಿಯೊಂದು ಶ್ಲೋಕವೂ ಭವ ಬಂಧನವನ್ನು ಪರಿಹೊಗೆಯುತ್ತದೆ ಎಲ್ಲಿ ಶ್ರೀಕೃಷ್ಣನೇ ಉಪದೇಶಕನಿರುವನೋ ಅಲ್ಲಿ ಒಂದು ಶ್ರೇಷ್ಠ, ಇನ್ನೊಂದು ಕನಿಷ್ಠವೆಂಬುವ ಪ್ರಶ್ನೆಯೇ ಉದ್ಭವಿಸುವದಿಲ್ಲ ಶ್ರೀ ಭಾಗವತದಲ್ಲಿ ಏಕಾದಶಸ್ಕಂಧವೇ ಮೋಕ್ಷದ ಸಾಧನವಾಗಿರುತ್ತದೆ ಆದ್ದರಿಂದ ಅರ್ಧಶ್ಲೋಕದಿಂದಲೂ ಕೂಡ ಸಂಸಾರ ಬಂಧನವು ಸಂಪೂರ್ಣವಾಗಿ ನಷ್ಟವಾಗುತ್ತದೆ ಶ್ರೀಕೃಷ್ಣನು ವೇದದ ಜನ್ಮಸ್ಥಾನವಾಗಿದ್ದಾನೆ ಹಾಗೂ ಅವನ ಮುಖದಿಂದ ಹೊರಟ ಈ ನಿರೂಪಣವೆಂದರೆ, ಎಲ್ಲ ವೇದಗಳ ಅರ್ಥವು ತಾವಾಗಿಯೇ ತವರಿಗ ಬಂದಂತೆ ಆಗಿರುವದು ಆದ್ದರಿಂದ ಏಕಾದಶಸ್ಕಂಧದಲ್ಲಿ, ಎಲ್ಲ ವೇದಾರ್ಥಗಳು ತವರಿನಲ್ಲಿದ್ದಂತ ಸುಖಿಯಾಗಿವೆ ವೇದಗಳು ಸಾಧಕನನ್ನು ಸಂಪೂರ್ಣ ಪರಮಾರ್ಥಿಯನ್ನಾಗಿ ಮಾಡುತ್ತವೆ ವೇದಶಾಸ್ತ್ರಗಳ ಮಂಥನದಿಂದಲೇ ವ್ಯಾಸಮುನಿಯು ಮಹಾಭಾರತವನ್ನು ರಚಿಸಿದನು ಆ ಮಹಾಭಾರತದ ಮಥಿತಾರ್ಥವೆಂದರೆ ಭಾಗವತದಲ್ಲಿಯ ಭಗವಂತನ ಶ್ರೀಕೃಷ್ಣಲೀಲೆಯೇ ಆಗಿರುತ್ತದೆ ಅಂತಹ ಆ ಭಾಗವತದ ಸಾರಾಂಶವೇ ಈ ಏಕಾದಶಸ್ಕಂಧವಾಗಿದೆಯೆಂದು ತಿಳಿ ಅಲ್ಲಿಯ ವ್ಯಾಖ್ಯಾತನು ಶ್ರೀಕೃಷ್ಣನಿದ್ದು, ಅವನು ಅದರಲ್ಲಿ ಪರಬ್ರಹ್ಮ ರಸವನ್ನು ಬೋಧಿಸಿರುವನು ಯತಿಗಳಲ್ಲಿ ಹೇಗೆ ಪರಮಹಂಸ ಇಲ್ಲವೆ ದೇವರಲ್ಲಿ ಹೇಗೆ ವಿಷ್ಣು, ಹಾಗೆಯೇ ಭಾಗವತದಲ್ಲಿ ಏಕಾದಶಸ್ಕಂಧವು ರಸಭರಿತ ಮತ್ತು ಪೂಜನೀಯವಾಗಿರುತ್ತದೆ ತೀರ್ಥ ಕ್ಷೇತ್ರಗಳಲ್ಲಿ ಹೇಗ ವಾರಣಾಸಿ ಅಂದರೆ ಕಾಶಿ, ಇಲ್ಲವೆ ನದಿಗಳಲ್ಲಿ ಹೇಗೆ ಪಾವಿತ್ರ್ಯತೆಯಿಂದ ಗಂಗಾನದಿ ಅಥವಾ ವ್ರತಗಳಲ್ಲಿ, ಉದ್ಧಾರಗತಿಯನ್ನು ಕೊಡುವಂತಹ ಏಕಾದಶೀ ವ್ರತವಿರುವದೋ ಹಾಗೆಯೇ ಈ ಏಕಾದಶಸ್ಕಂಧದ ಮಹತ್ವವನ್ನು ವರ್ಣಿಸಲು ಅಸಾಧ್ಯವಾಗಿರುವದು ಪಕ್ಷಿಗಳಲ್ಲ ಹೇಗೆ ರಾಜಹಂಸವು, ರಸದಲ್ಲಿ ಹೇಗೆ ಅಮೃತವು, ಹಾಗೆಯೇ ಭಾಗವತದಲ್ಲ ಏಕಾದಶಸ್ಕಂಧವು ಸುರಸವಾಗಿದೆ—

—ಈ ಏಕಾದಶಸ್ಕಂಧವನ್ನು ಶ್ರೀ ಏಕನಾಥನು ಶ್ರೀ ಜನಾರ್ಧನನ ಕೃಪೆಯಿಂದ ಪ್ರಾಕೃತ ಮರಾಠೀ ಭಾಷೆಯಲ್ಲಿ ರೂಪಾಂತರಿಸಿದನು ಇದನ್ನು ಯಾವನು ಸದ್ಭಾವನೆ ಯಿಂದ ಓದಿ ಅರಿತುಕೊಳ್ಳುವನೋ, ಅವನು ಐಕ್ಯದ ನಿಜವಾದ ಸುಖಕ್ಕೆ ಪಾತ್ರ ನಾಗುವನು ತಂದೆಯು ಮಗುವಿನ ಕೈಹಿಡಿದು ಹೇಗ ಅಕ್ಷರವನ್ನು ತೀಡಿಸುವನೋ, ಹಾಗೆಯೇ ಈ ಏಕಾದಶಸ್ಕಂಧದ ಅರ್ಥವನ್ನು ಅಂದರೆ ಪರಮಾರ್ಥವನ್ನು ಶ್ರೀ ಜನಾರ್ಧನನು ಶ್ರೀ ಏಕನಾಥನಿಂದ ಬರೆಯಿಸಿದನು ಏಕನಾಥ ಮಹಾರಾಜರು ಅನ್ನುತ್ತಾರ ಗ್ರಂಥವನ್ನು ಹೇಗೆ ಬರೆಯಬೇಕು ಶಬ್ದಾರ್ಥವನ್ನು ಹೇಗೆ ಪ್ರತಿಪಾದಿಸ ಬೇಕು ಮತ್ತು ಇದರ ಉತ್ಪತ್ತಿಯನ್ನು ಕೂಡ ನಾನು ಅರಿಯೆನು ಆದರ ಸಮರ್ಥ ಶ್ರೀ ಜನಾರ್ಧನನು ನನ್ನಿಂದ ಇದೆಲ್ಲವನ್ನೂ ನುಡಿಸುತ್ತಿದ್ದಾನೆ ಜನಾರ್ಧನನು ಒಂದು ಚಮತ್ಕಾರವನ್ನು ಮಾಡಿದನು ಅದೇನೆಂದರೆ ಮೂರ್ಖಶಿರೋಮಣಿಯಾದ ನನ್ನಿಂದ

ಈ ಏಕಾದಶಸ್ಕಂಧವನ್ನು ವರ್ಣಿಸಿದನು, ಜ್ಞಾನವನ್ನು ನುಡಿಸಿದನು, ಗ್ರಂಥದಲ್ಲಿ ಪರಮಾರ್ಥದ ಸ್ವರೂಪವನ್ನು ಇಳಿಸಿದನು, ಹೀಗೆ ಜನಾರ್ಧನನು ಸಮರ್ಥನಿದ್ದು ಕೃಪಾಸಾಗರನಾಗಿದ್ದಾನೆ ಏಕಾದಶಸ್ಕಂಧದಲ್ಲಿಯ ಒಂದೊಂದು ಪದದ ಅರ್ಥವೂ ಶಾಸ್ತ್ರವನ್ನರಿತವರಿಗೂ ಕೂಡ ಅತ್ಯಂತ ರಹಸ್ಯಮಯವಾಗಿದೆ—

—ಆದರೆ ಅಂತಹ ಪರಮಾರ್ಥವನ್ನು ನನ್ನಿಂದ ನುಡಿಯಿಸಿದ ಜನಾರ್ಧನನು ಸಾಮರ್ಥ್ಯಶಾಲಿಯಾಗಿದ್ದಾನೆ ಮತ್ತು ಇನ್ನೊಂದು ಆಶ್ಚರ್ಯವೇನೆಂದರೆ ಶ್ರೀ ಜನಾರ್ಧನನು ನನ್ನ ನನ್ನತನವನ್ನು (ಅಹಂಕಾರವನ್ನು ಸಂಪೂರ್ಣವಾಗಿ ನಷ್ಟ ಗೊಳಿಸಿದ ನಂತರ ತನ್ನ ಶಕ್ತಿಯಿಂದ, ಪರಮಾರ್ಥವನ್ನು ನನ್ನ ಕಡೆಯಿಂದ ಬೋಧಿಸಿದನು ಸೂತ್ರಧಾರನು ಹೇಗೆ ಕಳಸೂತ್ರಿಯ ಬೊಂಬೆಯನ್ನು ಚೆನ್ನಾಗಿ ಕುಣಿಸುವನೋ, ಹಾಗೆಯೇ ಜನಾರ್ಧನನು ಗ್ರಂಥಾರ್ಥವನ್ನು ನಿರೂಪಿಸಿದನು ಎಲ್ಲೆಡೆಯಲ್ಲಿಯೂ ಶ್ರೀ ಜನಾರ್ಧನನೇ ವ್ಯಾಪಿಸಿರುವನು ಅವನೇ ನನ್ನ (ಏಕನಾಥ) ಹೆಸರಿನಿಂದ ಈ ಅಮೂಲ್ಯವಾದ ಗ್ರಂಥವನ್ನು ರಚಿಸಿ ಸಾತ್ವಿಕ ಜನರಿಗೆ ತತ್ವಾರ್ಥವನ್ನು ತೋರಿಸಿದನು ಕವಿತ್ವದಲ್ಲಿ ನನ್ನ ಹೆಸರಿದೆ ನಿಜ, ಆದರೆ ಕೊನೆಗೆ ನನ್ನ ಹೆಸರಿಗೂ ಕೂಡ ಸ್ಥಳವು ಬಾಕೀ ಉಳಿದಿಲ್ಲ ಹೀಗೆ ಜನಾರ್ಧನನ ಐಶ್ವರ್ಯವು ಆಶ್ಚರ್ಯ ವುಳ್ಳದ್ದೂ ಹಾಗೂ ಅಲೌಕಿಕವೂ ಆಗಿರುತ್ತದೆ ಜ್ಞಾನವಂತರು ಈ ಗ್ರಂಥವನ್ನು ನಿರೀಕ್ಷಿಸಿ, ಏಕಾಜನಾರ್ಧನನು ಜ್ಞಾನಿಯಾಗಿರುವನೆಂದು ಅನ್ನಬಹುದು, ಆದರ ಅದನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ನೋಡಿದಲ್ಲಿ, ಅವರು ಅವನಿಗ ಮೂರ್ಖನೆಂದೇ ಅನ್ನುತ್ತಾರೆ ಏಕಾಜನಾರ್ಧನನ ಪರಿಸ್ಥಿತಿಯನ್ನು ನೋಡಿದಲ್ಲಿ, ಕೆಲವರು ಅವನನ್ನು ದೊಡ್ಡ ಭಕ್ತನೆಂದೆನ್ನುತ್ತಾರೆ ಕೆಲವರು ಅವನು ಜೀವನ್ಮುಕ್ತನೆಂದೆನ್ನುತ್ತಾರ, ಮತ್ತ ಕೆಲವರು ಅವನಿಗ ಪ್ರಾಪಂಚಿಕನೆನ್ನುತ್ತಾರೆ ಮತ್ತೆ ಹೀಗೂ ಅನ್ನುತ್ತಾರೆ—

—ಈ ಏಕಾಜನಾರ್ಧನನಿಗೆ ಆಸನವು ಗೊತ್ತಿಲ್ಲ, ಧ್ಯಾನಿಸುವದು ಗೊತ್ತಿಲ್ಲ, ಗುರಿ, ಮುದ್ರಾ, ಜಪಮಾಲೆ ಹಿಡಿಯುವದು, ಇವುಗಳಲ್ಲಿಯ ಯಾವ ಉಪಾಸನೆಗಳ ಲಕ್ಷಣವೂ ಇವನಲ್ಲಿಲ್ಲ ಇವನ ಮಂತ್ರವಾವುದು? ಶಿಷ್ಯನಿಗೆ ಇವನು ಎಂತಹ ಉಪದೇಶ ವನ್ನು ಕೊಡುವನು? ಇದನ್ನು ಅವನು ಯಾರಿಗೂ ತಿಳಿಯಗೊಡುವದಿಲ್ಲ ಇಷ್ಟಾದರೂ ಅನೇಕ ಭಾವಿಕ ಜನರು ಭಾವಾರ್ಥದಿಂದ ಅವನಿಗೆ ಮೋಹಿತರಾಗಿದ್ದಾರೆ! ಅವನು ಕೇವಲ ಹರಿನಾಮದ ಘೋಷದಿಂದಲೇ ಜನರನ್ನು ಮಂತ್ರ ಮುಗ್ಧರನ್ನಾಗಿ ಮಾಡಿದ್ದಾನ ಹೀಗೆ ಅನೇಕ ತರಹದ ಸಂದೇಹಗಳನ್ನು ಜನಾರ್ಧನನು ಜನರಲ್ಲಿ ಸ್ವತಃ ಉತ್ಪನ್ನ ಮಾಡುತ್ತಲಿದ್ದಾನೆ ನಾನು ಅದರ ಪರ್ಯಾಯಕ್ಕೆ ಉತ್ತರಿಸಬೇಕೆಂದರೆ, ಅದನ್ನೂ ಕೂಡ ಜನಾರ್ಧನನೇ ಮಾತನಾಡುತ್ತಾನ ಯುಕ್ತಿ ಪ್ರಯುಕ್ತಿಯಿಂದಲೂ ನನ್ನಲ್ಲಿ 'ನಾನು' ಎಂಬುವ ಅಭಿಮಾನವು ಉಳಿಯುವದಿಲ್ಲ! ಈ ಪ್ರಕಾರವಾಗಿ ನನ್ನ ನನ್ನತನವನ್ನು ಜನಾರ್ಧನನು ಪ್ರಾಶನ ಮಾಡಿದ್ದಾನೆ ಈಗ ನನ್ನ ಈ ಬೆರಳಿನ

ಅಲ್ಲಾಡುವ ಕ್ರಿಯೆಯನ್ನೂ ಜನಾರ್ಧನನೇ ಮಾಡುತ್ತಲಿದ್ದಾನೆ ಹೆಚ್ಚಿಗೆ ಏನು ಹೇಳಲಿ? ಕಣ್ಣುಗಳ ಎವೆ ಇಕ್ಕುವದು, ತೆಗೆಯುವದು, ಶ್ವಾಸೋಚ್ಛ್ವಾಸದ ಕ್ರಿಯೆಯನ್ನೂ ಹಾಗೂ ಎಲ್ಲ ಇಂದ್ರಿಯಗಳ ವ್ಯಾಪಾರವನ್ನು ಮಾಡುವವನೂ ನಿಜವಾಗಲೂ ಶ್ರೀ ಜನಾರ್ಧನನೇ ಆಗಿರುವನು. ನಾನು ಕವಿತೆಯನ್ನು ಅನ್ನಲು ಪ್ರಾರಂಭಿಸಿದಲ್ಲಿ, ಆ ಕವಿತೆಯೂ ಅವನೇ ಆಗುವನು ತಾತ್ಪರ್ಯವೇನೆಂದರೆ, 'ನಾನು' ಎಂದು ಅನ್ನಲು ನನಗೆ ಅವಕಾಶವೇ ಇಲ್ಲ ನನ್ನ ಎಲ್ಲ ಅಹಂಕೃತಿಯು ಶ್ರೀ ಜನಾರ್ಧನನೇ ಆಗಿರುತ್ತಾನೆ ಹೀಗೆ ಏಕನಾಥನು ಜನಾರ್ಧನನಿಗೆ ಶರಣು ಬಂದುದರಿಂದ, ಅವನೇ ಈ ಎಲ್ಲ ಗ್ರಂಥವನ್ನು ಪೂರ್ಣ ಮಾಡಿದನು ಈ ರೀತಿಯಾಗಿ ಮಾತನಾಡಲು ಹೋದರೆ, ಅವರು ಹೀಗೂ ಹೇಳಬೇಡವೆಂದು ಕಣ್ಣಿನಿಂದ ಸನ್ನೆಯನ್ನು ಮಾಡುತ್ತಾರೆ ಮತ್ತು ಹೀಗೆ ನೀನು ಪರಿಹಾರವನ್ನು ಹೇಳುವಿಯಾದರೆ, ನಿನ್ನಲ್ಲಿ ಭಿನ್ನತ್ವವುಂಟಾಗುತ್ತದೆ ಇನ್ನು ಮುಂದೆ ಬೇರೆ ಅನ್ನಿರಿ, ಇಲ್ಲವೆ ಒಂದೇ ಅನ್ನಿರಿ, ಎಲ್ಲೆಡೆಯಲ್ಲಿಯೂ ಶ್ರೀ ಜನಾರ್ಧನನೇ ವ್ಯಾಪಿಸಿದ್ದಾನೆ ಅವನೇ ಈ ಗ್ರಂಥದ ಲೇಖನವನ್ನು ಸವಿಸ್ತಾರವಾಗಿ ರಚಿಸಿದನು ಈ ಗ್ರಂಥವನ್ನು ಪ್ರಾಕೃತ ಭಾಷೆಯಲ್ಲಿ ರಚಿಸಿರುವದೆಂದು, ಅದನ್ನು ಪಂಡಿತರು ಅಲ್ಲಗಳೆಯಬಾರದು ಆತ್ಮನಿಷ್ಠೆಯಿಂದ, ಪರಮಾತ್ಮ ಸ್ಥಿತಿಯ ಉಲ್ಲೇಖವು ಸರಿಯಾಗಿದೆಯೋ, ಇಲ್ಲವೋ ಎಂಬುದನ್ನು ಕಂಡುಹಿಡಿಯಬೇಕು—

—ಸಂಪೂರ್ಣ ಗ್ರಂಥವು ಸಂಸ್ಕೃತ ಭಾಷೆಯಲ್ಲಿದ್ದರೂ, ಅದರ ಅರ್ಥವನ್ನು ದೇಶಭಾಷೆಯಲ್ಲಿಯೇ ಹೇಳಬೇಕಾಗುತ್ತದೆ ಅಂದಮೇಲೆ ಇದಂತೂ ಸುಲಭವಾಗಿಯೇ ಸಿದ್ಧವಾಗಿದೆ ಆದ್ದರಿಂದ ಸುಜ್ಞಾನರೂ ಹಾಗೂ ಸಾಧಕ ಜನರು ಇದನ್ನು ಅಲ್ಲಗಳೆಯಲಾರರು! ಯಾರು ಈ ಗ್ರಂಥವನ್ನು ಆದರಿಸುವರೋ ಅಥವಾ ಹೀಯಾಳಿಸುವರೋ, ಇಲ್ಲವೇ ಸಂಪೂರ್ಣವಾಗಿ ನಿಂದಿಸುವರೋ, ಅವರೆಲ್ಲರೂ ನನಗೆ ಸದ್ಗುರುಸ್ವರೂಪ ಪರಬ್ರಹ್ಮಮೂರ್ತಿಯೇ ಆಗಿರುತ್ತಾರೆ! ಜನಾರ್ಧನನು ನನಗೆ, ಎಲ್ಲ ಪ್ರಾಣಿ ಮಾತ್ರಗಳಲ್ಲಿ ತನ್ನನ್ನೇ ನೋಡಲು ಕಲಿಸಿದ್ದಾನೆ ಪ್ರಕೃತಿ ಸ್ವಭಾವದ ಲಕ್ಷಣದತ್ತ ಎಂದಿಗೂ ತಾವು ನೋಡಬಾರದು, ಶಿಷ್ಯನ ಕ್ಷೋಭವು ಸಹನವಾಗದಿದ್ದರೆ, ನಿಂದಿಸುವವರ ನಿಂದೆಯು ಚಿತ್ತದಲ್ಲಿ ಅರಗದಿದ್ದರೆ, ಆ ಸಾಧಕನು ಪರಮಾರ್ಥದಲ್ಲಿ ಶುಷ್ಕನಾಗಿರುವನೆಂದು ತಿಳಿಯಬೇಕು ಅವನನ್ನು ಕ್ರೋಧವು ನಿಃಸಂಶಯವಾಗಿ ನಾಶಗೊಳಿಸಿತೆಂದು ತಿಳಿಯಬೇಕು ತಾತ್ಪರ್ಯವೆಂದರೆ, ಬೇರೆಯವರ ಪ್ರಕೃತಿ ಗುಣದಿಂದ ಮನಸ್ಸಿಗೆ ಕ್ರೋಧ ಉಂಟಾಗುತ್ತಿದ್ದರೆ, ನಾವು ಅದನ್ನು ಗಮನಿಸಬಾರದು ಎಲ್ಲ ಪ್ರಾಣಿ ಮಾತ್ರಗಳಲ್ಲಿ ಚೈತನ್ಯ ಸ್ವರೂಪವನ್ನೇ ನೋಡಬೇಕು ಇದೇ ಉಪದೇಶವನ್ನು ಜನಾರ್ಧನನು ನನಗೆ ಆಗ್ರಹಪೂರ್ವಕವಾಗಿ ಉಪದೇಶಿಸಿರುವನು ಇದಿಲ್ಲದೆಯೇ ಜ್ಞಾನಿಗಳು ಭವಸಾಗರವನ್ನು ದಾಟಲಾರರು ಈ ತೆರನಾಗಿ ನಿರ್ಧಾರ ಮಾಡಿದಲ್ಲಿ, ಗುರು ಇವನು ಗುರುವೇ, ಇರುವನು ಮತ್ತು ಶಿಷ್ಯನು ಸಂವಾದ ಗುರು ಹಾಗೂ

ನಿಂದಿಸುವವನು ಪರಮಗುರು ಮತ್ತು 'ನಿಸರಾದ' ಅಂದರೆ ನೀಚ ಹಾಗೂ ದುಷ್ಟನು ಸದ್ಗುರುವಾಗಿರುವನು ಇದೇ ಜನಾರ್ಧನನ ಉಪದೇಶವಾಗಿರುತ್ತದೆ ಜನಾರ್ಧನನ ಕೃಪೆಯಿಂದ ಗುರುವು ಇಲ್ಲದ ಸ್ಥಳವೇ ಕಾಣಿಸುವದಿಲ್ಲ ಅವನೇ ನಿಜವಾಗಲೂ ನನ್ನನ್ನೊಳಗೊಂಡು ಎಲ್ಲ ಪ್ರಾಣಿಮಾತ್ರಗಳನ್ನೂ ಗುರುಸ್ವರೂಪವನ್ನಾಗಿ ಮಾಡಿದ್ದಾನೆ ಅವನೇ ಈ ಗ್ರಂಥವನ್ನು ಪೂರ್ತಿಗೊಳಿಸಿದನು ಇದು ನನ್ನ ಯೋಗ್ಯತೆಯಲ್ಲವೆಂದು ಗ್ರಂಥಾರಂಭದ ಸಮಯದಲ್ಲಿಯೇ ಶ್ರೋತೃವೃಂದಕ್ಕೆ ನಿವೇದಿಸಿದ್ದೇನೆ ಈ ಗ್ರಂಥವನ್ನು ಪೈಠಣದಲ್ಲಿ ಪ್ರಾರಂಭಿಸಿ, ಐದು ಅಧ್ಯಾಯಗಳು ಮುಗಿದ ನಂತರ, ಇನ್ನುಳಿದ ಗ್ರಂಥವನ್ನು ಆನಂದವನದಲ್ಲಿ ಅಂದರೆ ಕಾಶಿಯಲ್ಲಿ ಪೂರ್ಣ ಮಾಡಿದೆನು

—'ಅವಿಮುಕ್ತ', 'ಮಹಾಸ್ಮಶಾನ', 'ಆನಂದವನ' ಇವೆಲ್ಲವುಗಳು ಕಾಶೀ ಕ್ಷೇತ್ರದ ಬೇರೆ ಬೇರೆ ನಾಮಗಳಾಗಿರುವವು ಅದರ ಕಾರಣವನ್ನೂ ಕೇಳಿರಿ ಎಲ್ಲಿ ಮುಕ್ತಿಯು ಸಿಗುತ್ತದೆಯೋ, ಸಜ್ಜನ ಹಾಗೂ ದುರ್ಜನ ಇಬ್ಬರಿಗೂ ಒಂದೇ ಗತಿಯು ಪ್ರಾಪ್ತವಾಗುತ್ತದೆಯೋ, ಮತ್ತೆ ಜನ್ಮ ಮರಣದ ಚಕ್ರದಲ್ಲಿ ಸಿಲುಕಬೇಕಾಗುವದಿಲ್ಲವೋ, ಅಂತಹ ಕ್ಷೇತ್ರಕ್ಕೆ 'ಅವಿಮುಕ್ತ' ವೆಂದು ಅನ್ನುತ್ತಾರೆ ಯಾರು ಅಲ್ಲಿಯ ಸ್ಮಶಾನದಲ್ಲಿ ಪ್ರಾಣವನ್ನು ತ್ಯಜಿಸುವರೊ, ಅವರಿಗೆ ಮತ್ತೆ ತಿರುಗಿ ಆ ಸ್ಮಶಾನವನ್ನು ನೋಡಬೇಕಾಗುವದಿಲ್ಲ ಅಂತಲೇ ಅದಕ್ಕೆ 'ಮಹಾಸ್ಮಶಾನ'ವೆಂದು ಅನ್ನುತ್ತಾರೆ ಅಲ್ಲಿ ಪ್ರಾಣ ಬಿಡುವ ಸಮಯದಲ್ಲಿ ಶ್ರೀ ಶಂಕರನು ಜೀವಕ್ಕೆ ಬ್ರಹ್ಮಜ್ಞಾನವನ್ನುಪದೇಶಿಸುತ್ತಾನ 'ವರುಣಾ' ಮತ್ತು 'ಅಶಿ' ಈ ಎರಡೂ ಮರ್ಯಾದಿತ ನದಿಗಳ ಮಧ್ಯದಲ್ಲಿ 'ಪಂಚಕ್ರೋಶಿ' ಇರುತ್ತದೆ ಅಲ್ಲಿ ದುರಿತಗಳಿಗೆ ಪ್ರವೇಶವಿರುವದಿಲ್ಲ ಆದುದರಿಂದಲೇ ಇವಕ್ಕೆ 'ವಾರಣಾಶಿ' ಎಂದು ಅನ್ನುತ್ತಾರೆ 'ವರುಣಾ'ದಿಂದ ಪಾತಕಗಳು ನಷ್ಟವಾಗುತ್ತವೆ 'ಅಶಿ'ಯಿಂದ ದೋಷಗಳ ಪರಿಹಾರವಾಗುತ್ತದೆ ಮತ್ತು ಮಧ್ಯದಲ್ಲಿ ವಿಶ್ವೇಶ್ವರನ ನಗರವಿರುತ್ತದೆ ಆದುದರಿಂದಲೇ ಇದು ನಿಜವಾಗಿಯೂ 'ವಾರಣಾಶಿ' ಯಾಗಿರುತ್ತದೆ ಯಾವದು ವಿಶ್ವೇಶ್ವರನ ಕ್ರೀಡಾಸ್ಥಾನವಿದ್ದು, ಅಲ್ಲಿ ಶಂಕರನು ಆನಂದದಿಂದ ಹಾಗೂ ಸ್ವಲೀಲೆಯಿಂದ ಕ್ರೀಡಿಸುತ್ತಾನ ಎಂದು ಅದಕ್ಕೆ 'ಆನಂದವನ' ಎಂದು ಅನ್ನುತ್ತಾರ ಅಲ್ಲಿ ಮರಣ ಹೊಂದಲು ದೇವರೂ ಕೂಡ ಇಚ್ಛಿಸುತ್ತಾರೆ ಅಲ್ಲಿ ಬದುಕಿರುವಾಗ ಉತ್ತಮ ಅನ್ನವು ಉಣ್ಣಲು ಸಿಗುತ್ತದೆ ಹಾಗೂ ಮರಣ ಹೊಂದಿದ ಮೇಲೆ ನಿಶ್ಚಯವಾಗಿ ಮುಕ್ತಿಯು ಸಿಗುತ್ತದೆ ಆದ್ದರಿಂದ ಅದಕ್ಕೆ 'ಆನಂದವನ' ಅನ್ನುತ್ತಾರ ಎಂದು ಶಂಕರನು ಪಾರ್ವತಿಗೆ ಹೇಳಿರುತ್ತಾನ ಮುಕ್ತಿಕ್ಷೇತ್ರವಾದ ಆ ವಾರಣಾಶಿಯಲ್ಲಿ ಮಣಿಕರ್ಣಿಕೆಯ ಮಹಾತಟದ ಮೇಲೆ ಪಂಚಮುದ್ರಾ ಎಂಬ ಪೀಠವಿರುವದು ಅಲ್ಲಿ ಈ ಏಕಾದಶ ಸ್ಕಂಧದ

ಮೇಲೆ ಏಕನಾಥನು ಟೀಕೆಯನ್ನು ಮಾಡಿದನು ಇದನ್ನು ಕೇಳಿ ಸಜ್ಜನರಿಗೆ ಸಂತೋಷ ವಾಯಿತು ಮತ್ತು ಜನಾರ್ಧನನು ಆನಂದದಿಂದ ಪ್ರಸನ್ನನಾದನು ಐದು ಅಧ್ಯಾಯ ಗಳು ಮುಕ್ತಾಯನಾದ ನಂತರ ಅವನು ತನ್ನ ಮುಖದಿಂದಲೇ ನನಗ ವರದಾನ ವನ್ನು ಕೊಟ್ಟನು ಅದೇನೆಂದರೆ——

——ಈ ಗ್ರಂಥವು ನಿರ್ವಿಘ್ನದಿಂದ ಕೊನೆಗಾಣುವದು ಇದರಿಂದ ಜ್ಞಾನಿಗಳಿಗೆ ಸಂತೋಷವಾಗುವದು, ಮುಮುಕ್ಷುಗಳಿಗೆ ಪರಮಾರ್ಥದ ಲಾಭವಾಗುವದು ಹಾಗೂ ಸಾಧಕ ಜನರು ಸಂಸಾರ ಸಾಗರವನ್ನು ದಾಟಿ ಹೋಗುವರು, ಇಂಥ ಭೂಳಿ ವಿಷಯಾಧೀನರಾದ ಜನರು ಇದರ ಶ್ರವಣ ಹಾಗೂ ಪಠಣದಿಂದ ಹರಿಭಕ್ತ ರಾಗಿ ಸನ್ಮಾರ್ಗವನ್ನವಲಂಬಿಸುವರು ಈ ಅನುವಾದವು ಮರಾಠೀ ಭಾಷೆಯಲ್ಲಿ ದ್ದರೂ ಜ್ಞಾನದಾನವನ್ನೀಯುವದರಲ್ಲಿ ಸಾಮರ್ಥ್ಯಶಾಲಿಯಾಗಿರುವದು ಹೀಗೆ ಅವನು (ಜನಾರ್ಧನನು) ಭಾಷಣವನ್ನು ಮಾಡಿ ಕೃಪಾದೃಷ್ಟಿಯಿಂದ ನನ್ನ (ಏಕನಾಥನ) ಕಡೆಗೆ ನೋಡಿದನು ಆವಾಗಲೇ ನಾನೂ (ಏಕನಾಥನೂ) 'ಯಾರು ಈ ಗ್ರಂಥದ ಅರ್ಥವನ್ನು ಅವಲೋಕಿಸುವರೋ, ಅವರಿಗೆ ಬ್ರಹ್ಮಭಾವನೆಯಿಂದ ಬ್ರಾಹ್ಮಣರ ಭಕ್ತಿಯನ್ನು ಮಾಡುವದು ಹಾಗೂ ನಾಮದಲ್ಲಿ ಅಖಂಡ ಪ್ರೀತಿಯುಂಟಾಗುವಂತೆ ಮಾಡಬೇಕು ಅವರು ಬ್ರಾಹ್ಮಣರನ್ನು ದ್ವೇಷಿಸಬಾರದು, ಅವರಿಗೆ ನಿಂದೆಯ ಸ್ಪರ್ಶವೂ ಕೂಡ ಆಗಬಾರದು, ಏಕೆಂದರೆ ಬ್ರಹ್ಮದ್ವೇಷದಿಂದ ಕುಲಕ್ಷಯವಾಗು ವದು ಹಾಗೂ ನಿಂದೆಯ ಬಳಿಯಂತೂ ಎಲ್ಲ ಪಾತಕಗಳ ರಾಶಿಯೇ ಇರುವದು, ಎಂದು ವಿನಂತಿಯನ್ನು ಮಾಡಿದೆನು ಈ ವಿನಂತಿಯನ್ನು ಕೇಳಿ ಕೃಪೆಯಿಂದ ಸಂತುಷ್ಟನಾಗಿ ನಾನು ಬೇಡಿದುದೆಲ್ಲ ವರದಾನವನ್ನು ನನಗೆ ಕೊಟ್ಟನು ಯಾರು ಈ ಗ್ರಂಥದಲ್ಲಿ ಪೂರ್ಣ ಭಕ್ತಿಯನ್ನಿಡುವರೋ, ಅವರ ಮನಸ್ಸಿನಲ್ಲಿ ನಿಂದೆ ಹಾಗೂ ದ್ವೇಷಗಳ ಪ್ರವೇಶವಾಗುವದಿಲ್ಲ ಮತ್ತು ರಾಮನಾಮದಲ್ಲಿಯೆ ಪ್ರೀತಿಯು ಹೆಚ್ಚಿಗೆ ಯಾಗುವದು ಇವನು ವಿದ್ವಾನ ಬ್ರಾಹ್ಮಣ, ಅವನು ಅವಿದ್ವಾನ ಬ್ರಾಹ್ಮಣನೆಂದು ಭೇದವನ್ನೆಣಿಸದೆ, ಅವರಲ್ಲಿ ಬ್ರಹ್ಮಭಾವನೆಯ ಭಕ್ತಿಯು ಉತ್ಪನ್ನವಾಗುವದು ಮತ್ತು ಅದರಿಂದ ನಿಶ್ಚಿತವಾಗಿ ಬ್ರಹ್ಮಪ್ರಾಪ್ತಿಯಾಗುವದು ನಾಮದ ಹೊರತಾಗಿ ಸಾಧಕನಿಗೆ ಬೇರೆ ಒಳ್ಳೆಯ ಸಾಧನವೇ ಇಲ್ಲ ಮತ್ತು ಬ್ರಾಹ್ಮಣರಿಗಿಂತ ಹೆಚ್ಚಿನ ದೇವರಿಲ್ಲ, ಈ ಗ್ರಂಥದಿಂದ ಭಜನೆಯು ನಿತ್ಯನೂತನವಾಗಿ ಬೆಳೆಯುವದು ಹೀಗ ವರವನ್ನು ಕೊಟ್ಟು ನನ್ನನ್ನು ಆಲಿಂಗಿಸಿ ಅಂದನು——

——ಈ ಗ್ರಂಥದಲ್ಲಿ ಯಾರು ಭಕ್ತಿಯನ್ನಿಡುವರೋ, ಅವರ ಸಂಸಾರ ಪಾಶವನ್ನು ನಾನು ಹರಿದೊಗೆಯುವನು ಈ ಅಲಂಕೃತವಾದ ಭಾಷೆಯನ್ನೂ ಜನಾರ್ಧನನೇ ಮಾತನಾಡಿದನು ಹೀಗ ಜನಾರ್ಧನನು ಕೃಪ ಮಾಡಿರುವನು ಇದರ ಮತಿತಾರ್ಥವು

ನನಗೆ ತಿಳಿಯಲಾರದು ನನ್ನ ಭಾಗ್ಯವು ಬಹಳ ಗಹನವಾಗಿರುವದು ಅಂತೆಯೇ ಎಲ್ಲ ಶ್ರೋತೃವರ್ಗವೃಂದವೂ ನನ್ನಲ್ಲಿ ಕೃಪೆ ತೋರಿಸಿದ್ದಾರೆ ಅರ್ಥ ಪರಮಾರ್ಥದ ದೃಷ್ಟಿಯಿಂದಲೂ ಗ್ರಂಥಾರ್ಥದಿಂದಲೂ ನನ್ನನ್ನು ಸಂರಕ್ಷಿಸಿದ್ದಾರೆ ಮುಂದೆ ಯಾವಾಗ ಈ ಗ್ರಂಥದ ನಿರೂಪಣೆಯಾಗುವದೋ ಇಲ್ಲವೆ ಎಲ್ಲಿ ಈ ಕಥೆಯು ಹೇಳಲಾಗುವದೋ, ಅಲ್ಲಿಯೂ ಹೀಗೆಯೇ ಶ್ರೋತೃವೃಂದವು ಸಾವಧಾನವಾಗಿರ ಬೇಕೆಂದು ಅವರಿಗೆ ದೀನನಾದ ನನ್ನ ಪ್ರಾರ್ಥನೆ ಇರುತ್ತದೆ ಈ ತರಹದ ಪ್ರಾರ್ಥನೆ ಯನ್ನು ಕೇಳಿ ಸಜ್ಜನರು ಸಂತುಷ್ಟರಾದರು ಮತ್ತು ಅವರು ಈ ಕಥೆಯೆಂದರೆ ಅವರ ಪ್ರಾಣಕ್ಕಿಂತಲೂ ಪ್ರಿಯವಾಗಿದೆಯೆಂದರು ಎಲ್ಲಿ ಇದರ ವ್ಯಾಖ್ಯಾನವಾಗು ವದೋ ಅಲ್ಲಿ ನಾವು ಉಪಸ್ಥಿತರಾಗುವೆವೆಂದು ನುಡಿದು ಸಂತುಷ್ಟರಾದರು ಹಾಗೂ ವರವನ್ನು ಕೊಟ್ಟು ಜನಾರ್ಧನನು ಪ್ರಸನ್ನನಾದನು ಏಕನಾಥನು ಜನಾರ್ಧನನಿಗೆ ಶರಣು ಹೋದದ್ದರಿಂದ ಈ ಗ್ರಂಥವು ಸಮಾಪ್ತವಾಯಿತು ಮಹಾಮುಕ್ತಿಕ್ಷೇತ್ರ ವಾದ ವಾರಣಾಶಿಯಲ್ಲಿ ವಿಕ್ರಮ ಶಕೆ (ಸಂವತ್) ೧೬೩೦ ವೃಷನಾಮ ಸಂವತ್ಸರ ದಲ್ಲಿ ಜನಾರ್ಧನನ ಕೃಪೆಯಿಂದ ಏಕನಾಥನು ಈ ಗ್ರಂಥವನ್ನು ರಚಿಸಿದನು ಮಂಗಲದಾಯಕವಾದ ಕಾರ್ತೀಕ ಮಾಸದಲ್ಲಿ ಶುದ್ಧ ಪೌರ್ಣಿಮೆಯ ಸೋಮವಾರ ಶಿವಯೋಗದಲ್ಲಿ ಏಕಾದಶ ಸ್ಕಂಧದ ಅನುವಾದವು ಸಂಪೂರ್ಣವಾಯಿತು ವೈಭವೀ ಶಾಲಿವಾಹನ ಶಕೆ ಹಾಗೂ ಸಂವತ್ಸರವನ್ನು ಹೇಳುವೆನು ದಂಡಕಾರಣ್ಯದಲ್ಲಿಯ ಶ್ರೀರಾಮ ಕ್ಷೇತ್ರ ಹಾಗೂ ಗೋದಾವರೀ ತಟದಲ್ಲಿರುವ ಪೈಠಣದಲ್ಲಿ, ವೈಭವೀ ಶಾಲಿವಾಹನ ಶಕೆ ಸಂಖ್ಯೆ ೧೪೯೫, ಶ್ರೀಮುಖನಾಮ ಸಂವತ್ಸರದಲ್ಲಿ ಈ ಟೀಕೆಯು ಸಂಪೂರ್ಣವಾಯಿತು

ಈ ರೀತಿಯಾಗಿ ಏಕಾದಶ ಸ್ಕಂಧದ ಟೀಕೆಯನ್ನು ಜನಾರ್ಧನನ ಕೃಪೆಯಿಂದ ಏಕನಾಥನು ಮಾಡಿದನು ಇದರ ಎರಡೂ ಸ್ಥಳಗಳ ಶಕೆ ಸಂವತ್ಸರಗಳ ಉಲ್ಲೇಖ ವನ್ನು ಸ್ಪಷ್ಟಗೊಳಿಸಿದನು ಈ ಗ್ರಂಥದಲ್ಲಿ ಒಟ್ಟಿಗೆ ೧೫೦೦ ರಸಭರಿತವಾದ ಶ್ಲೋಕ ಗಳಿರುತ್ತವೆ ಮತ್ತು ಇದರಲ್ಲಿ ಮೂವತ್ತೊಂದು ಅಧ್ಯಾಯಗಳಿದ್ದು ಅದರಲ್ಲಿಯ ಜ್ಞಾನರಹಸ್ಯವನ್ನು ಶ್ರೀಕೃಷ್ಣನು ಸ್ವಮುಖದಿಂದಲೇ ಹೇಳಿದ್ದಾನೆ ಈ ಏಕಾದಶ ಸ್ಕಂಧವೆಲ್ಲವೂ ಐಕ್ಯತ್ವದಿಂದಲೇ ವ್ಯಾಪಿಸಿರುತ್ತದೆ ಅದರಲ್ಲಿ ಭಿನ್ನತ್ವವಿರುವದೇ ಇಲ್ಲ ಹನ್ನೊಂದು ಎಂದರೆ ಒಂದರ ಮುಂದೆ ಒಂದು, ಅದರಲ್ಲಿ ಎರಡನೇ ಅಂಕಿಗೆ ಪ್ರವೇಶಿಸಲು ಅವಕಾಶವೇ ಇರುವದಿಲ್ಲ ಅದೇ ಹನ್ನೊಂದು ಇಂದ್ರಿಯಗಳ ಸುಖ ವನ್ನು ಐಕ್ಯತೆಯಿಂದ ವಿಲಕ್ಷಣ ರೀತಿಯಲ್ಲಿ ಪರಿಪಕ್ವ ಸ್ಥಿತಿಗೆ ಆಶ್ಚರ್ಯಕಾರಕವಾಗಿ ತಂದಿರುತ್ತದೆ ಈ ಏಕಾದಶ ಸ್ಕಂಧದ ಟೀಕೆಯನ್ನು ಒಂದೇ ಬ್ರಹ್ಮರಸದಿಂದ ಏಕನಾಥನು ಮಾಡಿದ್ದಾನೆ ಜನಾರ್ಧನನ ಕೃಪೆಯಿಂದ ಈ ಐಕ್ಯತೆಯ ನಿಜವಾದ ಸುಖವು ಸಾಧಕ ಜನರಿಗ ಫಲಿಸುವದು ಈ ಚಿದ್ರತ್ನರೂಪ ಜ್ಞಾನಗ್ರಂಥವನ್ನು

ಜನಾರ್ಧನನು ಏಕನಾಥನ ಹೆಸರಿನಿಂದ ಯಥೋಚಿತವಾದ ಅರ್ಧದಿಂದ ಸಂಪೂರ್ಣ ಮಾಡಿದನು ನನ್ನ (ಏಕನಾಥನ) ಹೆಸರಿನಿಂದ ಶ್ರೀ ಜನಾರ್ಧನನೇ ಗ್ರಂಥವನ್ನು ರಚಿಸುವವನಾಗಿದ್ದಾನೆ ಏಕನಾಥನು ಜನಾರ್ಧನನಿಗೆ ಶರಣು ಬಂದಿದ್ದಾನೆ ಮತ್ತು ಜನಾರ್ಧನನಿಗೂ ಐಕ್ಯತ್ವದ ಅಭಿರುಚಿಯು ವಿಶೇಷವಾಗಿರುವದು ಸೂರ್ಯನ ಕಿರಣಗಳು ಯಾವ ರೀತಿಯಾಗಿ ಸೂರ್ಯನ ಪ್ರಕಾಶದಿಂದ ಎಲ್ಲ ಅಂಧಃಕಾರವನ್ನು ನಾಶಮಾಡುತ್ತವೆಯೋ, ಅದರಂತೆಯೇ ಜನಾರ್ಧನನ ತೇಜದಿಂದ ಐಕ್ಯತ್ವವು ಬೆಳಕಿಗೆ ಬಂದಿತು ಆದರ ಪ್ರಕಾಶದಿಂದಲೇ ಗ್ರಂಥವು ಸಂಪೂರ್ಣವಾಯಿತು ಐಕ್ಯತ್ವದಿಂದಲೇ ಜನಾರ್ಧನನಿಗೆ ಅರ್ಪಿಸುತ್ತೇನೆ ಜನರಲ್ಲಿ ಜನಾರ್ಧನನೊಬ್ಬನೇ ಇರುವನೆಂದು ಯಾವನು ತಿಳಿಯುವನೋ, ಅವನೇ ಮುಕ್ತನಾಗುವನು ಇನ್ನುಳಿದ ವರು ಇದರ ಮರ್ಮವನ್ನು ತಿಳಿಯದೆಯೇ ನೀಜಾತ್ಮ ಭ್ರಮೆಯಲ್ಲಿ (ಭ್ರಾಂತಿಯಲ್ಲಿ) ಸಿಲುಕಿದ್ದಾರೆ

## ಪ್ರಕರಣ ೫೨

## ಉಪಸಂಹಾರ

ಲೇಖಣಿಯಲ್ಲಿಯ ಮಸಿಯೂ ತೀರಿತು ಮತ್ತು ಶ್ರೀ ಏಕನಾಥ ಭಾಗವತ ದಲ್ಲಿಯ ಪರಮಪೂಜ್ಯ ಶ್ರೀ ಗುರೂಜಿಯವರು ಹೇಳಿದ (ನಿರೂಪಿಸಿದ) ಮುಖ್ಯಾಂಶ ಗಳ ಪರಿಚ್ಛೇದಗಳೂ, ಶ್ರೀ ಸದ್ಗುರುವಿನ ಕೃಪೆಯಿಂದ ಪೂರ್ಣವಾದವು ಮರಾಠಿ ಭಾಷೆಯನ್ನು ಕಲಿಯದ ಹಾಗೂ ೪೦ ವರ್ಷಗಳಿಂದ ಕನ್ನಡ ಸಾಹಿತ್ಯದ ಸಂಪರ್ಕ ವಿಲ್ಲದ ಮೂರ್ಖಳಾದ ನನ್ನಿಂದ ಈ ಭಾಷಾಂತರಿಸುವ ಕಾರ್ಯವು ನೆರವೇರಿಸಿದರು ಹೀಗೆ ನುಡಿಯುವದು ಕೂಡ ಯೋಗ್ಯವಲ್ಲ ಏಕೆಂದರೆ ಈ ಕಾರ್ಯವನ್ನು ಅವರೇ ನನ್ನಲ್ಲಿ ಕುಳಿತು ಸಂಪೂರ್ಣಗೊಳಿಸಿದ್ದಾರೆ ಇನ್ನು ಈ ಕಾರ್ಯವು ಹೇಗಾಯಿ ತೆಂದರೆ ದಿನನಿತ್ಯದಂತೆ ನಾವಿಬ್ಬರೂ ನಸುಕಿನಲ್ಲಿ ನಮ್ಮ ಪರಮಪೂಜ್ಯ ಶ್ರೀಗುರು ಗಳಾದ ದಿಗಂಬರ ರಾಮಚಂದ್ರ ಅಂತೂರಕರ ಇವರ ಅಡಿಗಳಲ್ಲಿ ಪ್ರಾರ್ಥನೆಗಾಗಿ ಕುಳಿತ ಸಮಯದಲ್ಲಿ ಶ್ರೀ ಅನಂತನಿಗೆ, ನನ್ನಿಂದ ಏಕನಾಥಿ ಭಾಗವತದ ಮುಖ್ಯಾಂಶ ಗಳ ಪರಿಚ್ಛೇದಗಳ ಭಾಷಾಂತರವನ್ನು ಮಾಡಿಸಬೇಕೆಂದು ಪ್ರೇರಣೆಯಾಯಿತು ಆ ಸುದಿನವೆಂದರೆ ಇದೇ ಶಾಲಿವಾಹನ ಶಕೆ ೧೯೧೫ ಶ್ರೀಮುಖನಾಮ ಸಂವತ್ಸರ ದಲ್ಲಿಯ ಸಾತಾರಾ ಜಿಲ್ಹೆಯಲ್ಲಿ ಕೋರೆಗಾಂವ ತಾಲೂಕಿನಲ್ಲಿರುವ ವಾಠಾರ ಸ್ಟೇಶನ ಮುಕ್ಕಾಮಿನಲ್ಲಿರುವ ಪರಮಪೂಜ್ಯ ಶ್ರೀ ಸದ್ಗುರು ದಿಗಂಬರ ರಾಮಚಂದ್ರ ಅಂತೂರಕರ ಇವರ ಚರಣ ಸನ್ನಿಧಿಯಲ್ಲಿ ಪ್ರಾರ್ಥನೆಗಾಗಿ ಕುಳಿತ, ಸೋಮವಾರ ನಸುಕಿನ ೫ ಗಂಟೆ ಹಾಗೂ ಮಂಗಳವಾರ ತ್ರಯೋದಶೀ ನಿಜಭಾದ್ರಪದ ಶುಕ್ಲ ಪಕ್ಷ ಇಂಗ್ರೇಜೀ ತಾರೀಖಿನ ಪ್ರಕಾರ ೨೮ ಸಪ್ಟೆಂಬರ ೧೯೯೩ ಆಗಿತ್ತು

ಮೂರನೇ ದಿನ ಬುಧವಾರ ಅನಂತ ಚತುರ್ದಶೀ ಆ ಇಂಗ್ರೇಜಿ ತಾರೀಖಿನ ಪ್ರಕಾರ ೨೯ ಸಪ್ಟಂಬರ ೧೯೯೩ ರಂದು ಭಾಷಾಂತರಿಸುವ ಕೆಲಸವು ಪ್ರಾರಂಭ ವಾಯಿತು ಶ್ರೀ ಗುರುಗಳ ಕೃಪೆಯಿಂದ ಅನುವಾದಿಸುವ ಕಾರ್ಯವು ನಿರ್ವಿಘ್ನ ವಾಗಿ ನಡೆದು, ಇದೇ ಶಾಲಿವಾಹನ ಶಕೆ ೧೯೧೫, ಶ್ರೀಮುಖನಾಮ ಸಂವತ್ಸರ ದಲ್ಲಿ ಫಾಲ್ಗುನ ವದ್ಯ (ಏಕನಾಥ ಷಷ್ಠಿ) ಷಷ್ಠಿ ಶುಕ್ರವಾರ ಇಂಗ್ರೇಜೀ ತಾರೀಖಿನ ಪ್ರಕಾರ ೧ ಎಪ್ರೀಲ ೧೯೯೪ ರಂದು ಮುಕ್ತಾಯವಾಯಿತು ನಾಥರು ಕೂಡ ತಮ್ಮ ಗ್ರಂಥವನ್ನು ಇದೇ ಶ್ರೀಮುಖ ನಾಮ ಸಂವತ್ಸರದಲ್ಲಿಯೇ ಸಂಪೂರ್ಣ ಗೊಳಿಸಿದ್ದರು ಇದೊಂದು ಯೋಗಾಯೋಗದ ಆಶ್ಚರ್ಯವಲ್ಲವೇನು? ಈ ಕಾರ್ಯವನ್ನು ಕೂಡ ಸದ್ಗುರುವಿನಡಿಗಳಲ್ಲಿ ಸಮರ್ಪಿಸುವೆನು ಇಲ್ಲಿ ನಾನು

ಸಮರ್ಪಿಸುವೆನೆಂಬ ನುಡಿಯ ಅವಶ್ಯಕತೆಯೇ ಉಳಿಯುವದಿಲ್ಲ ಏಕೆಂದರೆ ಕರ್ತಾ ಕ್ರಿಯಾ ಹಾಗೂ ಕರ್ಮ ಇವೆಲ್ಲವೂ ಅವನೇ ಆಗಿರುವನು ಬರೆಯುವವನು ಬರಹ ಹಾಗೂ ಬರವಣಿಗೆಯೆಲ್ಲವೂ ಅವನದೇ ಇರುವದು ಈ ಏಕನಾಥೀ ಭಾಗವತದ ಮುಖ್ಯಾಂಶಗಳ ಪರಿಚ್ಛೇದಗಳನ್ನು ಯಾರು ನಿಂದಿಸುವರೋ, ಇಲ್ಲವೇ ವಂದಿಸುವರೋ ಅವರೆಲ್ಲರೂ ನಮಗೆ ಸದ್ಗುರು ಮೂರ್ತಿಗಳೇ ಆಗಿದ್ದಾರೆ ಈ ಶಿಕ್ಷಣವನ್ನೇ ನಮಗೆ ನಮ್ಮ ಗುರುಗಳು ಕೊಟ್ಟಿದ್ದಾರೆ ಏಕನಾಥ ಮಹಾರಾಜರಿಗೆ ಜಯವಾಗಲಿ



# ಸ್ಫೂರ್ತಿ ವಾಙ್ಮಯ

೧

ಭಾಗವತ ಧರ್ಮವೇ ಮಾನವನ 'ಅತ್ಯಂತಿಕ ಕ್ಷೇಮ'ವೆಂದರೆ ಶಾಶ್ವತ ಕಲ್ಯಾಣವಾಗಿರುವದೆಂದು ಅನ್ನುವಿರಾದರೆ, ಮಹಾರಾಜ! ಆ ಧರ್ಮದ ಪ್ರಕಾರವನ್ನು ಸುಲಭ ರೀತಿಯಿಂದ ನನಗೆ ಹೇಳಬೇಕು. ನನಗೆ ಆ ಭಾಗವತ ಧರ್ಮವನ್ನು ಶ್ರವಣ ಮಾಡುವ ಯೋಗ್ಯತೆ ಇದ್ದರೇನೇ ಮಹಾರಾಜ! ಅದನ್ನು ನನಗೆ ಹೇಳಬೇಕು. ಈ ಭಾಗವತ ಧರ್ಮದ ಪ್ರಭಾವವು ಬಹಳ ವಿಲಕ್ಷಣವಾಗಿದೆ. ಇದನ್ನು ಪ್ರೀತಿಯಿಂದ ಸ್ವೀಕರಿಸಿದಲ್ಲಿ, ಶ್ರೀಪತಿಯು ಸಂತುಷ್ಟನಾಗಿ ಸೇವಕನ ಅಂಕಿತನಾಗುತ್ತಾನೆ. 'ಅಜನ್ಮಾ' ಎಂಬುವ ಭಗವಂತನ ಬಿರುದನ್ನು ವೇದಶಾಸ್ತ್ರಗಳು ಹೊಗಳುತ್ತಿವೆ, ಆದರೆ ಆ ಭಗವಂತನೇ ಭಾಗವತ ಧರ್ಮದ ಪ್ರೀತಿಗಾಗಿ ಭಕ್ತರ ಅನೇಕ ಜನ್ಮಗಳನ್ನು ಸಹಿಸುವನು. ಇಂತಹ ಈ ಭಾಗವತ ಧರ್ಮಕ್ಕೆ ಯಾರು ಅನನ್ಯತೆಯಿಂದ ಶರಣು ಹೋಗುವರೋ, ಅವನಿಗೆ ಶ್ರೀನಾರಾಯಣನು ಪ್ರಸನ್ನನಾಗಿ ತನ್ನ ಸರ್ವಸ್ವವನ್ನೂ ಅರ್ಪಿಸುತ್ತಾನೆ.

೨

ಉದ್ದೇಶ ಪೂರ್ವಕವಾಗಿರಲಿ ಅಥವಾ ಅಹೇತುಕವಾಗಿರಲಿ, ವೈದಿಕವಾಗಿರಲಿ, ಲೌಕಿಕವಾಗಿರಲಿ ಇಲ್ಲವೇ ಸ್ವಾಭಾವಿಕ ಕರ್ಮವಾಗಿರಲಿ, ಅವೆಲ್ಲವುಗಳನ್ನು ಭಗವಂತನಿಗೆ ಅರ್ಪಿಸುವದಕ್ಕೇನೇ 'ಭಾಗವತ ಧರ್ಮ'ವೆಂದು ಅನ್ನುತ್ತಾರೆ. ನೀರಿನಲ್ಲಿಯ ತರಂಗವು ಬಹಳ ಚಪಲವಾಗಿರುತ್ತದೆ. ಆದರೆ ಅದು ಎಲ್ಲೆಲ್ಲಿ ಹರಿಯುವದೋ ಅಲ್ಲಲ್ಲಿ ನೀರೇ ಇರುತ್ತದೆ ಹಾಗೂ ಅದು ಅದರಲ್ಲಿಯೇ ಒಂದಾಗುತ್ತದೆ. ಅದರಂತೆಯೇ ಭಕ್ತನ ಎಲ್ಲ ಕರ್ಮಗಳು ಭಗವಂತನಿಗೆ ಅರ್ಪಣವಾಗುತ್ತವೆ. ಅರ್ಥಾತ್ ಭಗವದ್ರೂಪವಾಗುತ್ತವೆ. ಭಾಗವತಧರ್ಮದ ಪ್ರಾಮುಖ್ಯವಾದ ಸ್ಥಿತಿ ಏನೆಂದರೆ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಮುಂತಾದ ಇಂದ್ರಿಯ ವೃತ್ತಿಗಳಿರುವವೋ, ಅವೆಲ್ಲವುಗಳನ್ನೂ ಭಗವಂತನಿಗೆ ಅರ್ಪಿಸುವದಾಗಿರುತ್ತದೆ. ಇದರಿಂದ ಭಕ್ತನಿಗೆ ಸ್ವಧರ್ಮಕರ್ಮದ ಬಾಧೆಯಾಗುವದಿಲ್ಲ.

೩

ನಮ್ಮ ಮನಸ್ಸಿನ ಕಲ್ಪನೆಯೇ ಭವ ಬಂಧದ ಮುಖ್ಯಕಾರಣವಾಗಿದೆ. ಅದನ್ನು ನಿಲ್ಲಿಸುವದಕ್ಕಾಗಿ(ತಡೆ ಹಿಡಿಯುವದಕ್ಕಾಗಿ)ಸದ್ಗುರುವಿನಲ್ಲಿ ಹಾಗೂ ಅವರ ವಚನಗಳಲ್ಲಿ ದೃಢತರವಾದ ನಿಷ್ಠೆಯನ್ನಿಡಬೇಕಾಗುತ್ತದೆ. ಇದನ್ನು ಜ್ಞಾಪಿಸಿಕೊಂಡು ಸತ್-ಶಿಷ್ಯನು

ಗುರುವಾಕ್ಯದಲ್ಲಿ ವಿಶ್ವಾಸವನ್ನಿಟ್ಟು, ವಿವೇಕ ಮತ್ತು ವೈರಾಗ್ಯದಿಂದ ತನ್ನ ಮನಸ್ಸನ್ನು ಆಧೀನದಲ್ಲಿಡಲು ಪ್ರಯತ್ನಿಸುತ್ತಾನೆ ಸದ್ಗುರುವಿನ ವಚನವು, ಆತ್ಮಬೋಧದಿಂದ ಮನಸ್ಸನ್ನು ಎಚ್ಚರಗೊಳಿಸುತ್ತಿರುತ್ತದೆ ಸದ್ಗುರುವಿನಲ್ಲಿ ಹಾಗೂ ಗುರುವಚನದಲ್ಲಿ ದೃಢತರವಾದ ನಿಷ್ಠೆಯನ್ನಿಟ್ಟಿರುವದರಿಂದ, ಹರಿದಾಡುವಂತಹ ಮನಸ್ಸು ವಿಷಯೇಚ್ಛೆಯಿಂದ ಏನೇನನ್ನು ಕಾಣುವದೋ, ಅದೆಲ್ಲವೂ ಬ್ರಹ್ಮಾರ್ಪಣವಾಗುತ್ತಲೇ ಹೋಗುತ್ತದೆ ವಿಷಯೇಚ್ಛೆಯಿಂದ ಮನಸ್ಸು ಯಾವ ಯಾವ ಪದಾರ್ಥಗಳನ್ನು ಧರಿಸುವದೋ, ಅದೆಲ್ಲವೂ ಪರಮಾರ್ಥ ರೂಪವೇ ಆಗುತ್ತದ ಹೀಗೆ ಗುರುಕೃಪೆಯ ಅನುಗ್ರಹದ ಸಾಮರ್ಥ್ಯವಿರುತ್ತದೆ

೪

ಅಸಾಮಾನ್ಯವಾದ ಮಿತ್ರತ್ವದ ಲಕ್ಷಣವನ್ನು ಕೇಳು ಎಲ್ಲ ಪ್ರಾಣಿಮಾತ್ರಗಳಲ್ಲಿ (ಸುಹೃದ) ಆತ್ಮಾರಾಮನ ಹೊರತಾಗಿ ಬೇರೆ ಯಾರೂ ಇರುವದಿಲ್ಲವೆಂದು, ಮಿತ್ರತ್ವವನ್ನು ಮಾಡದೆಯೇ, ತನ್ನಷ್ಟಕ್ಕೆ ತಾನೇ ಕುಳಿತಲ್ಲಿಯೇ ಆಶ್ಚರ್ಯಕಾರಕವಾದ ಮಿತ್ರತ್ವವುಂಟಾಗುತ್ತಿರುತ್ತದೆ ವಿಷಯಗಳ ವಿಯೋಗದಿಂದ ಮಿತ್ರತ್ವವು ನಾಶ ಹೊಂದುವದಿಲ್ಲ ನಾನಾ ತರಹದ ಸಂದೇಹದಿಂದ ಅದು ಭಂಗವಾಗುವದಿಲ್ಲ ದುಃಖ ಪ್ರಸಂಗದಲ್ಲಿಯೂ ಕೂಡ ಮಿತ್ರತ್ವವು ಇದ್ದ ಹಾಗೆಯೇ ಇರುತ್ತದೆ ಪ್ರಾಣಾಂತಿಕವಾದರೂ ಅದರ ಸಂಬಂಧವು ಹರಿಯುವದಿಲ್ಲ ಇದಕ್ಕೇನೇ ನಿಜವಾದ ಮಿತ್ರತ್ವವೆನ್ನುತ್ತಾರೆ

೫

ಶಿಷ್ಯನಿಗೆ ಉಪದೇಶಿಸುವುದರಲ್ಲಿ ಸದ್ಗುರುವು ವಿಲಕ್ಷಣ ಉಪದೇಶಕನಿರುತ್ತಾನೆ ಆದ್ದರಿಂದ ಶಿಷ್ಯನ ಸುಖದಿಂದ ಗುರುರಾಜನು ಸ್ವಾನಂದವಂದರೆ ಪರಮಾನಂದದ ಸುಖವನ್ನು ಉಪಭೋಗಿಸುತ್ತಾನೆ ಶಿಷ್ಯನಿಗೆ ಪರಬ್ರಹ್ಮತ್ವವು ಹೇಗೆ ಆಕಲನವಾಗುವದೋ ಹಾಗೂ ಅವನ (ಶಿಷ್ಯನ) ಭ್ರಮೆಯು ಹೇಗ, ಹೇಗೆ ದೂರವಾಗುತ್ತ ಹೋಗುವದೋ, ಹಾಗೆ ಹಾಗೆ ಸದ್ಗುರುವಿನ ಸಂತೋಷವು ದ್ವಿಗುಣಿತವಾಗುತ್ತಲೇ ಇರುತ್ತದೆ ಯುದ್ಧ ಭೂಮಿಯಲ್ಲಿ ಶತ್ರುಗಳನ್ನು ಸೇನಾಪತಿಯು ಗೆಲ್ಲುತ್ತಾನೆ ಆದರೆ ಇತ್ತಕಡೆಗೆ ಅರಸನು ವಿಜಯದ ನಿಶಾನೆಯನ್ನು ಏರಿಸುತ್ತಾನೆ. ಅದರಂತೆಯೇ ಶಿಷ್ಯನು ಪರಮಾನಂದದಲ್ಲಿ ಮುಳುಗಿದನೆಂದರೆ, ಸದ್ಗುರುವು ಸಂತೋಷ ಸಾಗರದಲ್ಲ ಈಸುತ್ತಾನೆ ಹೀಗೆ ಶಿಷ್ಯನ ಬಗ್ಗೆ ಯಾವ ಸದ್ಗುರುವಿಗೆ ನಿಃಸ್ಸೀಮ ತಳಮಳವಿರುವದೋ, ಆ ಸದ್ಗುರುವಿನ ಹತ್ತಿರ (ಬಳಿ) ಅನನ್ಯ ಶ್ರದ್ಧೆಯಿಂದ ಭಾಗವತ ಧರ್ಮವನ್ನು ಅರಿತುಕೊಳ್ಳಬೇಕು.

೬

(ಯಾರು ಭಕ್ತಿಮಾರ್ಗವನ್ನು ಅವಲಂಬಿಸುವರೋ, ಅವರಿಗೇನೇ ಈ ಭಾಗವತವು ತಿಳಿಯುತ್ತದೆ )

ಭಗವಂತನು ಭಕ್ತನ ವಚನವನ್ನು ಎಂದಿಗೂ ಮೀರುವದಿಲ್ಲ ಅದಕ್ಕಾಗಿ ಅವನು ತನ್ನ ಗುಪ್ತವಾದ ಜ್ಞಾನದ ಭಾಂಡಾರವನ್ನು ತೆರೆದನು ನಿಜವಾಗಲೂ ಪರಮೇಶ್ವರನು ಭಕ್ತನಿಗೆ ಪ್ರಸನ್ನನಾದನೆಂದರೆ, ಅವನು ಭಕ್ತನ ಮೇಲೆ ಕೃಪಾದೃಷ್ಟಿಯ ವೃಷ್ಟಿಯನ್ನೇ ಮಾಡುವನು ಉದ್ಧವನ ಗೂಢವಾದ ಪ್ರಶ್ನೆಯನ್ನು ಕೇಳಿ, ಜಗಜ್ಜೀವನನಾದ ಶ್ರೀಕೃಷ್ಣನು ಕೃಪೆಯಿಂದ ಕರಗಿ ನೀರಾಗಿ ಆನಂದದ ಮಳೆಗರೆದನೆಂದು, ಏಕಾಜನಾರ್ಧನನು ವಿನಮ್ರತೆಯಿಂದ ತಿಳಿಸುತ್ತಾನೆ ಅದರಿಂದ ಶಿಷ್ಯರೂಪ ನದಿಗೆ ಆನಂದದ ಪೂರು ಬಂದು, ಅವನು ಜ್ಞಾನಗಂಗೆಯ ಸಮುದ್ರಕ್ಕೆ ಕೂಡುವನು. ಸಂಸಾರದ ಆಸಕ್ತಿಯನ್ನು ತೊರೆದು ಯಾವನು ಭಕ್ತಿಮಾರ್ಗವನ್ನು ಅವಲಂಬಿಸುವನೋ, ಅವನೇ ಭಾಗವತದ ಅಧಿಕಾರಿಯಾಗಿರುತ್ತಾನೆ ಮತ್ತು ಅವನೇ ಪರಮಾರ್ಥದ ನಿಜವಾದ ಸಾಧಕನಾಗಿರುತ್ತಾನೆ ಯಾವನು ಮನದಲ್ಲಿ ಸದೈವ ಸಂಸಾರವನ್ನೇ ಚಿಂತಿಸುವನೋ, ಅವನ ಈ ಕಥೆಯನ್ನು ಕೇಳಿ ದುಃಖಿತನಾಗಬಹುದು, ಏಕೆಂದರೆ ಚಿತ್ತವು ಯಾವುದರ ಚಿಂತೆಯನ್ನು ಮಾಡುವದೋ ಅದು ಅದರಂತೆಯೇ (ತದ್ರೂಪ) ಆಗುವದು ಚಿತ್ತವು ಎಲ್ಲಿಯ ವರೆಗೆ ಜಾಗ್ರತ ಮತ್ತು ಸ್ಥಿರವಾಗುವದಿಲ್ಲವೋ, ಅಲ್ಲಿಯವರೆಗೆ ಭಾಗವತವು ತಿಳಿಯಲಾರದು ಹಾಗೂ ಶ್ರೀಗುರುವಿನಃ ಭಾಗವತದ ಅರ್ಥವು ಮಾನವನಿಗ ತಿಳಿಯಲು ಸಾಧ್ಯವೇ ಇಲ್ಲ ಯಾವನು ಸಂಸಾರದಿಂದ ವಿರಕ್ತನಾಗಿ ಗುರುಚರಣಗಳಲ್ಲಿ ಅನುರಕ್ತ (ಪ್ರೀತಿಯುಳ್ಳವನು)ನಾಗುವನೋ ಅವನಿಗೇನೇ ಪರಮಾರ್ಥವು ಪ್ರಾಪ್ತವಾಗುವದು ಹಾಗೂ ಭಾಗವತವೂ ಫಲಿಸುವದು

೭

ಧ್ಯಾನಾವಸ್ಥೆಯಲ್ಲಿ ಧ್ಯಾನವನ್ನು ಮಾಡುವದು, ಅದಲ್ಲದೆ ಕಥೆಯನ್ನು ಹೇಳುವದು ಹಾಗೂ ಶ್ರೀಕೃಷ್ಣನ ಅನುಸಂಧಾನ ಮಾಡುವದರಲ್ಲಿ ಯಾವಾಗಲೂ ಜಾಗೃತನಾಗಿರುವದು ಮತ್ತು ಮನಸ್ಸನ್ನು ಒಂದು ನಿಮಿಷ ಕೂಡ ಸುಮ್ಮನೆ ಕೂಡ್ರಲು ಕೊಡದಿರುವದೇ ಭಕ್ತನ ಕಾರ್ಯವಾಗಿರುತ್ತದೆ ಕೃಷ್ಣನ ಜನ್ಮವನ್ನು ಹಾಗೂ ಶ್ರೀಕೃಷ್ಣನ ಲೀಲೆಯನ್ನು ನಿರೂಪಿಸುವಾಗ ಅವನ ಚಿತ್ತಕ್ಕೆ ಬಹಳ ಸಂತೋಷವಾಗುತ್ತದೆ ಮತ್ತು ಅದರಿಂದ ಅವನ ಮೈಗೆ ಬೆವರೊಡೆದು, ಅವನು ರೋಮಾಂಚಿತನಾಗುತ್ತಾನೆ ಆ ಪ್ರೀತಿಯು ಯೋಗದಿಂದ ಕಥೆಯೂ ರಸಭರಿತವಾಗುತ್ತದೆ ಇಂತಹ ಹರಿಕಥೆಯನ್ನು ಕೇಳಿಯೂ ಯಾವನ ಚಿತ್ತವು ಕರಗುವದಿಲ್ಲವೋ, ಅವನು ನಿಜವಾಗಲೂ ನೀರಿನಲ್ಲಿದ್ದ ಬಂಡೆಗಲ್ಲೆಂದು ತಿಳಿಯಬೇಕು

೮

ನನ್ನಲ್ಲಿಯೇ (ಶ್ರೀಕೃಷ್ಣ)ಯಾವ ಭಕ್ತನು ತನ್ನ ಚಿತ್ತವನ್ನು ಅರ್ಪಿಸಿರುವನೋ, ಅವನು (ಭಕ್ತನು) ನನ್ನ ಸುಖದಿಂದಲೇ ಯಾವಾಗಲೂ ಸುಖಿಯಾಗಿರುತ್ತಾನೆ ಅವನು ಎಲ್ಲ ವಿಷಯಗಳಲ್ಲಿಯೂ ಆಸಕ್ತಿ ವಿರಹಿತನಾಗಿರುತ್ತಾನೆ ನಿತ್ಯವೂ ನನ್ನ ಭಕ್ತಿಯನ್ನು ಮಾಡುವದು ಹಾಗೂ ಇಹಲೋಕ ಮತ್ತು ಪರಲೋಕದ ಅಭಿಲಾಷೆಯನ್ನು ಮಾಡುವದು, ಉದ್ಧವಾ! ಹೀಗಿದ್ದರೆ ಅದು ನನ್ನ ಭಕ್ತಿಯಲ್ಲದೇ ಕೇವಲ ಕಾಮಾಸಕ್ತಿಯಾಗಿರುವದೆಂದು ನೀನು ನಿಶ್ಚಿತವಾಗಿ ತಿಳಿ

೯

ಓಂಕಾರದ ದೀರ್ಘ ಉಚ್ಚಾರವನ್ನು ವಾಣಿಯಿಂದ ಉಚ್ಚರಿಸಲಾಗದಿದ್ದರೂ, ಹೃದಯದಲ್ಲಿ ಅದೇ ಓಂಕಾರದ ಉಚ್ಚಾರವು ಒಂದೇ ಸಮನಾಗಿ ಆಗುತ್ತಲೇ ಇರುತ್ತದೆ ಅದರ ಶಬ್ದವು ಘಂಟೆಯ ಧ್ವನಿಯಂತೆ ಆಗುತ್ತಲೇ ಇರುತ್ತದೆ ಯಾವ ಪ್ರಕಾರವಾಗಿ ಕಮಲದ ದೇಟಿನಲ್ಲಿಯ ಸೂಕ್ಷ್ಮ ಎಳೆಗಳು ಇರುತ್ತವಯೋ, ಆ ಪ್ರಕಾರವಾಗಿ ಓಂಕಾರದ ಝಣತ್ಕಾರವು ನಾಭಿಯಿಂದ ಬ್ರಹ್ಮರಂಧ್ರದ ವರೆಗೂ ಪ್ರಾಣಾಯಾಮದಿಂದ ಭಾಸಮಾನವಾಗುತ್ತದೆ ಅಲ್ಲಿ ದೀರ್ಘ ಸ್ವರದಿಂದ ಉಚ್ಚಾರವಾಗುತ್ತಿರುತ್ತದೆ ಅದರಿಂದ ಅತಿಶಯ ಸೂಕ್ಷ್ಮರೀತಿಯಿಂದ ಪ್ರಣವದ ಭಾಸವಾಗುತ್ತದೆ ಅದನ್ನೇ ಪ್ರಾಣಾಯಾಮದಿಂದ ಸ್ಥಿರಗೊಳಿಸಿ, ಅಖಂಡವಾಗಿ ನಾದವಾಗುವಂತೆ ಮಾಡಬೇಕು

೧೦

ಜ್ಞಾನ ಹಾಗೂ ವಿಜ್ಞಾನದ ಐಶ್ವರ್ಯವು ಹಸ್ತಗತವಾಗದ ಹೊರತು, ನನ್ನ (ಶ್ರೀಕೃಷ್ಣ) ಪ್ರಾಪ್ತಿ ಅಂದರೆ ಸ್ವರೂಪ ಸ್ಥಿತಿಯು ಎಂದಿಗೂ ಯಾರಿಗೂ ಪ್ರಾಪ್ತವಾಗಲಾರದು ಜ್ಞಾನ ವಿಜ್ಞಾನದಿಂದಲೆ ಶ್ರೀಕೃಷ್ಣಪದವು (ಸ್ವರೂಪ ಸ್ಥಿತಿಯು) ಪ್ರಾಪ್ತವಾಗುತ್ತದೆ ಗುರು ಮುಖದಿಂದ ಶಾಸ್ತ್ರಶುದ್ಧ ಶ್ರವಣವಾದ ನಂತರ ಏನು ಪ್ರಾಪ್ತವಾಗುವದೋ ಅದಕ್ಕೆ 'ಜ್ಞಾನ' ವೆಂದು ಅನ್ನುತ್ತಾರ ಹಾಗೂ ಅದರ ಪ್ರತ್ಯಕ್ಷ ಅನುಭವವಾಗುವದಕ್ಕೆ 'ವಿಜ್ಞಾನ'ವೆಂದು ಅನ್ನುತ್ತಾರ

೧೧

ತಪಶ್ಚರ್ಯೆ ಮುಂತಾದ ಸಾಧನೆಗಳಿಂದಾಗುವ ಶುದ್ಧಿಯು ಬಹಳ ದೊಡ್ಡದಾಗಿರುವದು ನಿಜ, ಆದರೆ ಅದರ ಪವಿತ್ರತೆಯನ್ನು ಜ್ಞಾನದ ಒಂದು ಕಡ್ಡಿ ತೂಕದಷ್ಟು ತೂಕವಾಗಲಾರದು ಅರ್ಧಕ್ಷಣದ ಜ್ಞಾನನಿಷ್ಠೆಯಿಂದ ಎಷ್ಟು ಪಾವಿತ್ರ್ಯತೆಯು ಪ್ರಾಪ್ತವಾಗುತ್ತದೆಯೋ, ಅಷ್ಟೊಂದು ಪಾವಿತ್ರ್ಯತೆಯು ತಪಶ್ಚರ್ಯೆ ಮುಂತಾದ ಸಾಧನಗಳಿಂದ ಕಲ್ಪಾಂತದಲ್ಲಿಯೂ ಕೂಡ ಪ್ರಾಪ್ತವಾಗಲಾರದು ಇಂತಹ

ಜ್ಞಾನವನ್ನೇ ಪ್ರಾಮುಖ್ಯವಾಗಿ ಸಂಪಾದಿಸಿ ನನ್ನ (ಶ್ರೀಕೃಷ್ಣನ) ಭಜನೆಯನ್ನು ಮಾಡಬೇಕು ಹೀಗೆ ಜ್ಞಾನವಿಜ್ಞಾನ ಸಂಪನ್ನರಾದ ಜನರಿಗೆ ನನ್ನ ಹೊರತು ಮತ್ತೆ ಬೇರೇನೂ ಕಾಣುವದೇ ಇಲ್ಲ

೧೨

ಉದ್ಧವನ ಭಾಗ್ಯವೇ ಬಹಳ ದೊಡ್ಡದಾಗಿದೆ! ಏಕೆಂದರೆ ಸಗುಣ ಹಾಗೂ ನಿರ್ಗುಣ ಸ್ವರೂಪದಿಂದ ಪರಿಪೂರ್ಣವಾದ ಶ್ರೀಕೃಷ್ಣಮೂರ್ತಿಯ ಸುಖವನ್ನು ಅವನೊಬ್ಬನೇ ಅನುಭವಿಸುತ್ತಿದ್ದನು ಇದು ಕೇವಲ ಶ್ರೀಕೃಷ್ಣನ ಕೃಪೆಯ ಮಹತ್ವವಾಗಿರುತ್ತದೆ ಎಲ್ಲಿ ಸದ್ಗುರುವಿನ ಕೃಪೆಯು ಪೂರ್ಣವಾಗಿ ಆಗುವದೋ, ಅಲ್ಲಿ ಶಿಷ್ಯನ ಅಭಿರುಚಿಯೇ ಕಾರಣವಾಗಿರುತ್ತದೆ ಅವನು ಸಗುಣ ಮೂರ್ತಿಯನ್ನು ಅಪೇಕ್ಷಿಸಿದರೆ, ಗುರುವು ಅವನಿಗೆ ಅದನ್ನೇ ಕೊಡುತ್ತಾನೆ ಅವನು ನಿರ್ಗುಣ ಸ್ವರೂಪ ಪ್ರಾಪ್ತಿಯನ್ನು ಇಚ್ಛಿಸಿದಲ್ಲಿ, ಗುರುವು ಅವನಿಗೆ ನಿರ್ಗುಣ ಸ್ವರೂಪದ ಸ್ಥಿತಿಯನ್ನೇ ಕೃಪಾದೃಷ್ಟಿಯಿಂದ ಕೊಡುತ್ತಾನ ಇಲ್ಲವೆ ಅವನು ಸಗುಣ ಹಾಗೂ ನಿರ್ಗುಣದ ಅನುಭವವನ್ನು ಅಪೇಕ್ಷಿಸಿದಲ್ಲಿ, ಅವನ ಆ ಎರಡೂ ಆಸೆಗಳನ್ನು ಪೂರೈಸಲು ಶ್ರೀಗುರುವು ಕೃಪಾಳುತ್ವದಿಂದ ಸಮರ್ಥನಿರುತ್ತಾನ ಸದ್ಗುರುವಿನ ಮಹತ್ವವು ಅಗಾಧವಾಗಿರುವದು ಅದು ವೇದಗಳಿಗೂ ಕೂಡ ತಿಳಿಯದು ಸದ್ಗುರುವಿನ ಪರಿಪೂರ್ಣ ಕೃಪೆಯಾದ ನಂತರ ಜಗತ್ತಿನಲ್ಲಿ ಪ್ರಾಪ್ತವಾಗದಂತಹ ವಸ್ತುವು ಯಾವದಿರುವದು? ಶ್ರೀಕೃಷ್ಣನ ಕೃಪೆಯಿಂದಲೇ ಉದ್ಧವನಿಗೆ ಎಲ್ಲ ಭಾಗ್ಯವೂ ಪ್ರಾಪ್ತವಾಯಿತು

೧೩

ಉದ್ಧವಾ! ಕೋಟಿಗಟ್ಟಲೆ ಸಾಧನಗಳನ್ನು ಮಾಡಿದರೂ ಕೂಡ, ಗುರುಕೃಪೆ ಇಲ್ಲದೆಯೇ ಈ ಜ್ಞಾನ ಹಾಗೂ ಭಕ್ತಿಯು ನಿಜವಾಗಿಯೂ ಯಾರಿಗೂ ಎಂದಿಗೂ ಪ್ರಾಪ್ತವಾಗಲಾರದೆಂಬುದು ನಿನ್ನ ಜ್ಞಾನಕದಲ್ಲಿರಲಿ ಆ ಗುರುಕೃಪೆಯನ್ನು ಸಾಧ್ಯ ಮಾಡುವದಕ್ಕಾಗಿ ಸ್ವಧರ್ಮದ ಪಾಲನೆಯನ್ನು ಮಾಡಬೇಕು ಅದಕ್ಕಾಗಿಯೇ ಶಾಸ್ತ್ರ ಶ್ರವಣವನ್ನು ಹಾಗೂ ವೇದಪಠಣವನ್ನೂ ಮಾಡಬೇಕು ಆ ಗುರುಕೃಪೆಗಾಗಿ ತಾವು ದೀನ, ಹೀನರಾಗಬೇಕು ಹಾಗೂ ಸದ್ಗುರುವಿನ ಚರಣಗಳನ್ನು ಸೇವಿಸಬೇಕು ಅಂದರ ಸ್ವಾಮಿ ಜನಾರ್ಧನನು ಪ್ರಸನ್ನನಾಗುತ್ತಾನೆ

೧೪

ಮೂರ್ಖನ ಇರಲಿ ಇಲ್ಲವೇ ಪಂಡಿತನೇ ಇರಲಿ, ಯಾರು ಹಣದ ಸಂಗ್ರಹವನ್ನು ಮಾಡುವರೋ, ಅವರಿಗೆ ಅನರ್ಥವು ಕಟ್ಟಿಟ್ಟಂತೆಯೇ ಆಗಿರುತ್ತದೆ ಹಣ ಇಲ್ಲವೆ ದ್ರವ್ಯ ಇದರ ಹೆಸರು ಮಾತ್ರ 'ಅರ್ಥ'ವಾಗಿದೆ ಆದರ ಇದು ಮೂರ್ತಿಮಂತ 'ಅನರ್ಥ'ವಾಗಿದ ಆದ್ದರಿಂದ ಯಾರು ತಮ್ಮ ಕಲ್ಯಾಣವನ್ನು ಬಯಸುವ

ಹರಿಭಕ್ತರಿರುವರೋ, ಅವರು ನಿಶ್ಚಯದಿಂದ ಹಣವ (ಅರ್ಥ) ನ್ನು ತ್ಯಜಿಸಬೇಕು ಯಾವ ಪ್ರಕಾರವಾಗಿ ನೊಣವು ತೋಯಿಸಿದ ಬತ್ತಿಯನ್ನು ಮೂಸಿಸುವದಿಲ್ಲವೋ, ಇಲ್ಲವೆ ತಗಣಿಯು ಹೇಗೆ ಎಣ್ಣೆಯ ಹತ್ತಿರ ಹೋಗುವದಿಲ್ಲವೋ ಅಥವಾ ಗೆದ್ದಲಿಯು ಬೆಂಕಿಗೆ ಹೇಗೆ ಹತ್ತುವದಿಲ್ಲವೋ, ಆ ಪ್ರಕಾರವಾಗಿ ಹರಿಭಕ್ತನು ದ್ರವ್ಯವನ್ನು ಸ್ಪರ್ಶಿಸುವದಿಲ್ಲ ಬೆಂಕಿಯಲ್ಲಿ ಉಪ್ಪು ಬಿದ್ದ ತಕ್ಷಣ ಅದು ಹೇಗೆ ಸಿಡಿದು ಹೊರಗೆ ಬರುತ್ತದೆಯೋ, ಹಾಗೆಯೇ ಮೋಕ್ಷವನ್ನಪೇಕ್ಷಿಸುವ ಹರಿಭಕ್ತನು ತನ್ನ ದ್ರವ್ಯವನ್ನು ಕೂಡಲೇ ತ್ಯಜಿಸುವನು ಅವನೇ ಸ್ವಕಲ್ಯಾಣವನ್ನಿಚ್ಛಿಸುವ ಹರಿಭಕ್ತನಿರುವನು ಬಚನಾಗವನ್ನು ತಿಂದಲ್ಲಿ ಒಂದು ನಿಮಿಷ ಸಿಹಿ ಎನಿಸುತ್ತದೆ ಆದರೆ ಕೊನೆಗೆ ಮೃತ್ಯುವಿಗೆ ಎದುರಿಸಬೇಕಾಗುತ್ತದೆ ಆದ್ದರಿಂದ ಅರ್ಥವು ಸರ್ವತೋಪರಿ ಅನರ್ಥಕ್ಕೆ ಕಾರಣವಾಗಿರುವದು ಆದ್ದರಿಂದ ಯಾರು ಮೋಕ್ಷವನ್ನಿಚ್ಛಿಸುವರೋ ಅವರು ದ್ರವ್ಯ ಸಂಗ್ರಹವನ್ನು ಮಾಡಬಾರದು ದೇಹ, ವಾಣಿ ಹಾಗೂ ಮನಸ್ಸಿನಿಂದ ನಿಜವಾಗಲೂ ದ್ರವ್ಯವನ್ನು ತ್ಯಜಿಸಬೇಕು ಎಲ್ಲ ತರಹದ ಭೇದಗಳು ಅರ್ಥದಿಂದಲೇ ಉದ್ಭವಿಸುತ್ತವೆಯೆಂದು ಶ್ರೀಕೃಷ್ಣನು ಮತ್ತೆ ಮತ್ತೆ ಹೇಳುತ್ತಿದ್ದಾನ

೧೫

ಈ ಮೃತ್ಯುಲೋಕದಲ್ಲಿ, ಉತ್ತಮ ಕುಲದಲ್ಲಿ ಜನ್ಮತಾಳಲು ದೇವದೇವತೆಗಳೂ ಕೂಡ ಉತ್ಸುಕರಾಗಿರುತ್ತಾರೆ ಇಲ್ಲಿ ಭಗವಂತನ ಭಕ್ತಿಯನ್ನು ಮಾಡಿದಲ್ಲಿ ನಾಲ್ಕೂ ಮುಕ್ತಿಗಳು ಕಾಲಿಗೆರಗುತ್ತವೆ ಭಿಕ್ಷು ಅನ್ನುತ್ತಾನ 'ಇಂತಹ ಉತ್ತಮ ಬ್ರಾಹ್ಮಣ ಕುಲದಲ್ಲಿ ಜನಿಸಿ, ನನ್ನ ಶಾಶ್ವತ ಕಲ್ಯಾಣವನ್ನು ಅಲ್ಲಗಳೆದು, ದ್ರವ್ಯ ಲೋಭದಿಂದ ಧನಕ್ಕೆ ಮರುಳಾದೆನು ನನ್ನಂತಹ ದುರ್ಭಾಗ್ಯನು ಈ ಮೂರೂ ಲೋಕದಲ್ಲಿ ಯಾರೂ ಇರುವದಿಲ್ಲ' ಧನದಾಸೆಯ ಭ್ರಮೆಯಿಂದ ಭಗವದ್ಭಕ್ತಿಯನ್ನು ಅಲ್ಲಗಳೆದು, ಯಾವನು ಲೌಕಿಕ ಪ್ರತಿಷ್ಠೆಯನ್ನು ಇಚ್ಛಿಸುವನೋ, ಅವನಿಗೆ ಅಶುಭ ಗತಿ ಪ್ರಾಪ್ತವಾಗುತ್ತದ ಧನಲೋಭಿಗಳಿಗ ನರಕಪ್ರಾಪ್ತಿಯಾಗಿ ಎಂಬತ್ನಾಲ್ಕು ಲಕ್ಷ ಯೋನಿಗಳಲ್ಲಿ ಗರ್ಭವಾಸದ ದುಃಖವನ್ನು ಅನುಭವಿಸಬೇಕಾಗುತ್ತದೆ

೧೬

ಬ್ರಾಹ್ಮಣನು ತನ್ನ ಸ್ವಧರ್ಮವನ್ನಾಚರಿಸಿದಲ್ಲ, ದ್ವಿಜೋತ್ತಮನಿಗೆ, ಇಂದ್ರ ಚಂದ್ರಾದಿಕಗಳ ಲೋಕವೂ ಸುಲಭವಾಗಿ ಪ್ರಾಪ್ತವಾಗುತ್ತದೆ. ಆದರೆ ಆ ಸಮಯದಲ್ಲಿ ಅವನು ಸ್ವರ್ಗವನ್ನು ಬಯಸುತ್ತಾನೆ ಬ್ರಾಹ್ಮಣರ ಯಜ್ಞಕರ್ಮದಿಂದ

ಇತರರಿಗೂ ಸ್ವರ್ಗಪ್ರಾಪ್ತಿಯಾಗುತ್ತದೆ ಈ ರೀತಿಯಾಗಿ ಸ್ವರ್ಗವು ಬ್ರಾಹ್ಮಣರ ಹಸ್ತಗತವಾಗಿರುವದರಿಂದ, ಅವರಿಗೆ ಅದು ಸಹಜವಾಗಿ ಪ್ರಾಪ್ತವಾಗುತ್ತದೆ ಲೋಕೇಷಣ, ಪುತ್ರೇಷಣ ಹಾಗೂ ದಾರೇಷಣ ಈ ಮೂರು ಈಷಣೆಗಳನ್ನು ಬಿಟ್ಟು ಯಾವನು ನಿಷ್ಕಾಮದಿಂದ ಸ್ವಧರ್ಮಾಚರಣೆಯನ್ನು ಮಾಡುವನೋ, ಅವನ ಚರಣಗಳನ್ನು ಮೋಕ್ಷವು ವಂದಿಸುವದು ಹಾಗೂ ನಾನು (ಶ್ರೀಕೃಷ್ಣನು) ಕೂಡ ಹಗಲಿರುಳೂ ಅವನ ಆಜ್ಞಾಧಾರಕನಾಗುವೆನು ಅವನು ಯಾರನ್ನು ಅನುಗ್ರಹಿಸುವನೋ, ಅವರು ನಿಜಮೋಕ್ಷವನ್ನು ಹೊಂದುವರು ಇಷ್ಟೊಂದು ಸಾಮರ್ಥ್ಯವು ಬ್ರಾಹ್ಮಣರ ಬಳಿ ಅನಾಯಾಸವಾಗಿಯೇ ಇರುತ್ತದೆ ಸ್ವರ್ಗವು ಅವರ ಮೆಟ್ಟಲು ಮೋಕ್ಷವು ಅವರ ಆಜ್ಞೆಯನ್ನು ಪಾಲಿಸುವದು ಇಷ್ಟೊಂದು ಬ್ರಾಹ್ಮಣರ ಶ್ರೇಷ್ಠತೆಯಿದ್ದರೂ, ಅವರು ಅದನ್ನು ಧನಲೋಭದಿಂದ ಎಲ್ಲವನ್ನೂ ನಾಶಗೊಳಿಸುತ್ತಾರೆ

## ೧೭

ಉದ್ಧವನಿಗೆ ವಿದುರನ ಭೆಟ್ಟಿಯಾದ ಮೇಲೆ, ಇಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡು ಕುಶಲ ವಾರ್ತೆಗಳನ್ನು ಕೇಳಿದರು ಯಾವಾಗ್ಗೆ ಉದ್ಧವನು ಅವನಿಗೆ ಕೃಷ್ಣ ನಿರ್ಯಾಣದ ಸಂಗತಿಯನ್ನು ಹೇಳುತ್ತಿದ್ದನೋ, ಆವಾಗ್ಗೆ ಉದ್ಧವನ ಮುಖದ ಮೇಲೆ ದುಃಖದ ಛಾಯೆಯು ಸ್ವಲ್ಪ ಕೂಡ ಕಂಡುಬರಲಿಲ್ಲ ಆ ಲಕ್ಷಣದಿಂದ ವಿದುರನು ಉದ್ಧವನಿಗೆ ಬ್ರಹ್ಮಜ್ಞಾನವು ಪ್ರಾಪ್ತವಾಗಿದೆಯೆಂದು, ಕಂಡುಹಿಡಿದನು ಗುರುವಿನ ಮರಣದಿಂದ ಶಿಷ್ಯನ ರುದನವಾದಲ್ಲಿ, ಇಬ್ಬರ ಜ್ಞಾನವೂ ನಿರರ್ಥಕವಾಯಿತೆಂದು ತಿಳಿಯಬೇಕು ಹಾಗೂ ಈ ನುಡಿಯನ್ನು ಯಾವನು ನಿಜವೆಂದು ತಿಳಿಯುವನೋ, ಅವನು ಕೂಡ ಮೋನ ಹೋದನೆಂದು ತಿಳಿಯಬೇಕು ಉದ್ಧವನಿಗ ಕೃಪಾಮೂರ್ತಿ ಶ್ರೀಕೃಷ್ಣನು ಪ್ರಸನ್ನನಾದುದರಿಂದ ಅವನ ಮೋಹ ಮಮತೆಯು ನಷ್ಟವಾಯಿತು ಆದ್ದರಿಂದ ಅವನು ಪರಮಾನಂದದಲ್ಲಿ ತಲ್ಲೀನನಾಗಿ ಆತ್ಮಸ್ವರೂಪದಲ್ಲಿ ತಲೆದೂಗುತ್ತಿದ್ದಾನೆ

## ೧೮

[ನನ್ನ (ಶ್ರೀಕೃಷ್ಣನ)] ನಾಲ್ಕನೆಯ ಭಕ್ತಿಯಲ್ಲಿ ಪೂಜ್ಯನು ಮತ್ತು ಪೂಜೆ ಮಾಡುವವನು ಶ್ರೀಕೃಷ್ಣನೇ ಇರುತ್ತಾನೆ ಆವಾಗ್ಗೆ ಪೂಜಾ, ವಿಧಿ ವಿಧಾನವೆಲ್ಲವೂ ಸ್ವತಃ ಶ್ರೀಕೃಷ್ಣನೇ ಆಗುತ್ತಾನೆ ಗಂಧ ಪುಷ್ಪ, ಧೂಪ, ದೀಪ ಇವೆಲ್ಲವುಗಳೂ ಶ್ರೀಕೃಷ್ಣನೇ ಆಗುತ್ತಾನೆ ತನ್ನ ಭಜನೆಯನ್ನು ತಾನೇ ಮಾಡುವದೇ ನಾಲ್ಕನೆಯ ಭಕ್ತಿಯ ಲಕ್ಷಣವಾಗಿರುತ್ತದೆ ಭೋಗ್ಯ ಭೋಕ್ತಾ ಶ್ರೀಕೃಷ್ಣನೇ ಆಗಿರುವದರಿಂದ, ಭಕ್ತನು ಮತ್ತು ಶ್ರೀಕೃಷ್ಣನೂ ಇಬ್ಬರೂ ಏಕರೂಪವಾಗುತ್ತಾರೆ ಒಂದರ್ಥಕ್ಷಣ

ಕೂಡ ಅವರು ಬೇರೆಯಾಗುವದಿಲ್ಲ ಆವಾಗ್ಗೆ ಭಕ್ತನ ದೇಹ, ಮನ, ಮರ ಎಲ್ಲವೂ ಶ್ರೀಕೃಷ್ಣನೇ ಆಗುತ್ತಾನೆ ಅವನ (ಜಾತಿ) ಕುಲ, ಗೋತ್ರ ಹಾಗೂ ಅವನ ಎಲ್ಲ ಸಂಸಾರವೂ ಶ್ರೀಕೃಷ್ಣನೇ ಆಗುತ್ತಾನೆ ಇಂತಹ ಸಾಲ್ಕನೆಯ ಭಕ್ತಿಯನ್ನು ಪ್ರಾಪ್ತ ಮಾಡಿಕೊಂಡು ಅವರು ಶ್ರೀಕೃಷ್ಣನ ಪರಮಹಂಸಗತಿಯನ್ನು ಹೊಂದುತ್ತಾರೆ ಶ್ರೀಕೃಷ್ಣನ ಗುಣಕೀರ್ತಿಯನ್ನು ಹೊಗಳುವದರಿಂದ ಭಕ್ತನು ಶ್ರೀಕೃಷ್ಣ ಸ್ವರೂಪವೇ ಆಗುತ್ತಾನೆ ಅವಿನಾಶಿಯಾದ ಸ್ವರೂಪವೇ ಶ್ರೀಕೃಷ್ಣ ಸ್ವರೂಪವಾಗಿರುತ್ತದೆ ಭಕ್ತನೂ ಕೂಡ ತದ್ರೂಪ (ಕೃಷ್ಣಸ್ವರೂಪ) ನಾಗುತ್ತಾನ ಕೃಷ್ಣನ ಕೀರ್ತಿಯ ಒಂದೊಂದು ಅಕ್ಷರವೆಂದರೆ, ವೇದದ ಆತ್ಮಲಿಂಗವೇ ಆಗಿರುತ್ತದೆ ಹೇ ಪರೀಕ್ಷಿತಿ! ಕೃಷ್ಣಚರಿತ್ರವು ಎಲ್ಲ ಶಾಸ್ತ್ರದ ಶ್ರೇಷ್ಠ ಸಾರವಾಗಿರುತ್ತದೆ ವೇದಗಳ ಜನ್ಮಸ್ಥಾನ, ಎಲ್ಲ ಶಾಸ್ತ್ರಗಳ ಸಮಾಧಾನ, ಷಡ್ದರ್ಶನಗಳ ಅರಿವು ಅಥವಾ ಸಮನ್ವಯವು, ಶ್ರೀಕೃಷ್ಣನ ಈ ಎಂಟನೆಯ ಪೂರ್ಣಾವತಾರವಾಗಿರುವದು

21

ಶ್ರೀ ಏಕನಾಥ ಭಾಗವತದ ಜೇವಾಳ ಇದು ಪುಟ್ಟ ಗ್ರಂಥವೇ ಆಗಿದ್ದರೂ ಪರಿಶೀಲನ ಮಾಡಿದಷ್ಟು ಇದರಲ್ಲಿ ಮುಖ್ಯ ಅಧ್ಯಾತ್ಮ ಜ್ಞಾನದ ವಿಶ್ವರೂಪ ದರ್ಶನವಾಗುತ್ತದೆ ನಾಥರು ತಮ್ಮ ಭಾಗವತದಲ್ಲಿ ಬ್ರಹ್ಮಪ್ರಾಪ್ತಿಗಾಗಿ, ಇನ್ನಿತರ ಮಾರ್ಗಗಳಿಗಿಂತ 'ಸರ್ವ ಭೂತಾಕೃತಿಗಳಲ್ಲಿ ಭಗವದ್ಭಾವನೆ' ಯನ್ನಿಡುವ ಸುಲಭ ಸಾಧನೆಯನ್ನು ಹೇಳಿದ್ದಾರೆ. ಈ ಭಾವನೆಯು ನಿರ್ಮಾಣವಾಗಬೇಕಾದರೆ, ಸದ್ಗುರುಪ್ರಾಪ್ತಿ, ಅಖಂಡ ಭಜನ, ನಾಮ ಸಂಕೀರ್ತನ, ಸದಾಚರಣೆ, ಸಂತಸಂಗತಿ, ಮನೋಜಯ, ಅಹಂಕಾರನಾಶ ಮತ್ತು ಅನನ್ಯ ಶರಣಾಗತಿ ಮುಂತಾದ ಸಾಧನೆಗಳ ಅವಶ್ಯಕತೆಯು ಅನಿವಾರ್ಯವಾಗಿರುತ್ತವೆಯೆಂದು ಬೇರೆ ಹೇಳಬೇಕಾಗಿಲ್ಲ ಇದರಲ್ಲಿ ಮುಖ್ಯವಾಗಿ ಸದ್ಗುರು ಭಕ್ತಿಯಿಂದ ಆತ್ಮಜ್ಞಾನ ಪ್ರಾಪ್ತಿ ಹೇಗಾಗುವದು? ಮಾಯೆಯಿಂದ ಹೇಗೆ ಮುಕ್ತನಾಗುವನು? ಸದ್ಗುರು ಹಾಗೂ ಸತ್-ಶಿಷ್ಯನ ಲಕ್ಷಣ ಮತ್ತು ಸತ್ಸಂಗತಿಯ ಅವಶ್ಯಕತೆಯನ್ನು ವಿವರಿಸಲಾಗಿವೆ. ಗುರುಗಮ್ಯವು ಹೇಗೆ ಕೈಗೆ ನಿಲುಕುವದು? ಮತ್ತು ಅದರಿಂದಾಗುವ ಲಾಭ ಸದ್ಗುರು ಮತ್ತು ಬ್ರಹ್ಮ ಇಬ್ಬರು ಒಂದೇ ಎಂಬ ಶುದ್ಧಭಾವನೆಯ ದೃಢತೆ,ಕಲಿಯುಗದ ಮಹತ್ವ ಮತ್ತು ದೇವ ದೇವತೆಗಳೂ ಕೂಡ ಕಲಿಯುಗದಲ್ಲಿ ಜನ್ಮ ತಾಳುವ ಹವ್ಯಾಸ, ನಾಲ್ಕು ಮುಕ್ತಿಗಳ ಸ್ವರೂಪ, ವೈಕುಂಠ ಕೈಲಾಸಾದಿಗಳ ವರ್ಣನೆ, ಪರಮಾರ್ಥವನ್ನು ಎಷ್ಟು ತೀವ್ರತೆಯಿಂದ ಸಾಧ್ಯಮಾಡಿಕೊಳ್ಳಲು ಬರುವವೆಂಬುದನ್ನು ಹೇಳಲಾಗಿದೆ.

ತ್ವರಿತ ಮುದ್ರಣಾಲಯ ಗಂಗಾಪೂರ ಓಣಿ,
ಕುಂಬಾರಗರಡಿ ಹತ್ತಿರ, ಗದಗ-೫೮೨ ೧೦೧